# ಕಸ್ತೂರಿ




ವ್ಯವಸ್ಥಾಪಕ ಸಂಪಾದಕ:

ಎಚ್. ಆರ್. ಬಸವರಾಜ್



ಸಂಪಾದಕ :

ಪ. ಸು. ಭಟ್ಟ



ಕಲೆ :

ಕೆ. ಬಿ. ಕುಲಕರ್ಣಿ



ಮುಖಪುಟ :

ನಾಗರ ಹಾವೆ...?



ಚಂದಾದರ

| | | |
|---|---|---|
| ೩ ವರ್ಷಕ್ಕೆ (ಅಂಚೆ ಸೇರಿ) | | ರೂ. ೩೫-೦೦ |
| ೨ ವರ್ಷ | ,, | ರೂ. ೨೫-೦೦ |
| ೧ ವರ್ಷ | ,, | ರೂ. ೧೪-೦೦ |
| ಅರ್ಧವರ್ಷ | ,, | ರೂ. ೭-೫೦ |

**KASTURI June 1979**


## ಬೆಳಕಿಂಡಿ

ಜಗತ್ತಿನಲ್ಲಿ ರೆಕ್ಕೆಗಳುಳ್ಳ ಎರಡನೆಯ ಸುಂದರ ವಸ್ತು ಎಂದರೆ ಪತಂಗ. ಮೊದಲನೆಯದು ಹಣ.

–ಅಜ್ಞಾನಿ



ಇವತ್ತು ನಾವು ಜಾಣರು, ತಜ್ಞರು ಎನ್ನುತ್ತೇವಲ್ಲ, ಅವರ ಜಾಣ್ಮೆ ಅಡಗಿರುವುದೆಲ್ಲಿ ಗೊತ್ತೆ? ನಿನ್ನೆ-ಮೊನ್ನಿನ ಜಾಣರು ಮಾಡಿದ ತಪ್ಪು ಹುಡುಕುವುದರಲ್ಲಿ. –ಜಾಕಬ್



ನಾನು ಹೆಣ್ಣಾಗಿ ಇರುವವರೆಗೂ ಈ 'ಪುರುಷ' ಜಗತ್ತಿನಲ್ಲಿ ವಾಸಿಸಲು ಹಿಂಜರಿಯುವುದಿಲ್ಲ.

–ಮರ್ಲಿನ್ ಮನ್ರೋ



ಕೆಟ್ಟ ನಕ್ಷತ್ರದಲ್ಲಿ ಯಾರೂ ಹುಟ್ಟಿಲ್ಲ, ಹುಟ್ಟುವುದಿಲ್ಲ. ನಾವು ಖಗೋಲವನ್ನು ತಪ್ಪಾಗಿ ಅರ್ಥೈಸಿಕೊಂಡಿರುವುದೇ 'ಕೆಟ್ಟ ನಕ್ಷತ್ರ'ದ ಕಲ್ಪನೆಗೆ ಕಾರಣ.

–ದಲಾಯಿ ಲಾಮಾ



## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಆನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ

# ಸಹಚಿಂತನ

ಗಣಿತಶಾಸ್ತ್ರಕ್ಕೆ ಸಂಬಂಧಿಸಿದ ಚರ್ಚೆಗಳಿಗೆ 'ಕಸ್ತೂರಿ' ವೇದಿಕೆಯಲ್ಲವೆಂದು ನನಗೆ ತಿಳಿದಿದೆ. ಆದರೆ 'ಕಸ್ತೂರಿ' ವಸಂತ ಸಂಚಿಕೆಯ 'ಸಹಚಿಂತನ' ದಲ್ಲಿ 'ಪರಿಚಿತರ ನಾಡಿನಲ್ಲೊಬ್ಬ ಅಪರಿಚಿತ'ರ ಬಗ್ಗೆ ಪ್ರೊ. ಜಿ. ಟಿ. ನಾರಾಯಣರಾಯರು ಭಾವ ಪರವಶರಾಗಿ ಬರೆದ ವಿಚಾರಗಳು ಸತ್ಯಕ್ಕೆ ದೂರ ವಾಗಿವೆ. 'ಕಸ್ತೂರಿ'ಯ ಓದುಗರು ನಿಜಾಂಶ ತಿಳಿ ದಿರಲಿ ಎಂಬೊಂದೇ ಉದ್ದೇಶದಿಂದ ನಾನಿದನ್ನು ಬರೆಯಬೇಕಾಗಿದೆ.

Mathematics Education ಸಂಶೋ-ಧನ ಪತ್ರಿಕೆಯಲ್ಲವೆಂದು ಲೇಖಕರ ಅಭಿಪ್ರಾಯ-ವಿದ್ದಂತಿದೆ. ಇದು ತಪ್ಪು. ಈ ಪತ್ರಿಕೆಯಲ್ಲಿ ಎರಡು ವಿಭಾಗಗಳಿದ್ದು ಮೊದಲನೆಯ ವಿಭಾಗದಲ್ಲಿ ಸಂಶೋಧನ ಲೇಖನಗಳೂ ಎರಡನೆಯ ವಿಭಾಗ ದಲ್ಲಿ ಗಣಿತ ಬೋಧನೆಗೆ ಸಂಬಂಧಿಸಿದ ಲೇಖನ ಗಳೂ ಪ್ರಕಟವಾಗುವವು. ಭಾರತೀಯ ಗಣಿತ ಸಂಘದ ಮಾಜಿ ಅಧ್ಯಕ್ಷ ಪ್ರೊ. ಜೆ. ಎನ್. ಕಪೂರ (ಐ. ಐ. ಟಿ. ಕಾನಪುರ), ಮಾಜಿ ಕಾರ್ಯ-ದರ್ಶಿ ಪ್ರೊ. ಡಿ. ಕೆ. ಸಿನ್ಹ (ಜಾಧವಪುರ ವಿಶ್ವವಿದ್ಯಾಲಯ) ಇವರುಗಳೂ ಸೇರಿದಂತೆ ಕೆಲವು ವಿಶ್ವವಿದ್ಯಾಲಯಗಳ ಗಣಿತ ವಿಭಾ-ಗದ ಅಧ್ಯಾಪಕರು ಇದರ ಸಂಪಾದಕ ಮಂಡಳಿಯ ಸಲಹೆಗಾರರಾಗಿರುತ್ತಾರೆ. ಈ ಪತ್ರಿಕೆ ಯಲ್ಲಿ ಪ್ರಕಟಿಸಿದ ಕೆಲವು ಲೇಖನಗಳು ಅಮೇರಿಕನ್ ಗಣಿತ ಸಂಸ್ಥೆ (A. M.S.) ಹಾಗೂ ವಿಶ್ವದ ಕೆಲವು ಗಣಿತ ಸಂಘಗಳ ಸಹಕಾರದಿಂದ ಪ್ರಕಟಿಸುವ Mathematical Reviews ವಿಮರ್ಶಾ ಪತ್ರಿಕೆಯಲ್ಲಿ ವಿಮರ್ಶಿಸಲ್ಪಟ್ಟಿವೆ. ಇದಲ್ಲದೆ ಬರ್ಲಿನ್ ಅಕೆಡೆಮಿ ಪ್ರಕಟಿಸುವ ಸೆಂಟ್ರಾ-ಲ್‌ಬ್ಲಾಟ್ ವಿಮರ್ಶಾ ಪತ್ರಿಕೆಯಲ್ಲೂ ಕೆಲವು ಲೇಖನಗಳು ವಿಮರ್ಶಿಸಲ್ಪಟ್ಟಿವೆ. ಸಂಶೋಧನ ಲೇಖನದ ಅಥವಾ ಸಂಶೋಧನ ಪತ್ರಿಕೆಯ ಖ್ಯಾತಿಯನ್ನು ವಿಶ್ವದ ಗಣಿತವಿದರು ಮೇಲೆ ಹೇಳಿದ ವಿಮರ್ಶಾ ಪತ್ರಿಕೆಗಳಲ್ಲಿ ಬರುವ ವಿಮರ್ಶೆಗಳ ನಿಟ್ಟಿನಲ್ಲಿ ಪರಿಶೀಲಿಸುವುದು ಸಂಪ್ರದಾಯ. ಪ್ರೊ. ಜಿ. ಟಿ. ನಾರಾಯಣರಾವ್–ಪ್ರೊ. ಮಾಧುರಾವ್ ಅವರ 'ಟಿಪ್ಪಣಿ'ಯನ್ನು ಪ್ರಕಟಿಸಿಲ್ಲ ವೆಂಬ ಕಾರಣಕ್ಕಾಗಿ ಯಾವುದೇ ವಿಮರ್ಶಾ ಪತ್ರಿಕೆ ಅಥವಾ ಸಂಶೋಧನಾ ಪತ್ರಿಕೆಯ ರಾಷ್ಟ್ರೀಯ ಅಂತಾರಾಷ್ಟ್ರೀಯ ಖ್ಯಾತಿ ಹಿಗ್ಗದು–ಕುಗ್ಗದು.

ಪ್ರೊ. ಜಿ. ಟಿ. ನಾರಾಯಣರಾಯರು, ಯಲ ವಿಗಿಯವರ ಫರ್ಮಾನ ಅಂತಿಮ ಪ್ರಮೇಯದ ಸಾಧನೆಯನ್ನು ವಿಮರ್ಶೆಗಾಗಿ ವಿಶ್ವಖ್ಯಾತಿವಂತ ರಾದ, ನಂಬರ್ ಥಿಯರಿ ಪಟುಗಳಾದ ಪ್ರೊ. ಲೆವೆಕ್, ಪ್ರೊ. ಎಚ್. ಎಲ್. ಮಾಂಟ್‌ಗೊಮರಿ ಯವರಿಗಾಗಲಿ, ಬೊಂಬಾಯಿಯ ಟಿ. ಐ. ಎಫ್. ಆರ್. ನ ನಂಬರ್ ಥಿಯರಿ ವಿಭಾಗದ ತಮಗೆ ಪರಿಚಿತರಾಗಿರುವ ಪ್ರೊ. ಕೆ. ರಾಮಚಂದ್ರರಿಗಾ ಗಲಿ, ಅವರ ಸಹೋದ್ಯೋಗಿಗಳಿಗಾಗಲಿ, ಕೊನೆ ಪಕ್ಷ ತಮ್ಮದೇ ವಿಶ್ವವಿದ್ಯಾಲಯದ ಗಣಿತ ವಿಭಾ ಗದ ಅಧ್ಯಾಪಕರಿಗಾಗಲಿ ಕಳುಹಿಸಿದೆ ಯಾವೊಂದೂ ಸಂಶೋಧನಾ ಲೇಖನವನ್ನು ಪ್ರಕಟಿಸದ ಪ್ರೊ. ಮಾಧುರಾಯರಿಗೆ ಕಳುಹಿಸಿ ಕೊಟ್ಟುದರ ರಹಸ್ಯ ವೇನು ?

ಮಣಿಪಾಲ —ಪ್ರೊ. ಎಚ್. ವಿ. ಕೃಷ್ಣ

ಅನಗತ್ಯ ವಿವರಗಳಿಂದಲೂ ಅನಾವಶ್ಯಕ ಹಿತೋಕ್ತಿಗಳಿಂದಲೂ ಕೂಡಿರುವ ಡಾ. ಎಚ್. ವಿ. ಕೃಷ್ಣರ ಟಿಪ್ಪಣಿ ಮುಖ್ಯ ವಿಷಯದ ಮೇಲೆ ಒಂದಿಷ್ಟೂ ಬೆಳಕು ಬೀರುವುದಿಲ್ಲ. ಆದ್ದರಿಂದ ನನ್ನ ನಿಲುವು ಮೊದಲಿನದೇ. ಆಸಕ್ತರು ಅಕ್ಟೋ ಬರ್ ೭೮ರ Scientific American ಪತ್ರಿಕೆ ಯಲ್ಲಿ ಪ್ರಕಟವಾಗಿರುವ Fermat's Last Theorem ಲೇಖನ ಗಮನಿಸಬಹುದು.

ಮೈಸೂರು ಜಿ. ಟಿ. ನಾರಾಯಣರಾವ್

[ಈ ವಿಷಯ ಇಲ್ಲಿ ಸಾಕಷ್ಟು ಚರ್ಚಿತವಾದ ಕಾರಣ ಚರ್ಚೆಯನ್ನು ಮುಕ್ತಾಯಗೊಳಿಸಲಾ ಗಿದೆ. ಸಂ.]

ಮೇ ಸಂಚಿಕೆಯಲ್ಲಿ ಪ್ರಕಟವಾದ ಡಾ. ಪ್ರಕಾಶ ಕೊಣ್ಣೂರರ 'ಯುಗಾಂಡದಲ್ಲಿ' ಲೇಖನ ವರ್ಣ ರಂಜಿತವಾಗಿತ್ತು. ಅಲ್ಲಿಯೂ ಕನ್ನಡಿಗರು ವಾಸ

ವಾಗಿದ್ದಾರೆಂದರೆ ನಮ್ಮೆಲ್ಲರಿಗೂ ಹೆಮ್ಮೆಯ ವಿಷಯವೇ.

ಪ್ರಸ್ತುತ ಲೇಖನವನ್ನು ಪ್ರಕಟಿಸಿದ ನಿಮಗೂ ಹಾಗೂ ಲೇಖಕರಿಗೊ ಧನ್ಯವಾದಗಳು.

ರಾಮದುರ್ಗ ಸುಶೀಲಾ ತೋರಗಲ್

ಮೇ ತಿಂಗಳ ವಿಶೇಷಾಂಕವನ್ನು ನಾನು ಪದೇ ಅಂಗಡಿಗೆ ಹೋಗಿ ಕೇಳುತ್ತಿದ್ದೆ. ಇನ್ನೂ ಬಂದಿಲ್ಲ ಅಂದಾಗ ತುಂಬಾ ಬೇಜಾರಾಗಿತ್ತು. 'ಕಸ್ತೂರಿ' ಕೈಸೇರಿದಾಗ ಸಂತೋಷವಾಯಿತು. ಒಂದು ಹೂವಿನ ಮರದ ಫೋಟೊ ಹಾಕಿದ್ದೀರಿ. ನನಗೆ ಬಹಳ ಹಿಡಿಸಿತು. ಆತುರಾತುರವಾಗಿ ತಿರುವಿ ಹಾಕಿದೆ. ಒಳ್ಳೆಯ ಕಥೆಗಳು ಲೇಖನಗಳು ಪದ್ಯ ಗಳೂ ಇವೆ;

ರಘುನಾಥ ಎಸ್. ಶೆಣೈ, ಸರಸೂ ಕಾಟ್ಕರ್, ಸಿದ್ಧಲಿಂಗ ಪಟ್ಟಣಶೆಟ್ಟಿ ಅವರ ಪದ್ಯಗಳು ಸೊಗಸಾಗಿವೆ. ಖುಷವಂತಸಿಂಗ್ ಅವರ ಕಥೆ ಮನೋಜ್ಞವಾಗಿದೆ. ಮುಖಪುಟ ತುಂಬಾ ಮುದ್ದಾಗಿದೆ. ಮುಂದಿನ ಸಂಚಿಕೆಗಳೆಲ್ಲಾ ಹೀಗೆಯೇ ವೈವಿಧ್ಯದಿಂದ ಕೂಡಿ ಬರಲೆಂದು ಆಶಿಸುವೆ.

ಚಿತ್ರದುರ್ಗ ಅಲಂಕಾರ್

ಆಳವಾದ ವಿಚಾರ ಮಂಥನ, ಉತ್ಕೃಷ್ಟ ನಿರೂಪಣೆ 'ಮೂರು–ಚಿಂತನೆಗಳು' ನಿಸರ್ಗ ಎಷ್ಟರ ಮಟ್ಟಿಗೆ ಮಾನವನ ಕೊರತೆ ತುಂಬಬಲ್ಲದು. ಅಥವಾ ನಿಸರ್ಗದೊಡನೆ ಒಂದಾಗಿ ಬೆರೆತು ಎಷ್ಟರ ಮಟ್ಟಿಗೆ ಶಕ್ತಿಯನ್ನು ಸಾರ್ಥಕ ಪಡಿಸಿಕೊಂಡೇವು..? ಇಲ್ಲವೇ ನಿಸರ್ಗವನ್ನೇ ಎದುರಿಸ ಹೊರಟರೆ ಆಗುವ ಪರಿಣಾಮವೇನು? ಶಕ್ತಿ, ಶಿಸ್ತು, ಶ್ರದ್ಧೆ ಇವುಗ–ಳಿಗೆ ನಾವು ಕಂಡುಕೊಳ್ಳತಕ್ಕ ಅರ್ಥವೇನು…? ಇತ್ಯಾದಿ ವಿಚಾರಗಳ ಕುರಿತು ಅರ್ಥವತ್ತಾಗಿ ಅಷ್ಟೇ ಪರಿಣಾಮಕಾರಿಯಾಗಿ ಚಿಂತಿಸಿದ್ದಾರೆ ಲೇಖಕರು.

ನಿಸರ್ಗ (ಭೂಮಿ, ಜಲ, ಅಗ್ನಿ, ವಾಯು, ಆಕಾಶ) ಇವೆಲ್ಲ ಶಕ್ತಿಯ ಮೂಲಗಳು. ಇವುಗಳಲ್ಲಿ ಒಂದು ಇಲ್ಲ ಅಂತ ಆದರೂ ಮಾನವ ಬದುಕಲಾರ, ಇಂದಿನ ವೈಜ್ಞಾನಿಕಯುಗದಲ್ಲಿ ಏನೆಲ್ಲವನ್ನೂ ಸಾಧಿಸ ಹೊರಟ ಮಾನವ ಇವುಗಳಲ್ಲಿ ಯಾವುದೊಂದನ್ನೂ ಇಲ್ಲವಾಗಿಸಲಾರ. ಇಲ್ಲವೆ ಹಾಗೆ ಮಾಡ ಹೊರಟರೆ ಆಗಬಹುದಾದ ಪರಿಣಾಮಗಳೇನುಂಬುದರ ಮೇಲೆ ಈ ಲೇಖನ ಸಾಕಷ್ಟು ಬೆಳಕು ಚೆಲ್ಲುತ್ತದೆ. ಲೇಖಕ ಕರಿಗೂ ನಿಮಗೂ ಧನ್ಯವಾದಗಳು.

ಮುಂಬಯಿ –ವಿ. ಜಿ. ಬಗ್ಗೋಣ

ಮೇ ೧೯೭೮ರ 'ಕಸ್ತೂರಿ' ವಸಂತ ಸಂಚಿಕೆ ಯಲ್ಲಿ ಪ್ರಕಟವಾದ ಶ್ರೀ ದೇವದತ್ತರ ಸ್ಮೃತಿ ಗರ್ಭದ ಆಳದಿಂದ… ಕನ್ನಡ 'ರತ್ನ' ಎಂಬ ಲೇಖನ ಹಿಡಿಸಿತು.

ಬಡತನ ಸಿರಿತನಗಳ ಬಗೆಗೆ ಗೆಳೆಯ ರತ್ನಂ ಅವರ, "ಹೋಳಿಗೆ ತುಪ್ಪ ತಿಂದರೂ ಹೊಟ್ಟೆ ತುಂಬುತ್ತೆ, ರೊಟ್ಟಿ ಚಟ್ನಿ ತಿಂದರೂ ಹೊಟ್ಟೆ ತುಂಬುತ್ತೆ, ಇದರಲ್ಲಿ ಹೆಚ್ಚುಕಡಿಮೆ ಏನು ಬಂತು?" ಎಂಬ ಮಾತುಗಳಲ್ಲೇ ಅವರಲ್ಲಿದ್ದ ಸರಳತನ ಎದ್ದು ಕಾಣುತ್ತದೆ.

"ಕನ್ನಡ ಪದಗೋಳ್ ಆಡೋದ್ನೆಲ್ಲ ನಿಲ್ಲೀಸ್ ಬುಡಬೇಕ್ ರತ್ನ ಅಂತ ಅವನು ಅಂದ್ರೆ– ದೇವ್ರು ಆದ್ರು ಏನು ? ಮಾಡ್ತೀನ್ ಔನ್ಗೆ ಖತ್ನ," ಈ ಮಾತಿನಲ್ಲಿರುವ ರೊಚ್ಚುತನ, ಕನ್ನಡದ ಅಭಿಮಾನ ಮೆಚ್ಚುವಂಥದ್ದು "ಯೆಂಡ ವೋಗ್ಲಿ, ಯೆಡ್ತಿ ವೋಗ್ಲಿ, ಎಲ್ಲ ಕೊಚ್ಕೊಂಡ್ ವೋಗ್ಲಿ, ಪರ್ಪಂಚ್ ಇರೋತನಕ ಮುಂದೆ ಕನ್ನಡ ಪದಗೋಳ್ ನುಗ್ಲಿ" ನಾಲಿಗೆ ಸೀಳಿಸಿ ಬಾಯಿ ಹೊಲಿಸಿದರೂ, ಮೂಗಿನ ಲ್ಲಾದರೂ ಕನ್ನಡ ಪದ ಹಾಡ್ತೀನೆಂಬ ರಾಜರತ್ನಂ ಇನ್ನಿಲ್ಲವೆಂದಾಗ ಸಂಕಟವಾಗುತ್ತದೆ.

ಶಿರಾಳಕೊಪ್ಪ ಬಿ. ಎಂ. ರಾಜಶೇಖರಂ






ಸಂಚಿಕೆ: ೧೦ ಕಸ್ತೂರಿ, ಜೂನ್ ೧೯೭೯ ವರ್ಷ: ೨೩

# ಯಾರ ಗೌರವಾರ್ಹ?

ಸಂಜೀವ ಲಕ್ಷ್ಮೇಶ್ವರ

ಒಮ್ಮೆ ಸಮ್ರಾಟ ಬಹಾದ್ದೂರಶಹನು ಒಂದು ಭೋಜನ ಸಮಾರಂಭವನ್ನು ಏರ್ಪಡಿಸಿ ಊರಲ್ಲಿಯ ಎಲ್ಲಾ ಮಟ್ಟದ ಜನರನ್ನು ಆಮಂತ್ರಿಸಿದ್ದನು. ಮೂರು ಬೇರೆ ಬೇರೆ ಪ್ರವೇಶ ದ್ವಾರ-ಗಳನ್ನು ರಚಿಸಲಾಗಿದ್ದಿತು. ಅವುಗಳಲ್ಲಿಯ ಮೊದಲ-ನೆಯ ಪ್ರವೇಶದ್ವಾರದಲ್ಲಿ ಗಣ್ಯ ಅತಿಥಿಗಳನ್ನು ಸ್ವಾಗತಿಸಲು ಸ್ವತಃ ಸಮ್ರಾಟನೇ ನಿಂತಿದ್ದನು. ಎರಡನೇ ಪ್ರವೇಶದ್ವಾರದಲ್ಲಿ ಮಧ್ಯಮ ವರ್ಗದ ಅತಿಥಿಗಳನ್ನು ಸ್ವಾಗತಿಸಲು ರಾಜನ ಹಿರಿಯ ಅಧಿಕಾರಿಗಳು ನಿಂತಿದ್ದರು. ಮೂರನೆಯ ದ್ವಾರದಲ್ಲಿ ಕೆಲ ಸಿಪಾಯಿಗಳು ನಿಂತಿದ್ದರು.

ಮಹಾಕವಿ ಮಿರ್ಝಾ ಗಾಲಿಬರಿಗೂ ಭೋಜನದ ಆಮಂತ್ರಣ ಹೋಗಿದ್ದಿತು. ಸರ್ವ ಸಾಧಾರಣ ವೇಷಧಾರಿಗಳಾದ ಮಿರ್ಝಾ ಗಾಲಿಬ ಅವರು ಸಮ್ರಾಟನು ಸ್ವಾಗತಕ್ಕೆ ನಿಂತ ಪ್ರವೇಶದ್ವಾರದ ಕಡೆಗೆ ಹೊರಟೊಡನೆ ಸಿಪಾಯಿಗಳು ದೂರದಿಂದಲೇ ಅವರನ್ನು ತಡೆದರು. ಮಧ್ಯಮ ವರ್ಗದವರಿಗಾಗಿ ಇದ್ದ ಎರಡನೆಯ ಪ್ರವೇಶದ್ವಾರವನ್ನು ಸಮೀಪಿಸುತ್ತಲೇ, ಅಲ್ಲಿದ್ದ ಅಧಿಕಾರಿಗಳು ಇವರತ್ತ ಕಿಡಿಗಣ್ಣಿನಿಂದ ನೋಡಹತ್ತಿದ್ದನ್ನು ಕಂಡು ಮಿರ್ಝಾ-ಗಾಲಿಬರು ತಾವು ಅಲ್ಲಿಯ ಪ್ರವೇಶಕ್ಕೆ ಅಪಾತ್ರರೆಂದು ತಿಳಿದುಕೊಂಡು ಮೂರನೆಯ ಪ್ರವೇಶದಿಂದ ನೂಕುನುಗ್ಗಲಿನಲ್ಲಿ ಒಳಸೇರಿದರು.

ಮರುದಿನವೂ ಈ ಭೋಜನ ಕಾರ್ಯಕ್ರಮ

ವಿದ್ದಿತು. ಅಂದು ಮಿರ್ಝಾ ಗಾಲಿಬರು ಝಗ-ಝಗಿಸುವ ದುಬಾರಿಯಾದ ವೇಷ ಧರಿಸಿ ಹೋದರು. ಅವರನ್ನು ದೂರದಿಂದಲೇ ಗುರುತಿಸಿ ಸಮ್ರಾಟ ಬಹಾದೂರ ಶಹನು, "ಬರಬೇಕು, ಬರಬೇಕು ಮಿರ್ಝಾ ಸಾಹೇಬರು" ಎಂದು ಆದರದಿಂದ ಸ್ವಾಗತಿಸಿದನು. ಮಿರ್ಝಾ ಅವರು ಒಳಗೆ ಹೋಗಿ ತಮ್ಮ ಆಸನದಲ್ಲಿ ಕುಳಿತರು. ಅತಿಥಿಗಳು ಭೋಜನಕ್ಕೆ ಆರಂಭಿಸಿದೊಡನೆ ಮಿರ್ಝಾ ಗಾಲಿಬರು ಚಮಚದಿಂದ ಸಿಹಿ ಪೇಯವನ್ನು ತಮ್ಮ ಬೆಲೆ ಬಾಳುವ ಶೇರ್ವಾನಿಯ ಮೇಲೆ ಸಿಂಪಡಿಸಹತ್ತಿದರು. ಅದನ್ನು ನೋಡಿದ ಸಮ್ರಾಟನು, "ಏನು ಮಿರ್ಝಾ ಸಾಹೇಬರೆ, ಏನು ನಡೆಸಿರುವಿರಿ?" ಎಂದು ಕೇಳಿದನು.

"ಬಡವರ ದೊರೆಯೆ. ನಾನು ಯೋಗ್ಯವಾದದ್ದನ್ನೇ ಮಾಡುತ್ತಿದ್ದೇನೆ. ಯಾರ ಮೂಲಕ ನನಗೆ ಇಂದು ಈ ಗೌರವ ದೊರೆಯಿತೋ ಅವರಿಗೆ ಮೊದಲು ತಿನ್ನಲು ಕೊಡದಿದ್ದರೆ ನಾನು ಕೃತಘ್ನನಾದೇನು. ಮಿರ್ಝಾ ಗಲಿಬ ನಿನ್ನೆ ಕೂಡ ಭೋಜನ ಸಮಾರಂಭಕ್ಕೆ ಬಂದಿದ್ದ. ಆದರೆ ಈ ಭಾರೀ ಬಟ್ಟೆಗಳು ಅವನಿಗೆ ಇಂದು ಈ ಗೌರವವನ್ನು ಕೊಡಿಸುವೆ," ಎಂದರು ಮಿರ್ಝಾ ಗಾಲಿಬ.



# ಪರಹಿತಕಾಗಿ ನರಕಕ್ಕೂ ಹೋದೇನು

ರಾಮಾನುಜರು ಮೋಕ್ಷ ಪ್ರಾಪ್ತಿಗಾಗಿ ಗುರುಗಳ ಬಳಿಗೆ ಮಾರ್ಗದರ್ಶನ ಕೋರಿದರು. ಗುರುಗಳು ಅವರಿಗೆ ಮುಕ್ತಿಮಂತ್ರವನ್ನು ಹೇಳಿಕೊಟ್ಟು, ಅದನ್ನು ಗುಪ್ತವಾಗಿ ಜಪಿಸಬೇಕು, ಇತರರಿಗೆ ಹೇಳಕೂಡದು ಎಂದು ಕಟ್ಟಪ್ಪಣೆ ವಿಧಿಸಿದರು.

ಆದರೆ ರಾಮಾನುಜರು ಮುಕ್ತಿ ಮಂತ್ರವನ್ನು ದೊಡ್ಡ ಧ್ವನಿಯಲ್ಲಿ ಜಪಿಸಹತ್ತಿದರು. ಇಷ್ಟೇ ಅಲ್ಲದೆ ಯಾರಿಗೆ ಬೇಕೆಂದವರಿಗೆ ಹೇಳಿಕೊಡಲೂ ಸಿದ್ಧರೆಂದು ಹೇಳಹತ್ತಿದರು. ಅನೇಕರಿಗೆ ಮುಕ್ತಿ ಮಂತ್ರವನ್ನು ದಾನಮಾಡಿಯೂ ಆಯಿತು. ತಮ್ಮ ಆಜ್ಞೆಯನ್ನು ರಾಮಾನುಜರು ಮೀರಿದ್ದು ಗುರುಗಳಿಗೆ ತಿಳಿಯಿತು. ಕೂಡಲೇ ತಮ್ಮನ್ನು ಕಾಣಬೇಕೆಂದು ರಾಮಾನುಜರಿಗೆ ಹೇಳಿಕಳಿಸಿದರು.

"ಮುಕ್ತಿಮಂತ್ರವನ್ನು ಗುಪ್ತವಾಗಿಡಬೇಕೆಂದೂ ಇತರರಿಗೆ ಹೇಳಕೂಡದೆಂದೂ ಹೇಳಿದ್ದೆ. ನನ್ನ ಆಜ್ಞೆಯನ್ನು ನೀನು ಉಲ್ಲಂಘಿಸಿರುವಿ," ಎಂದರವರು ಕೋಪದಿಂದ.

ವಿನೀತರಾಗಿ ರಾಮಾನುಜರೆಂದರು: "ಕ್ಷಮೆ ಇರಲಿ, ಗುರುಗಳೆ."

"ಮೂರ್ಖ, ಕ್ಷಮೆ ಇರಲಿ ಎಂದರೇನು? ಗುರುಗಳ ಆಜ್ಞೆ ಮೀರಿದ್ದಕ್ಕಾಗಿ ನೀನು ನರಕಕ್ಕೆ ಹೋಗಬೇಕಾದೀತು; ಗೊತ್ತಿದೆಯೋ?" ಗುರುಗಳು ಗುಡುಗಿದರು.

ಆದರಿಂದ ವಿಚಲಿತರಾಗದೆ ವಿನಮ್ರ ಭಾವದಿಂದ ರಾಮಾನುಜರು ಕೇಳಿದರು, "ಗುರುಗಳೇ, ಯಾರು ನನ್ನಿಂದ ಗುಪ್ತಮಂತ್ರ ಕಲಿತಿರುವರೋ ಅವರು ಕೂಡ ನರಕಕ್ಕೆ ಹೋಗುವರೇ?"

"ಅವರೇಕೆ ಹೋಗಬೇಕು? ನೀನು ಹೋಗ-ಬೇಕಾದೀತು," ಎಂದರು ಗುರುಗಳು.

ಗುರುಗಳ ಉತ್ತರದಿಂದ ರಾಮಾನುಜರು ಆನಂದತುಂದಿಲರಾದರು. "ಗುರುಗಳೇ, ಇತರರಿಗೆ ಒಳ್ಳೆಯದೇ ಆಗುತ್ತಿದ್ದರೆ ನರಕಕ್ಕೆ ಹೋಗಲೂ ನಾನು ಸಿದ್ಧ," ಎಂದು ತಲೆಬಾಗಿ ನುಡಿದರು.

ರಾಮಾನುಜರ ಮಾತು ಕೇಳಿ ಗುರುಗಳ ಕೋಪ ಜರ್ರನೇ ಇಳಿಯಿತು. ಅವರ ಪರೋಪಕಾರ ಬುದ್ಧಿಗೆ ಪ್ರಸನ್ನರಾಗಿ ಗುರುಗಳು ರಾಮಾನುಜರನ್ನು ಆಶೀರ್ವದಿಸಿ ಕಳಿಸಿದರು. ●



# ಗೂಡಿನಲಿ.... ಬಾನಾಡಿ....

ನಾವು ಕಟ್ಟಿಕೊಳ್ಳುವ ಮನೆಗೆ ಮೂಲವಾಗಿ ಕಲ್ಪನೆ ನೀಡಿದ್ದು ಪ್ರಾಣಿಗಳು ವಾಸಿಸುವ ಗಿಡಮರಗಳ ಪೊಟರೆಗಳು ಮತ್ತು ಗುಹೆಗಳು ಹಾಗೂ ಹಕ್ಕಿಗೂಡುಗಳು. ಇವೆಲ್ಲದರ ಹಿಂದಿರುವ ಉದ್ದೇಶ ರಕ್ಷಣೆ. 'ನೆರಳಿಗೊಂದು ಮನೆ' ಎಂದು ನಾವನ್ನುತ್ತೇವಷ್ಟೆ. ನಮ್ಮವರೊಂದಿಗೆ ಈ ನೆರಳಲ್ಲಿರುತ್ತೇವಷ್ಟೇ. ಆದರೆ ಹಕ್ಕಿಗಳಿಗೆ ತಮಗಿಂತ ತಮ್ಮ ಮೊಟ್ಟೆ ಅಥವಾ ಮರಿಗಳ ಕಾಳಜಿ ಹೆಚ್ಚು. ಅಂತೆಯೇ ಸುರಕ್ಷಿತ ಪ್ರದೇಶದಲ್ಲಿ, ಯಾರಿಗೂ ಅತಿಕ್ರಮಿಸಲು ಅಶಕ್ಯವೆನಿಸುವ ಸ್ಥಳಗಳಲ್ಲಿ ಹಕ್ಕಿಗಳು ಗೂಡುಕಟ್ಟುತ್ತವೆ; ನಾವು ನಿರುಪಯೋಗಿ ಎಂದು ಕರೆಯುವ ಕಸ–ಕಡ್ಡಿ, ಹುಲ್ಲು–ಎಲೆ ಮುಂತಾದವುಗಳಿಂದ. ಮುಳ್ಳು–ಕಂಟಿಗಳನ್ನು ಕೂಡ ಭದ್ರತೆಯ ಬೇಲಿಗಾಗಿ ಉಪಯೋಗಿಸುವ ಜಾಣ್ಮೆ ಹಕ್ಕಗಳಿಗಿದೆ.

ಹದ್ದು–ಕಾಗೆಗಳು ಮರಗಳ ಕೊಂಬೆಗಳಲ್ಲಿ ಆಯಕಟ್ಟಿನ ಸ್ಥಳವನ್ನಾಯ್ದು ಭದ್ರಕೋಟೆ ನಿರ್ಮಿಸಿಕೊಂಡರೆ, ಗುಬ್ಬಿ ಪಾರಿವಾಳಗಳಂಥ ಅಶಕ್ತ ಪಕ್ಷಿಗಳು ಕಟ್ಟಡಗಳ ಬಿರುಕು, ಕಂಬಗಳ ಮೇಲ್ಭಾಗ, ಬೊಂಬಿನ ಪೊಳ್ಳು ಮುಂತಾದೆಡೆ ಗೂಡು ಕಟ್ಟುತ್ತವೆ. ಕೊಕ್ಕರೆ, ಹಂಸಗಳಂಥ ಜಲಪಕ್ಷಿಗಳು ಜೊಂಡಿನಲ್ಲಿ ಮನೆಮಾಡಿಕೊಂಡು, ಮೊಟ್ಟೆ-ಮರಿಗಳನ್ನಿಟ್ಟು ಕಾಯುತ್ತವೆ.

ಇನ್ನು ಕೆಲ ಹಕ್ಕಿಗಳು ನೆಲಕೊರೆದು ಆಳದಲ್ಲಿ ಮನೆಮಾಡಿಕೊಂಡು ಮೊಟ್ಟೆ ಇಟ್ಟು, ಹೊರ ಬಂದು ಬಾಗಿಲು ಭದ್ರಪಡಿಸಿ ಹಾರಿಹೋಗುತ್ತವೆ. ಮುಳ್ಳು–ಕಂಟಿಗಳನ್ನು ಕೊಕ್ಕಿನಲ್ಲಿ ಕಚ್ಚಿತಂದು, ಬಲವಾದ ಗಾಳಿಗೂ ಬಾಗದ ಹಾಗೆ ಬಂಡೆಗಳ ಬಿರುಕಿನಲ್ಲಿ ಕಟ್ಟಿ ನಿಲ್ಲಿಸಿ ಸಾಮಾನ್ಯ ದೃಷ್ಟಿಗೆ ಕಾಣದಂತೆ ಬಾಗಿಲು ನಿರ್ಮಿಸುವ ಚಾಣಾಕ್ಷ ಹಕ್ಕಿಗಳೂ ಇವೆ. ನೀರಿನಾಶ್ರಯ ಇರುವಲ್ಲಿ ಬೆಳೆದ ಗಿಡಗಳ ತುತ್ತತುದಿಗೆ ನೇತುಕೊಂಡಿರುವ ಗೂಡುಗಳನ್ನು ನೋಡುತ್ತೇವಷ್ಟೇ. ಅವುಗಳನ್ನು ಕಟ್ಟಿರುವ ಹಕ್ಕಿಯ ಮುಂದಾಲೋಚನೆಯ ಬಗ್ಗೆ ಒಂದಷ್ಟು ವಿಚಾರ ಮಾಡಬೇಕು. ಯಾವ ಶತ್ರುವೂ ಅಲ್ಲಿ ಬರಲಾರದು.

ಗೂಡುಕಟ್ಟುವುದರಲ್ಲಿ ವೈಶಿಷ್ಟ್ಯ ಕಾಯ್ದುಕೊಂಡು ರಹಸ್ಯ ಜೀವನ ನಡೆಸುವ ಪಕ್ಷಿ ಗೀಜಗ. ಅದು ಸಾಮಾನ್ಯವಾಗಿ ಹತ್ತಾರು ಗೂಡು ಕಟ್ಟುತ್ತದೆ. ಕಟ್ಟಿದ ಮೇಲೆ ತನ್ನ ವಾಸವನ್ನು ಮೇಲಿಂದ ಮೇಲೆ ಬದಲಾಯಿಸತೊಡಗುತ್ತದೆ.

ಸಾಮಾನ್ಯವಾಗಿ ಗೂಡುಗಳು ವೃತ್ತಾಕಾರವು. ಬಟ್ಟಲಿನಹಾಗೆ ಇರುವದುಂಟು. ಮಣ್ಣು–ಜೇಡಿ

ಮಣ್ಣು ಮುಂತಾದ ಜಿಗಟು ವಸ್ತುವಿನಿಂದ 'ಪಾಯ ಹಾಕಿ' ನಂತರ ಕಡ್ಡಿ ಹುಲ್ಲು ಮುಳ್ಳು ಎಲೆಗಳನ್ನು ಉಪಯೋಗಿಸಿ ಗೂಡು ಕಟ್ಟಿದ್ದನ್ನು ಕಾಣಬಹುದಾಗಿದೆ. ಮೇಲ್ನೋಟಕ್ಕೆ ಚಿಕ್ಕದಾಗಿ ಕಂಡರೂ ಒಳಗೆ ಆಳವಾಗಿರುವ ಗೂಡುಗಳೂ ಇವೆ. ಬಾವಿ, ಹಾಳು ಬಾವಿ, ಪಾಳುದೇಗುಲ. ಬಿದ್ದ ಮನೆಗಳಲ್ಲಿ ನಾವು ನೂರಾರು ಗೂಡುಗಳನ್ನು ಕಾಣಬಹುದು. ಇಲ್ಲಿ ಸಾಮಾನ್ಯವಾಗಿ ವಾಸಿಸುವುದೆಂದರೆ ಗುಬ್ಬಿಗಳು.

ಹೆಣ್ಣು ಮೊಟ್ಟೆ ಇಡುವ ಕಾಲ ಸನ್ನಿಹಿತ ಎನಿಸಿದಾಗ ಗಂಡು ಗೂಡಿಗಾಗಿ ಸಾಮಗ್ರಿಗಳನ್ನು ಸಂಗ್ರಹಿಸಿದರೆ, ಹೆಣ್ಣು ಗೂಡಿಗಾಗಿ ಯೋಗ್ಯ ಜಾಗೆಯನ್ನು ಆಯುತ್ತದೆ. ಒಮ್ಮೊಮ್ಮೆ ಎರಡೂ ಸೇರಿ ಗೂಡು ಕಟ್ಟುವ ದೃಶ್ಯ ನಮಗೆ ಅಚ್ಚರಿ ತರಿಸುವಂಥದ್ದು. ಹೀಗೆ ಗಂಡು ಹೆಣ್ಣುಗಳೆರಡೂ ಸೇರಿ ಗೂಡು ಕಟ್ಟುವ ಹಕ್ಕಿಗಳೆಂದರೆ ಗುಬ್ಬಚ್ಚಿ, ಕಾಗೆ, ಕಾಡು ಪಾರಿವಾಳ ಮತ್ತು ಹದ್ದು.

ಮರುಕುಟಿಗನ ಗೂಡುನಿರ್ಮಾಣದ ವೈಖರಿಯೇ ಬೇರೆ. ಪೊಟರುಗಳು ಸಿಗದಿದ್ದರೆ ಮರವನ್ನು ಕೊರೆದು ಪೊಟರೆ ಮಾಡುವ ಈ ಹಕ್ಕಿ ಅದಕ್ಕಾಗಿ ದಿನವಿಡೀ ಆಹಾರದ ಪರಿವೆಯಿಲ್ಲದೇ ಕೆಲಸ ಮಾಡುತ್ತದೆ. ತೀರ ಆಳಕ್ಕೆ ಕೊರೆದು ಅಲ್ಲಿ ಮೊಟ್ಟೆ ಇಡುತ್ತದೆ.

ಹಕ್ಕಿಗಳು ಗೂಡುಗಳನ್ನು ಹೆಣೆಯುವುದರಲ್ಲಿ–ಕಾಯ್ದುಕೊಳ್ಳುವ ನಯ–ನಾಜೂಕು ಅಚ್ಚುಕಟ್ಟನದು. ನಾರು, ಕೂದಲು, ಹತ್ತಿ, ಉಣ್ಣೆ ಮುಂತಾದ ವಸ್ತುಗಳನ್ನು ಆಯ್ದು ತಂದು ಮೆತ್ತಗೆ ಹಾಸಿ ಮೊಟ್ಟೆ ಇಡುತ್ತವೆ.

ಇನ್ನು ಕೆಲ ಹಕ್ಕಿಗಳು ಗೂಡಿನೊಳಕ್ಕೆ ಬೆಳಕಿಗಾಗಿ ಮಿಣುಕು ಹುಳದೀಪದ ಹುಳಗಳನ್ನೂ ತಂದು ಸಾಕುತ್ತವಂತೆ.

ಗೂಡುಗಳು ಐದಂಗುಲದಿಂದ ಹತ್ತು ಅಡಿಗಳವರೆಗೂ ಬೇರೆ ಬೇರೆ ಆಕಾರ ಮತ್ತು ಆಳತೆಗಳಲ್ಲಿ ಕಟ್ಟಲ್ಪಡುತ್ತವೆ. ಇದು ಆಯಾ ಹಕ್ಕಿಯ ಸಾಮರ್ಥ್ಯವನ್ನವಲಂಬಿಸಿದೆ. ಮೊಟ್ಟೆಗಳನ್ನಿಟ್ಟು ಮೇಲೆ ಅವುಗಳಿಗೆ ಕಾವು ಕೊಡುವ ಉದ್ದೇಶದಿಂದ ಹಕ್ಕಿಗಳು ಹೆಚ್ಚು ಹುಲ್ಲು ಶೇಖರಿಸುತ್ತವೆ. ಇದರಿಂದ ಮೊಟ್ಟೆಗಳಿಗೆ ಧಕ್ಕೆ ತಗಲದ ಹಾಗೆಯೂ, ಹೆಚ್ಚು ಕಾವು ದೊರಕುವ ಹಾಗೆಯೂ ಮಾಡುತ್ತವೆ.

ಗೂಡಿನಲ್ಲಿರುವ ಖಾನಾಡಿಗಳು ಬಲು ಸ್ವಾಭಿಮಾನಿಗಳು. ಒಂದು ವೇಳೆ ತಮ್ಮ ಗೂಡಿಗೆ ಅನ್ಯರಿಂದ ಆತಂಕವಾಗಲಿ, ಅನಧಿಕೃತ ಪ್ರವೇಶವಾಗಲೀ ಆಗಿಬಿಟ್ಟರೆ ಆ ಗೂಡನ್ನು ತ್ಯಜಿಸಿ ಬಿಡುತ್ತವೆ. ಮತ್ತೆ ಹೊಸ ಗೂಡು ಕಟ್ಟಲು ಸೂಕ್ತ ಸ್ಥಳ ಆಯ್ದುಕೊಳ್ಳುತ್ತವೆ. ಮೊಟ್ಟೆಗಳ ಆಶೆಗಾಗಿ ಬೇಟೆಗಾರರು, ಹಾವುಗಳು ಗೂಡುಗಳನ್ನು ಮುತ್ತುವುದುಂಟು. ಅಥವಾ ತಮ್ಮ ಮನೆ ಅಂದಗೊಳಿಸಲು ಸೃಷ್ಟಿ ಸೌಂದರ್ಯ ಪ್ರೇಮಿಗಳು ಗೂಡುಗಳನ್ನು ಕಿತ್ತು ತಮ್ಮ ಮನೆಗಳಲ್ಲಿ ನೇತು ಹಾಕುವುದುಂಟು. ಆದರೆ ಹೀಗೆ ಕೈಗೆ ಸಿಕ್ಕ ಗೂಡುಗಳು 'ನಿರ್ವಾಸಿತ' ಎಂಬುದು ಅವರ ಗಮನಕ್ಕೆ ಬರುವುದು ಬಹಳ ತಡವಾಗಿ. ಅವರು ಗೂಡಿಗೆ ಕೈ ಹಚ್ಚುವ ಮೊದಲೇ ಹಕ್ಕಿ ಬೇರೆಡೆ ಹಾರಿ ಹೋಗಿರುತ್ತದೆ; ಈ ಗೂಡನ್ನು ತ್ಯಜಿಸಿ. ●

**ಚಿತ್ರಗಳು :**

೧ ಆಗ್ನೇಯ ಆಸ್ಟ್ರೇಲಿಯದ ಹಳದಿ ಬಾಲದ ಡೈಮಂಡ್ ಬರ್ಡ್ ಕಟ್ಟಿಕೊಂಡ ಗೂಡು.

೨ ಭಾರತ, ಇಂಡೋಚೀನ ಮತ್ತು ಮಲಯಾಗಳಲ್ಲಿನ ಬಾಯಾ ವೀವರ್ ಪಕ್ಷಿಯ ಪೊಟರೆ ಗೂಡು.

೩ ಗಯಾನಾ ಮತ್ತು ಪೆರುವಿನ ಹಕ್ಕಿ ಗ್ರೀನ್ ಅರ್ಪೆಂಡ್ರೇಲಾ ಎಲೆಯ ಮರೆಯಲ್ಲಿ ಕಟ್ಟಿಕೊಂಡ ಚಿಕ್ಕ ಗೂಡು.

೪ ಎರಡು ದ್ವಾರವಿರುವ ಬಿಳಿ ತಲೆಯ ಗುಬ್ಬಿಯ ಗೂಡು.

೫ ಲೋಟದಾಕಾರದ ಈ ಗೂಡು ಕ್ರೆಸ್ಟ್ ಬರ್ಡ್ ಹಕ್ಕಿಯದು.

೬ ಕಪ್ಪುಕೊಕ್ಕಿನ ಕಂದು ಬಣ್ಣದ ಹಕ್ಕಿ ರೀಡ್-ವ್ಯಾಬ್ಲರ್‌ದ ನೇತಾಡುವ ಗೂಡು.

೭ ಕಪ್ಪು ತಲೆಯ ಈ ಹಕ್ಕಿಯ ಎರಡು ಬಾಗಿಲಿನ ಗೂಡು.

೮ ಪಶ್ಚಿಮ ನ್ಯೂಗಿನಿಯ ಕ್ರೆಸ್ಟ್‌ಲೆಸ ಗಾರ್ಡ್ನರ್‌ದ ಗುಡಿಸಲುಗೂಡು.



ಫ್ರೆಂಚ್ ಕಥೆ

# ಶವಸಂಸ್ಕಾರ

ಮೂಲ: **ಗಾಯ್ ದ ಮೊಪಾಸಾ** ಕನ್ನಡಕ್ಕೆ: **ಶಿವಾಜಿ ನಾಡಿಗೇರ**

ಕಳೆದ ಸೋಮವಾರ ಎಟ್ರೆಟಾಟ್‌ನಲ್ಲಿ ಬಡೋದಾ ಮಹಾರಾಜರ ಆಪ್ತಬಂಧು ಬಾಪೂಸಾಹೇಬ ಖಂಡೇರಾವ್ ಘಾಟಗೆ ಹಠಾತ್ತನೆ ಸತ್ತುಬಿಟ್ಟ. ಬಡೋದಾ ಭಾರತದ ಮುಂಬಯಿ ಇಲಾಖೆಯ ಗುಜರಾತ ವಿಭಾಗದಲ್ಲಿರುವ ಒಂದು ದೇಶೀ ಸಂಸ್ಥಾನ.

ಈಗ ಮೂರು ವಾರಗಳ ಹಿಂದೆ ಸುಮಾರು ಹತ್ತು ಜನ ತರುಣ ಭಾರತೀಯರ ಒಂದು ಗುಂಪು ಬೀದಿಗಳಲ್ಲಿ ಅತ್ತಿತ್ತ ಓಡಾಡುವುದನ್ನು ಎಲ್ಲರೂ ಗಮನಿಸಿದ್ದರು. ಕುಳ್ಳರಾದ ಇವರು ದುರ್ಬಲರಂತೆ ತೋರುತ್ತಿದ್ದುದಲ್ಲದೆ ಇವರ ಮೈ ಬಣ್ಣವಂತೂ ಪೂರ್ತಿ ಕಪ್ಪು. ಬೂದು ಬಣ್ಣದ ಸೂಟುಗಳನ್ನು ಧರಿಸುತ್ತಿದ್ದ ಇವರ ತಲೆಯ ಮೇಲೆ ಅಗಲ ಚುಂಚಿನ ನೂಲಿನ ಟೊಪ್ಪಿಗೆಗಳಿರುತ್ತಿದ್ದುವು. ಪ್ರಮುಖ ಪಾಶ್ಚಾತ್ಯ ದೇಶಗಳ ಸೈನಿಕ ವ್ಯವಸ್ಥೆಗಳನ್ನು ಅಭ್ಯಸಿಸಲು ಯುರೋಪಿಗೆ ಬಂದ ಮೇಲುವರ್ಗದ ರಾಜವಂಶಜರಿವರು. ಅವರಲ್ಲಿ ಮೂವರು ರಾಜಕುಮಾರರು, ಉಚ್ಚ ಕುಲದ ಮಿತ್ರನೊಬ್ಬ, ಓರ್ವ ದುಭಾಷಿ ಮತ್ತು ಮೂವರು ಸೇವಕರಿದ್ದರು.

ತೀರಿಕೊಂಡವನು ಶಿಷ್ಟಮಂಡಳದ ನಾಯಕ. ಅವನ ಅಳಿಯನೂ ಬಡೋದೆ ಮಹಾರಾಜರ ಬಂಧುವೂ ಆಗಿದ್ದ ೪೨ ವರ್ಷದ ಸಂಪತ್‌ರಾವ್ ಕೇಶವರಾವ್ ಗಾಯಕವಾಡ ತನ್ನ ಮಾವನ ಜೊತೆಗೆ ಈ ಶಿಷ್ಟಮಂಡಳದಲ್ಲಿದ್ದನು. ಶಿಷ್ಟಮಂಡಳದಲ್ಲಿ ಇವರಲ್ಲದೆ ಗಣಪತರಾವ್ ಗಾಯಕವಾಡ, ವಾಸುದೇವ ಸಮರ್ಥ ಎಂಬುವವರೂ ಮರಾಠಾ ಸೇವಕ ವರ್ಗವೂ ಸೇರಿತ್ತು.

ಬಾಪೂಸಾಹೇಬನಿಗೆ ದೇಶ ಬಿಟ್ಟು ಹೊರಡುವಾಗಲೇ ದುಃಖದಿಂದ ಕಂಠ ತುಂಬಿ ಬಂದಿತ್ತು. "ನಾನು ಮಾತೃಭೂಮಿಗೆ ಮರಳಿ ಬರುವುದಿಲ್ಲ" ಎಂದು ಅವನು ಶೋಕಿಸಿದ. ಆತ ಯುರೋಪಿಗೆ ಹೋಗದಿರಲು ಬಯಸಿದ. ಆದರೆ ಮಹಾರಾಜರ ಆಜ್ಞೆಯನ್ನು ಮನ್ನಿಸದಿರುವ ಎದೆಗಾರಿಕೆ ಯಾರಿಗೆ? ಆತ ತಲೆಬಾಗಿ ಹೊರಡಲೇಬೇಕಾಯಿತು.

ಬೇಸಿಗೆಯ ಕೊನೆಯ ವಾರಗಳನ್ನು ಕಳೆಯಲು ಇವರು ಫ್ರಾನ್ಸಿನ ಸಮುದ್ರ ತೀರದ ಮೇಲಿದ್ದ



ಎಟ್ರೆಟಾಟ್‌ಗೆ ಬಂದರು. ನಿತ್ಯ ಬೆಳಿಗ್ಗೆ ಅವರು ಸಮುದ್ರಸ್ನಾನ ಮಾಡುವಾಗ ಊರ ಜನರಲ್ಲಿ ಕುತೂಹಲಿಗಳನೇಕರು ನಿಂತು ನೋಡುತ್ತಿದ್ದುದುಂಟು.

ಐದಾರು ದಿನಗಳ ಹಿಂದೆ ಬಾಪೂಸಾಹೇಬನ ಪಸಡುಗಳಲ್ಲಿ ನೋವುಂಟಾಯಿತು. ಬಾವು ಗಂಟಲಿಗೂ ಹಬ್ಬಿ ಅಲ್ಲಿ ಹುಣ್ಣುಗಳಾದುವು. ಆ ಭಾಗ ಕೊಳೆಯತೊಡಗಿ ಜ್ವರ ಬರಲು ಈ ದುರ್ದೈವಿ ರೋಗಿಯು ಬದುಕಲಾರ ಎಂದು ಡಾಕ್ಟರರು ಅವನ ತರುಣ ಮಿತ್ರನಿಗೆ ಹೇಳಿದರು. ತುಸು ಹೊತ್ತಿನಲ್ಲೇ ಅವನ ದೇಹಸ್ಥಿತಿ ಇನ್ನಷ್ಟು ಹದಗೆಟ್ಟು ಸಾವು ಇನ್ನೂ ಅವನನ್ನು ಅಪ್ಪುತ್ತಿರುವಂತೆಯೇ ಹಾಸಿಗೆಯಿಂದ ಅವನ ದೇಹವನ್ನು ಎತ್ತಿ ಅವನ ಮಿತ್ರರು ಅವನನ್ನು ಸಾವಧಾನವಾಗಿ ನೆಲಕ್ಕೆ ಹಾಕಿದರು. ಬ್ರಹ್ಮಲಿಖಿತ ನಿಯಮಗಳಂತೆ ಮನುಷ್ಯನು ಭೂಮಿಯ ಮೇಲೆ ಮಲಗಿಯೇ ಕೊನೆಯುಸಿರು ಎಳೆಯಬೇಕಂತೆ.

ಬಾಪೂಸಾಹೇಬನ ಮಿತ್ರರು ಆ ಊರಿನ ಮೇಯರರಿಗೆ ಅವನ ಕಳೇವರಕ್ಕೆ ಹಿಂದು ಧಾರ್ಮಿಕ ವಿಧಾನದ ಪ್ರಕಾರ ಸಮುದ್ರ ದಂಡೆಯ ಮೇಲೆ ಅಗ್ನಿಸಂಸ್ಕಾರ ಮಾಡಲು ಅಪ್ಪಣೆ ಕೊಡಬೇಕೆಂದು ಬಿನ್ನವಿಸಿದರು. ಮೇಯರ್ ತಟ್ಟನೆ ಒಪ್ಪಿಗೆ ಕೊಡಲಿಲ್ಲ. ಆದರೂ ಅವರು ತಮ್ಮ ವರಿಷ್ಠಾಧಿಕಾರಿಗೆ ತಂತಿ ಕಳಿಸಿ ವಿಷಯ ತಿಳಿಸಿದರಲ್ಲದೆ ಅವರಿಂದ ಉತ್ತರ ಬಾರದಿದ್ದಲ್ಲಿ ತಾವು ಶವಸಂಸ್ಕಾರಕ್ಕೆ ಅಪ್ಪಣೆ ಕೊಡುವೆನೆಂದೂ ಅವರಿಗೆ ತಿಳಿಸಿದರು. ಮೃತರ ದೇಹಕ್ಕೆ ಅಗ್ನಿ ಸಂಸ್ಕಾರ ಮಾಡುವುದು ಫ್ರಾನ್ಸಿನಲ್ಲಿ ತೀರ ಅಪರಿಚಿತ ವಿಷಯ. ಅದಕ್ಕೆ ಒಪ್ಪಿಗೆಯಿತ್ತರೆ ಜನರು ಏನೆನ್ನುವರೊ ಎಂದು ಭಯ. ಮೇಲಿನವರಿಂದ ಉತ್ತರ ಬರಲಿಲ್ಲ. ಈ ಭಾರತೀಯನು ಸಾಂಸರ್ಗಿಕ ರೋಗವೊಂದರಿಂದ ಸತ್ತ



ಕಾರಣ ಮಧ್ಯರಾತ್ರಿ ಸಮುದ್ರ ತೀರದಲ್ಲಿ ಅವನ ಕಳೇವರಕ್ಕೆ ಅಗ್ನಿಸಂಸ್ಕಾರ ಮಾಡಬೇಕು ಎಂದು ಮೇಯರ್ ಸಾಹೇಬರು ಆಜ್ಞೆ ಮಾಡಿದರು! ಜನರ ಕ್ಷೋಭೆಗೆ ಹೆದರಿ ಮೇಯರರು ಮಧ್ಯ ರಾತ್ರಿಯ ಸಮಯವನ್ನಾಧರಿಸಿದ್ದರು.

ಕೆಸಿನೊವಲ್ಲಿ ಆ ರಾತ್ರಿ ನೃತ್ಯ ಕೂಟದ ಮೋಜು. ಶರದೃತು ಪ್ರಾಪ್ತ ಸಮಯಕ್ಕೆ ಮುನ್ನವೇ ಕಾಲಿರಿಸಿದಂತಿದ್ದ ಆ ರಾತ್ರಿ ಚಳಿ ತುಸು ಹೆಚ್ಚೇ ಅನಿಸುತ್ತಿತ್ತು. ಸಮುದ್ರದಾಚೆಯಿಂದ ಗಾಳಿಯು ಬಲವಾಗಿ ಬೀಸಿದರೂ ಸಾಗರವು ಶಾಂತವಾಗಿಯೇ ಇತ್ತು; ಆಕಾಶದಲ್ಲಿ ಅಲ್ಲಲ್ಲಿ ಹರಕು ಮುರುಕು ಮೋಡಗಳು ಹರಡಿದ್ದುವು. ದೂರ ಕ್ಷಿತಿಜದಿಂದ ನುಸುಳಿಕೊಂಡು ಬರುತ್ತಿದ್ದ ಈ ಮೋಡಗಳು ಚಂದ್ರನನ್ನು ಸಮೀಪಿಸುತ್ತಿದ್ದಂತೆಯೇ ಧವಲ ವರ್ಣ ತಳೆಯುತ್ತಿದ್ದುವು. ಕ್ಷಣಾರ್ಧದಲ್ಲಿ ಚಂದ್ರ ಬಿಂಬವನ್ನು ಆವರಿಸುತ್ತಿದ್ದುವು. ಆದರಿಂದ ಚಂದ್ರ ಕ್ಷಣಕಾಲ ಮರೆಯಾದಂತೆನಿಸುತ್ತಿತ್ತೇ ಹೊರತು ಆತನನ್ನು ಅವು ಪೂರ್ತಿ ಮುಚ್ಚಿ ಬಿಡುತ್ತಿರಲಿಲ್ಲ. ಎಟ್ರೆಟಾಟ್ ಸಮುದ್ರ ದಡದ ಒಂದು ವೈಶಿಷ್ಟ್ಯ ವೆಂದರೆ ಅರ್ಧವೃತ್ತಾಕಾರದ್ದಿರುವ ಅದನ್ನು ಬಳಸಿ ಎದ್ದು ನಿಂತಿರುವ ಬಂಡೆಗಲ್ಲುಗಳು. ಅವುಗಳಿಂದಾಗಿ ಅಲ್ಲಿ ಉಂಟಾಗಿದ್ದ ಎರಡು ಕಮಾನುಗಳನ್ನು ಜನ 'ಮಹಾದ್ವಾರಗಳು' ಎಂದೇ ಕರೆಯುತ್ತಾರೆ. ತಿಂಗಳಿನ ಮಂದ ಬೆಳಕಿನಲ್ಲಿ ಈ ಪ್ರಪಾತಗಳಿಂದುಂಟಾದ ಛಾಯೆಯು ಎರಡು ದೊಡ್ಡ ಕತ್ತಲೆಯ ಉಂಡೆಗಳಂತೆ ತೋರುತ್ತಿತ್ತು.

ಆ ದಿನವಿಡೀ ಮಳೆ ಸುರಿಯುತ್ತಲೋ ಜಿನುಗುತ್ತಲೋ ಇತ್ತು.

ಕೆಸಿನೋ ವಾದ್ಯಮೇಳ ವಾಲ್ಜ್, ಪೋಲ್ಕಾ, ಕ್ವಾಡ್ರಿಲ್ ಮೊದಲಾದ ನೃತ್ಯ ಸಂಗೀತ ನುಡಿಸುತ್ತಿತ್ತು. ಒಮ್ಮೆಲೆ ಕಿವಿಯಿಂದ ಕಿವಿಗೆ ಆ ಸುದ್ದಿ ಹರಡಿತು. ಭಾರತೀಯ ರಾಜಕುಮಾರನೊಬ

ಹೋಟೆಲ್ ದೆಸ್‌ಬೇನ್ಸ್‌ನಲ್ಲಿ ಸತ್ತುಹೋಗಿದ್ದು ಅವನ ಶವವನ್ನು ಸುಡುವುದಕ್ಕೆ ಅಧಿಕಾರಿಗಳಿಂದ ಅಪ್ಪಣೆ ಕೋರಲಾಗಿದೆಯೆಂದು ಜನ ಮಾತಾಡಿಕೊಳ್ಳತೊಡಗಿದರು. ಆದರೆ ಇದನ್ನು ಕೇಳಿದ ಯಾರಿಗೂ ಇದನ್ನು ನಂಬಲಾಗಲಿಲ್ಲ. ನಮ್ಮ ಸಂಪ್ರದಾಯಗಳಿಗೆಲ್ಲ ವ್ಯತಿರಿಕ್ತವಾಗಿರುವ ಇಂಥ ಸಂಗತಿ ಇಷ್ಟೊಂದು ಶೀಘ್ರಗತಿಯಲ್ಲಿ ನಡೆದು ಹೋಗಬಹುದೆಂದು ಯಾರೂ ಭಾವಿಸಿರಲಿಲ್ಲ. ರಾತ್ರಿ ಆಳವಾಗುತ್ತಿದ್ದಂತೆಯೆ ಜನವೆಲ್ಲ ತಂತಮ್ಮ ಮನೆಗಳಿಗೆ ಮರಳಿದರು.

ಬೀದಿ ದೀಪಗಳನ್ನು ಹಚ್ಚುವಾತ ಅಂದು ಮಧ್ಯರಾತ್ರಿಯ ಹೊತ್ತಿಗೆ ಆ ಗ್ಯಾಸ್ ಬತ್ತಿಗಳನ್ನು ಒಂದೊಂದಾಗಿ ಆರಿಸುತ್ತ ನಡೆದಿದ್ದ. ಬಾಗಿಲು ಮುಚ್ಚಿದ ಮನೆಗಳೂ ರಸ್ತೆಯಲ್ಲಿ ಅಲ್ಲಲ್ಲಿ ಕಾಣುತ್ತಿದ್ದ ರೊಜ್ಜು ನೀರಿನ ಗುಂಡಿಗಳೂ ಮಸುಮಸುಕಾದುವು. ಈತ ಮಾತ್ರ ಜನರೆಲ್ಲ ತಂತಮ್ಮ ಗೂಡು ಸೇರಿ ಊರು ನಿರ್ಜನವಾಗುವುದನ್ನೇ ಎದುರು ನೋಡುತ್ತಿದ್ದ.

ಅವರುಳಿದುಕೊಂಡಿದ್ದ ಚಿಕ್ಕ ಮನೆಯ ಬಾಗಿಲು ತೆರೆಯಿತು. ಇಕ್ಕಟ್ಟಾದ ಪಡಸಾಲೆಯಲ್ಲಿ ಸಿದಿಗೆ ಕಟ್ಟಿ ಅದರ ಮೇಲೆ ಬಿಳಿ ರೇಶ್ಮೆ ಬಟ್ಟೆ ಹೊದಿಸಿ ಮಲಗಿಸಲಾಗಿದ್ದ ಕಳೇವರವನ್ನು ಅಲ್ಲಿಯ ಮಂದ ಪ್ರಕಾಶದಲ್ಲಿ ನೋಡಿದೆವು. ಅಂಗಾತ ಪವಡಿಸಿದ್ದ ಈ ಶವದ ಶರೀರವನ್ನು ಬಿಳಿ ಬಟ್ಟೆಯ ಹೊದಿಕೆಯಿರುವಾಗಲೂ ಸ್ಪಷ್ಟವಾಗಿ ಗುರುತಿಸಬಹುದಿತ್ತು. ಅಲ್ಲಿನ ಭಾರತೀಯರೆಲ್ಲ ತದೇಕ ಚಿತ್ತರಾಗಿ ಶವದ ಕಾಲ ಬದಿಗೆ ಮೌನವಾಗಿ ನಿಶ್ಚಲರಾಗಿ ನಿಂತಿದ್ದರು; ಒಬ್ಬನು ಮಾತ್ರ ನಮಗೆ ಅರ್ಥವಾಗದ ಭಾಷೆಯಲ್ಲಿ ಮಂತ್ರಗಳನ್ನು ಗುಣಗುಣಿಸುತ್ತ ಆಗ ಮಾಡಬೇಕಿದ್ದ ವಿಧಿ ವಿಧಾನಗಳನ್ನು ಪೂರಯಿಸುತ್ತಿದ್ದನು. ಅವನು ಶವಕ್ಕೆ ಪ್ರದಕ್ಷಿಣೆ ಹಾಕುತ್ತಿದ್ದನಲ್ಲದೆ, ಕೆಲವೊಮ್ಮೆ ಕೈಯಿಂದ ಅದನ್ನು ಮುಟ್ಟುತ್ತಿದ್ದ. ಅನಂತರ ಮೂರು ಸರಪಣಿಗಳ ಒಂದು ನೆಲವಿನಲ್ಲಿರಿಸಲಾಗಿದ್ದ ಗಡಿಗೆಯನ್ನು ಕೈಗೆತ್ತಿಕೊಂಡ. ಆ ಮೇಲೆ ಮೃತ ಶರೀ–ರಕ್ಕೆ ಎಷ್ಟೋ ಹೊತ್ತು ಗಂಗಾಜಲವನ್ನು ಸಿಂಪಡಿಸಿದ. ಭಾರತೀಯರು (ಹಿಂದುಗಳು) ಎಲ್ಲಿ ಹೋದರೂ ತಮ್ಮೊಂದಿಗೆ ಗಂಗಾಜಲವನ್ನು ಒಯ್ಯಲೇಬೇಕು.

ಮಧ್ಯಾಹ್ನದಿಂದಲೂ ಕಟ್ಟಿಗೆ ಕೊರೆಯುತ್ತಿದ್ದ ಓರ್ವ ಬಡಿಗನಿಗೆ ಅದೆಲ್ಲ ಯಾತಕ್ಕಾಗಿ ಎಂಬುದೇ ತಿಳಿದಿರಲಿಲ್ಲ. ಉತ್ತಮ ಕಚ್ಚಾ ಸರಕಾಗಿದ್ದ ಇಷ್ಟೊಂದು ಕಟ್ಟಿಗೆಯನ್ನು ಯಾಕೆ ಹಾಳು ಮಾಡುತ್ತಿದ್ದಾರೆ ಎಂದು ವಿಸ್ಮಯಪಡುತ್ತಲೇ ಅವನು ತನ್ನ ಕಾರ್ಯ ಮುಂದುವರಿಸಿದ್ದನು. ನಂತರ ಒಂದು ಚಕ್ಕಡಿಯಲ್ಲಿ ಅದನ್ನೆಲ್ಲ ಹೇರಿಕೊಂಡು ನಿರ್ಜನವಾಗಿರುವ ಒಳ ಓಣಿಗಳಲ್ಲಿ ಜನರ ಸಂಶಯಕ್ಕೆ ಕಾರಣವಾಗದಂತೆ ಆ ಕಟ್ಟಿಗೆಯನ್ನೆಲ್ಲ ಸಮುದ್ರ ತೀರದಲ್ಲಿನ ಆ ಕಮಾನುಗಳ ಬಳಿಯೇ ಒಯ್ದು ಕಟ್ಟಿಗೆಯನ್ನು ಇಳಿಸಿದ್ದೊಂದೇ ತಡ, ಭಾರತೀಯ ಸೇವಕರು ಶವಸಂಸ್ಕಾರಕ್ಕೆ ಬೇಕಾಗುವ ರೀತಿಯಲ್ಲಿ ವೇದಿಕೆಯನ್ನು ಓರಣವಾಗಿ ಒಟ್ಟಿದರು. ಈ ವೇದಿಕೆ ಅಗಲಕ್ಕಿಂತ ಹೆಚ್ಚು ಉದ್ದವಾಗಿತ್ತು. ಈ ಕಾರ್ಯವನ್ನೆಲ್ಲ ಅವರು ತಾವೇ ತಾವಾಗಿ ಮಾಡಿ ಮುಗಿಸಬೇಕಾಯಿತು. ಯಾಕೆಂದರೆ ವಿಧಿವತ್ತಾಗಿ ಮಾಡಬೇಕಾದ ಈ ಕೆಲಸಕ್ಕೆ ವಿಧರ್ಮೀಯರ ಹಸ್ತಸ್ಪರ್ಶವಾಗುವಂತಿರಲಿಲ್ಲ. ರಾತ್ರಿ ಒಂದು ಗಂಟೆಯ ಸುಮಾರಿಗೆ ಮೃತನ ಸಂಬಂಧಿಕರಿಗೆ ಎಲ್ಲವೂ ಸಿದ್ಧವಾಗಿರುವ ವಾರ್ತೆ ಹೋಯಿತು.

ಸಿದಿಗೆಯನ್ನು ನಾಲ್ವರು ಹೊತ್ತು ಸಾವಧಾನವಾಗಿ ನಡೆಯುತ್ತ ಹೊರಕ್ಕೆ ತಂದರು. ಚಂದ್ರ ಮೋಡಗಳ ಹಿಂಬದಿಯಲ್ಲಿ ಅಡಗಿಬಿಟ್ಟಿದ್ದರಿಂದ ರೊಜ್ಜು ತುಂಬಿದ ನಿರ್ಜನ ಬೀದಿಗಳಲ್ಲೆಲ್ಲ ಕತ್ತಲೆಯಿದ್ದರೂ ಸಿದಿಗೆಯ ಮೇಲಿದ್ದ ಶವ ಮಾತ್ರ ಮಿಂಚುತ್ತಿತ್ತು; ಅದಕ್ಕೆ ಹೊದಿಸಿದ ರೇಶ್ಮೆ ಬಟ್ಟೆ ಅಷ್ಟೊಂದು ಹೊಳಮಳ್ಳದ್ದಾಗಿತ್ತು. ಅಬ್ಬಾ! ಅದೊಂದು ಅವಿಸ್ಮರಣೀಯ ದೃಶ್ಯ. ಪ್ರಕಾಶಮಾನವಾಗಿ ತೋರುತ್ತಿದ್ದ ಶವ ನಾಲ್ವರು ಕರಿಯರ ಹೆಗಲ ಮೇಲೆ ಮುಂದೆ ಮುಂದೆ ನಡೆದಿತ್ತು. ಅವರ ಚರ್ಮದ ಬಣ್ಣ ಎಷ್ಟು ಕಪ್ಪಾಗಿತ್ತೆಂದರೆ ಅವರ ಮುಖ, ಕೈ, ಅವರುಟ್ಟ ಬಟ್ಟೆ ಇವಾವನ್ನೂ ಆ ಕತ್ತಲಲ್ಲಿ ಪ್ರತ್ಯೇಕವಾಗಿ ಗುರುತಿಸುವುದು ಅಶಕ್ಯವೇ

ಆಗಿತ್ತು. ಮೂವರು ಭಾರತೀಯರು ಹೆಣ ವನ್ನು ಹಿಂಬಾಲಿಸಿದ್ದರು. ಅವರ ಹಿಂದೆ ಎತ್ತರ ಕಾಯದ ಓರ್ವ ಆಂಗ್ಲ ಗೃಹಸ್ಥ ಒಂದು ತಿಳಿ ಬೂದು ಬಣ್ಣದ ಓವರ್ ಕೋಟು ಹಾಕಿ ಕೊಂಡು ನಡೆದಿದ್ದನು. ಆ ಭಾರತೀಯರೊಂದಿಗೆ ಹೋಲಿಸಿದಾಗಲಂತೂ ಆತ ಭುಜದ ಭೀಮ ಕಾಯನಾಗಿ ತೋರುತ್ತಿದ್ದ. ಆ ಮೇಲು ವರ್ಗದ ಸುರೂಪಿ ಆಂಗ್ಲನು ಯುರೋಪಿನಲ್ಲಿ ಅವರ ಮಾರ್ಗದರ್ಶಕ, ಸಲಹೆಗಾರ ಮಿತ್ರನೆಂದು ನಂತರ ನಮಗೆ ತಿಳಿಯಿತು.

ಉತ್ತರ ಫ್ರಾನ್ಸಿನ ಈ ಚಿಕ್ಕ ಹಳ್ಳಿಯಲ್ಲಿ, ಮುಗಿಲನ್ನೆಲ್ಲ ಮಂಜು ಮುಸುಕಿದಂತೆ ತೋರು ತ್ತಿದ್ದ ರಾತ್ರಿಯ ಚಳಿಯಲ್ಲಿ ಅಂದು ನಡೆದ ಘಟನೆಯಿಂದ ನನಗೇಕೋ ಸಾಂಕೇತಿಕ ದೃಶ್ಯ ವೊಂದಕ್ಕೆ ಸಾಕ್ಷಿಯಾಗಿ ನಾನು ನಿಂತಿದ್ದೇನೇನೊ ಅನಿಸಿಬಿಟ್ಟಿತು. ಪರಾಭವದ ಅಪಮಾನವನ್ನು ಮೈಗಂಟಿಸಿಕೊಂಡ ಭಾರತೀಯ ಪ್ರತಿಭೆಯೇ ನನ್ನ ಕಣ್ಣೆದುರಲ್ಲೇ ಮೈದಾಳಿ ಮೌನವಾಗಿ ಮುನ್ನಡೆದಿತ್ತೆಂಬಂತೆ, ಇಂಗ್ಲಂಡಿನ ವಿಜಯೀ ಪ್ರತಿಭೆ ಈ ಅಂತ್ಯಯಾತ್ರೆಯಲ್ಲಿಯಂತೆಯೆ– ಬೂದುಗಪ್ಪು ಆವರಣವನ್ನು ಸುತ್ತಿಕೊಂಡು ಅದನ್ನು ಹಿಂಬಾಲಿಸುತ್ತಿರುವಂತೆ ನನಗೆ ಭಾಸ ವಾಯಿತು.

ಹೆಣ ಹೊತ್ತವರು ಜಾರುತ್ತಿದ್ದ ರಸ್ತೆಯಲ್ಲಿ ದಣಿವಾರಿಸಿಕೊಳ್ಳಲೋಸುಗ ಅರೆನಿಮಿಷ ನಿಂತು ಮತ್ತೆ ಮುಂದುವರಿದರು. ಈಗವರ ನಡಿಗೆ ತುಂಬ ನಿಧಾನವಾಗಿತ್ತು. ಹೆಗಲ ಮೇಲಿನ ಭಾರದಿಂದ ಅವರ ಕಾಲುಗಳಲ್ಲಿಯ ತ್ರಾಣ ಉಡುಗಿದಂತೆ ತೋರುತ್ತಿತ್ತು.

ಕೊನೆಗೊಮ್ಮೆ ಅವರು ಶವಸಂಸ್ಕಾರಕ್ಕಾಗಿ ರಚಿಸಲಾಗಿದ್ದ ವೇದಿಕೆಗೆ ಬಂದರು. ಸುಮಾರು ಮುನ್ನೂರಡಿ ಎತ್ತರದಿಂದಿಳಿದಿದ್ದ ಆ ಪ್ರಪಾತ ದಣಿಯ ಗುಹೆಯ ಬಳಿ ಇದು ಸಿದ್ಧವಾಗಿತ್ತು. ಶ್ವೇತವರ್ಣದ ಈ ಪ್ರಪಾತ ಬೆಳದಿಂಗಳಲ್ಲಿ ತುಸು ಮಬ್ಬಾಗಿ ತೋರುತ್ತಿತ್ತು. ಕಟ್ಟಿಗೆಯ ವೇದಿಕೆ ಸುಮಾರು ಮೂರಡಿ ಎತ್ತರವಾಗಿತ್ತು. ಶವವನ್ನು ಅದರ ಮೇಲಿಟ್ಟ ನಂತರ ಉತ್ತರ ಧ್ರುವ ಯಾವ ಕಡೆಗೆಂದು ಭಾರತೀಯನೊಬ್ಬ ಕೇಳಿದನು. ಧ್ರುವ ನಕ್ಷತ್ರವನ್ನು ಅವನಿಗೆ ತೋರಿ- ಸಲು ಬಾಪೂಸಾಹೇಬನ ಕಾಲುಗಳನ್ನು ಅವನ ಮಾತೃಭೂಮಿಯ ಕಡೆಗೆ ಮಾಡಿ ಕಳೇವರವನ್ನು ಸರಿಯಾಗಿಡಲಾಯಿತು. ಮೇಲೆ ಕೊರೆದ ಕಟ್ಟಿಗೆಗ ಳನ್ನು ಪೊದಿಸಿ ಸುಮಾರು ಹನ್ನೆರಡು ಬಾಟ್ಲಿ ಸೀಮೆ ಎಣ್ಣೆಯನ್ನು ಸುರುವಿದರು. ನಂತರ ಒಂದು ಶಾಸಿನವರೆಗೆ ಮೃತನ ಸಂಬಂಧಿಕರೂ ಸೇವ ಕರೂ ಅದರ ಮೇಲೆ ಕಟ್ಟಿಗೆಗಳನ್ನು ಒಟ್ಟಿ ಮತ್ತೆ ಸುಮಾರು ಇಪ್ಪತ್ತು ಬಾಟ್ಲಿ ಸೀಮೆ ಎಣ್ಣೆಯನ್ನು ಸುರಿದರಲ್ಲದೆ ತುದಿಗೆ ಕಟ್ಟಿಗೆಯ ಚಿಕ್ಕ ಚೂರುಗಳನ್ನೆಲ್ಲ ಏರಿಸಿದರು. ಇವರು ಕಟ್ಟಿಗೆ ಒಟ್ಟಿದ ರೀತಿಯನ್ನು ನೋಡಿದರೆ ಬಡಿಗರು ತಮ್ಮ ಅಡ್ಡೆಗಳಲ್ಲಿ ಏರಿಸಿಟ್ಟಂತೆ ಕಾಣುತ್ತಿತ್ತು. ಕಳೇವರವನ್ನು ಅಲ್ಲಿಗೆ ತಂದಾಗಿನಿಂದ ಸಮೀಪದಲ್ಲಿ ಒಂದು ಕಂಚಿನ ಸ್ಪಿರಿಟ್ ದೀಪ ಉರಿಯುತ್ತಿತ್ತು.

ಈಗೆ ಮುಹೂರ್ತ ಪ್ರಾಪ್ತವಾದಂತೆ ಕಾಣು ತ್ತದೆ. ದೀಪವು ಮಂದವಾದ ಕಾರಣ ಅದರಲ್ಲಿ ಎಣ್ಣೆ ಸುರುವಲು ಅದು ಭುಗಿಲ್ಲೆಂದಾಗ ಹತ್ತಿ ರದ ಬಂಡೆಗಲ್ಲುಗಳು ತಳದಿಂದ ತುದಿಯವರೆಗೆ ಬೆಳಗಿದವು. ದೀಪದ ಮೇಲೆ ಬಾಗಿದ್ದ ಭಾರ ತೀಯನು ಚಟ್ಟನೆ ಎದ್ದು ನಿಂತು ಎರಡೂ ಕೈಗ ಳನ್ನು ಮೇಲೆತ್ತಿ ಜೋಡಿಸಿದಾಗ ಹಿಂದೆ ಗೋಡೆ ಯಂತಿದ್ದ ಆ ಪ್ರಪಾತದ ಮೇಲೆ ಬೃಹದಾಕಾರದ ಬುದ್ಧನ ಛಾಯೆಯೇ ಅದೇನೋ ಎಂದು ನನಗೆ ಭಾಸವಾಯಿತು. ಅವನು ಧರಿಸಿದ ಮುಂಡಾಸದ ನೆರಳು ಪ್ರಾಚ್ಯದಲ್ಲಿ ನಾವು ನೋಡುವ ಭವ್ಯ ಶಿಲಾಮೂರ್ತಿಗಿರುವ ಕಿರೀಟ ದಂತೆನಿಸಿತು. ನನಗೋ ಅದೊಂದು ದಿವ್ಯಾನು ಭವ. ಅತ್ಯನಿರೀಕ್ಷಿತ ರೀತಿಯಲ್ಲಿ ನನ್ನ ಕಣ್ಣೆದುರೇ ಅಲೌಕಿಕ ಛಾಯೆಯ ರೂಪದಲ್ಲಿ ದೈವೀ ಸಾಕ್ಷಾ- ತ್ಕಾರವೇ ಆಗಿದೆಯೆಂದೆನಿಸಿ ನನ್ನೆದೆಯ ಬಡಿತ ತೀವ್ರವಾಯಿತು. ಮೂಡಣದಿಂದ ಯುರೋಪಿನ ಪಶ್ಚಿಮ ತುದಿಗೆ ಬಂದು ಮರಣವನ್ನಪ್ಪಿದ ತನ್ನ ಮಗುವಿನ ಶರೀರ ಬೆಂಕಿಯಲ್ಲಿ ಬೆಂದು ಹೋಗುತ್ತಿ ರುವುದನ್ನು ನೋಡಲು ಬಂದ ಪ್ರಾಚೀನ ಪೌರಸ್ತ್ಯ ದೇವತೆಯ ನೆಳಲೇ ಇದೆಂದು ನನ್ನಭಾವನೆ.

ಕಟ್ಟಿಗೆ ಒಟ್ಟಿ ಕಳೇವರವನ್ನಿಟ್ಟಲ್ಲಿಗೆ ದೀಪ ವನ್ನೆತ್ತಿ ತಂದಾಗ ಅವರ ಹಿಂದಿನ ಭವ್ಯ ನೆರಳು

## ಇತಿಹಾಸ ನಿರ್ಮಿಸಿದ ಇತಿಹಾಸಕಾರ




# ಡಾ. ಪಿ. ಗುರುರಾಜ ಭಟ್ಟರು

**ಪುಂಡಿಕ್ಯಾ ಗಣಪಯ್ಯ ಭಟ್ಟ**

ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಸಂಸ್ಕೃತಿ, ಇತಿಹಾಸ ಸಂಶೋಧನೆಗಳಿಗೆ ಅನ್ವರ್ಥನಾಮ ಡಾ. ಪಾದೂರು ಗುರುರಾಜ ಭಟ್ಟರು. ದೇಶದ ಮೂಲೆಯ, ಕರ್ನಾಟಕದ ಕರಾವಳಿಯ ಒಂದು ಚಿಕ್ಕ ಜಿಲ್ಲೆಗೆ ಭಾರತದ ಚಾರಿತ್ರಿಕ ನಕಾಶೆಯಲ್ಲಿ ಒಂದು ಮಹತ್ವದ ಸ್ಥಾನ ದೊರಕುವಂತೆ ಮಾಡಿದ ಡಾ. ಗುರುರಾಜ ಭಟ್ಟರಿಂದು ಕೀರ್ತಿ ಶೇಷ. ಚಾರಿತ್ರಿಕ ಸಂಶೋಧನ ಲೋಕದಲ್ಲಿ ಧ್ರುವ ತಾರೆಯಾಗಿ ಬೆಳಗಿದ್ದ ಶ್ರೀಯುತರ ಅಕಾಲಿಕ ನಿಧನ ಸಂಶೋಧನ ರಂಗಕ್ಕೊಂದು ತುಂಬಲಾರದ ನಷ್ಟ.

"Each life is an experiment" ತತ್ವಶಾಸ್ತ್ರಜ್ಞರೊಬ್ಬರ ನುಡಿ. ನಿಜ; ಡಾ. ಗುರುರಾಜಭಟ್ಟರ ಜೀವನವೂ ಈ ಹೇಳಿಕೆಗೆ ಹೊರತಲ್ಲ. ಭಟ್ಟರ ಜೀವನ ಹೂವಿನ ಹಾಸಿಗೆಯಾಗಿರಲಿಲ್ಲ. ಪಾತಾಳದಾಳದಿಂದ ಸ್ವಪ್ರಯತ್ನ ಪೂರ್ವಕ ಒಂದೊಂದೇ ಮೆಟ್ಟಲನ್ನಡರಿ ಮೇಲೇರಿದವರು ಇವರು. ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿ ತಾಲೂಕಿನ ಪಾದೂರೆಂಬಲ್ಲಿ ಬಡ ಶಿವಳ್ಳಿ ಬ್ರಾಹ್ಮಣರ ಕುಟುಂಬ ಒಂದರಲ್ಲಿ ೧೫-೬-೧೯೨೪ರಂದು ಜನನ. ಬಡತನದ ಬಾಧೆಯಿಂದಾಗಿ ಇವರ ಓದು ಪ್ರೈಮರಿ ಸ್ಕೂಲು ಮಟ್ಟಕ್ಕೆ ನಿಲ್ಲುವ ಸಂಭವ. ಆಗ ಅವರನ್ನಾಧರಿಸಿ ವಿದ್ಯಾಭ್ಯಾಸ ಮುಂದುವರಿಸುವಂತೆ ಪ್ರೋತ್ಸಾಹಿಸಿದವರು ಅವರ ಮಾವ. ೧೯೪೨ರಲ್ಲಿ ಎಸ್. ಎಸ್.

ಎಲ್. ಸಿ.ಯಲ್ಲಿ ತೇರ್ಗಡೆಯಾದೊಡನೆಯೆ ಅಧ್ಯಾಪಕವೃತ್ತಿ ಹಿಡಿದ ಗುರುರಾಜಭಟ್ಟರ ಜೀವನದಲ್ಲಿ ಹೊಸ ಅಧ್ಯಾಯ ಆರಂಭ. ನಂತರ ೧೯೪೫ ರಲ್ಲಿ ಮೂಡಬಿದ್ರೆಯ ಜೈನ ಹೈಸ್ಕೂಲಲ್ಲಿ ಅಧ್ಯಾಪಕರಾಗಿ ನೇಮಕ. ಅಧ್ಯಯನ–ಅಧ್ಯಾಪನ ಗಳೆರಡನ್ನು ಜೊತೆಯಾಗಿ ಮುಂದುವರಿಸಿದ ಭಟ್ಟರು ೧೯೫೨ರಲ್ಲಿ ಮದ್ರಾಸು ವಿಶ್ವವಿದ್ಯಾಲ–ಯದ ಬಿ. ಎ. ಪರೀಕ್ಷೆ ಪಾಸುಮಾಡಿಕೊಂಡದ್ದಲ್ಲದೆ ೧೯೫೬ರಲ್ಲಿ ಬನಾರಸ್ ಹಿಂದೂ ವಿಶ್ವ ವಿದ್ಯಾಲಯದ ಎಂ. ಎ. (ಚರಿತ್ರೆ) ಪದವಿಯನ್ನು ಪಡೆದರು. ಅದೇ ವರ್ಷ ಉಡುಪಿಯ ಎಂ. ಜಿ. ಎಂ. ಕಾಲೇಜಿನಲ್ಲಿ ಚರಿತ್ರೆ ಅಧ್ಯಾಪಕರಾಗಿ ಸೇರ್ಪಡೆ. ಸಮರ್ಥ ಅಧ್ಯಾಪಕನಾಗಿ ಕರ್ತವ್ಯ ನಿರ್ವಹಿಸಿ ಅತ್ಯುತ್ತಮ ಶಿಕ್ಷಕ ಎಂಬುದಾಗಿ ಪ್ರಶಂಸೆ, ಕೀರ್ತಿಗಳಿಗೆ ಪಾತ್ರರಾದ ಶ್ರೀ ಭಟ್ಟರಿಗೆ ೧೯೬೭ರಲ್ಲಿ ಆರಂಭವಾದ ಕಲ್ಯಾಣಪುರದ ಮಿಲಾಗ್ರೇಸ್ ಕಾಲೇಜಿನ ಪ್ರಿನ್ಸಿಪಾಲ ಪೀಠ ವನ್ನಲಂಕರಿಸಲು ಆಮಂತ್ರಣ. ಕ್ರೈಸ್ತ ಕಾಲೇಜಿಗೆ ಹಿಂದೂ ಪ್ರಿನ್ಸಿಪಾಲ! ೧೯೭೭ರಲ್ಲಿ ಸ್ವ ಇಚ್ಛೆಯಿಂದ ತನ್ನ ಹುದ್ದೆಯಿಂದ ನಿವೃತ್ತರಾಗುವ ವರೆಗೆ ೧೦ ವರ್ಷಗಳ ಕಾಲ ಪ್ರಿನ್ಸಿಪಾಲರಾಗಿ ಸಮರ್ಥ ರೀತಿಯಿಂದ ಕಾರ್ಯ ನಿರ್ವಹಿಸಿದ ಗುರು ರಾಜ ಭಟ್ಟರು ಅತ್ಯಂತ ಜನಪ್ರಿಯ ಅಧ್ಯಾಪಕರು ಕೂಡ.

೧೯೬೦ ರಿಂದಲೇ ಗುರುರಾಜಭಟ್ಟರ ಒಲವು ಇತಿಹಾಸ ಸಂಶೋಧನೆಯ ಕಡೆಗೆ ಹರಿದುದು ಕಾಲಧರ್ಮ ಸಂಯೋಗವೆನ್ನಬೇಕು. ದಕ್ಷಿಣ ಕನ್ನಡ ಜಿಲ್ಲೆಯನ್ನೇ ತನ್ನ ಸಂಶೋಧನ ರಂಗವನ್ನಾಗಿ ಆರಿಸಿಕೊಂಡು ಅಲ್ಲಿನ ಕಲೆ, ಸಂಸ್ಕೃತಿ, ಇತಿಹಾಸಗಳ ಪುನಾರಚನೆಗಾಗಿ ಅವಿರತ ಸಂಶೋಧನೆಯನ್ನಾ-ರಂಭಿಸಿದರು. ಮೈಸೂರು ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ವಿಭಾಗದ ಪ್ರಾಧ್ಯಾಪಕ ರಾಗಿದ್ದ ಡಾ. ಶೇಷಾದ್ರಿಯವರ ಮಾರ್ಗದರ್ಶನ ದಲ್ಲಿ ಸಂಶೋಧನೆಯ ಮುನ್ನಡೆ. ೧೯೬೮ರಲ್ಲಿ ಭಟ್ಟರು ಸಿದ್ಧಪಡಿಸಿದ "A Political and Cultural History of Tulunad from the Earliest Times Upto 1600 A.D." ಎಂಬ ಉದ್ಗ್ರಂಥಕ್ಕಾಗಿ ಅವರಿಗೆ ಮೈಸೂರು ವಿಶ್ವವಿದ್ಯಾಲಯದ ಡಾಕ್ಟರೇಟ್ ಪದವಿ. ಭಟ್ಟರ ಸಂಶೋಧನ ವಿಷಯ ಸಂಗ್ರಹ ಕ್ರಮ ಅವರ ಮಾರ್ಗದರ್ಶಕ ಡಾ. ಶೇಷಾದ್ರಿಯ ವರನ್ನೇ ಬೆರಗುಗೊಳಿಸಿತ್ತಂತೆ. ಡಾಕ್ಟರೇಟ್ ಪದವಿ ದೊರಕಿದ ಮಾತ್ರಕ್ಕೆ ಭಟ್ಟರ ಸಂಶೋಧನ ಕಾರ್ಯ ಕೊನೆಗೊಳ್ಳಲಿಲ್ಲ. ಭಟ್ಟರೇ ಹೇಳುತ್ತಿದ್ದಂತೆ ಅವರ ನಿಜವಾದ ಸಂಶೋಧನ ಕಾರ್ಯ ಆರಂಭವಾದದ್ದು ಡಾಕ್ಟರೇಟ್ ಪದವಿ ದೊರಕಿದ ನಂತರ.

ಗುರುರಾಜಭಟ್ಟರ ಅಭಿರುಚಿ ಕೇವಲ ಇತಿಹಾಸ ಸಂಶೋಧನೆಗೆ ಮಾತ್ರ ಮೀಸಲಾಗಿದ್ದಿಲ್ಲ. ವಾಸ್ತುಶಿಲ್ಪ ಹಾಗೂ ನಾಟ್ಯ ಶಾಸ್ತ್ರಗಳ ಸಂಶೋಧನೆಯಲ್ಲೂ ಇವರಿಗೆ ವಿಶೇಷ ಆಸಕ್ತಿ. ಶಿಲ್ಪಗಳ ಸಂಶೋಧನೆಯ ಕಡೆಗಿದ್ದ ಇವರ ಒಲವು ಅಪಾರ. ಶಿಲ್ಪಕೃತಿಗಳನ್ನು ಮಾತನಾಡಿಸುವ ಮಾಂತ್ರಿಕ ಶಕ್ತಿ ಭಟ್ಟರಲ್ಲಿತ್ತು. ದಕ್ಷಿಣ ಕನ್ನಡ ಜಿಲ್ಲೆಯ ಸಾವಿರಾರು ಶಿಲ್ಪ ಕೃತಿಗಳನ್ನು ಕಾಲನ ದವಡೆಯಿಂದ ಪಾರುಮಾಡಿ ಅವುಗಳ ಚಾರಿತ್ರಿಕ ಮಹತ್ವ, ಕಾಲ ಮಾನಗಳನ್ನು ಸಂಶೋಧಿಸುವುದರ ಮೂಲಕ ಅವುಗಳಿಗೆ ಜೀವತುಂಬಿದ ಕೀರ್ತಿ ಭಟ್ಟರಿಗೆ ಸಲ್ಲಬೇಕು.

ಯಾವನೇ ಒಬ್ಬ ಸಂಶೋಧಕ ತನ್ನ ಜೀವಮಾನ ದಲ್ಲಿ ಕಂಡಿರದಷ್ಟು ದೇಗುಲಗಳನ್ನು ಸಂಶೋಧಿಸಿ ಪ್ರಕಟಿಸಿದ ಮಹಾನ್ ಕಾರ್ಯಮಾಡಿದ ಏಕೈಕ ವ್ಯಕ್ತಿ ಗುರುರಾಜ ಭಟ್ಟರು. ದಕ್ಷಿಣ ಕನ್ನಡ ಒಂದರಲ್ಲೇ ೨೦೦೦ ಕ್ಕೂ ಮಿಕ್ಕಿ ದೇಗುಲಗಳನ್ನು ಸಂದರ್ಶಿಸಿ ಸಂಶೋಧಿಸಿದ ಭಟ್ಟರಿಗೆ ಜಿಲ್ಲೆಯ ಇನ್ನುಳಿದ ಸುಮಾರು ೨೦೦೦ ದಷ್ಟು ಗುಡಿಗಳನ್ನು ಸಂದರ್ಶಿಸಲಾಗಲಿಲ್ಲವಲ್ಲ ಎಂಬ ಕೊರಗು! ವಾಹನ ಸೌಕರ್ಯಗಳಿಲ್ಲದ ರಸ್ತೆಯಿಂದ ಅತಿದೂರದಲ್ಲಿರುವ ದೇಗುಲಗಳಲ್ಲಿ ವಿಶೇಷ ಆಸಕ್ತಿವಹಿಸಿ ಹತ್ತಾರು ಮೈಲಿ ಪಾದಯಾತ್ರೆಮಾಡಿ ಅವುಗಳನ್ನು ಸಂದರ್ಶಿಸುವ ಹುಚ್ಚು ಇವರಿಗೆ. ವಸತಿ ಸೌಕರ್ಯ ಗಳಿಲ್ಲದೆ ದೇವಾಲಯಗಳ ಹೊರ ಜಗಲಿಯಲ್ಲೇ ರಾತ್ರಿ ಕಳೆದ ಉದಾಹರಣೆಗಳಿವೆ! ವಿಗ್ರಹ ದರ್ಶನಕ್ಕಾಗಿ ಕೊರೆಯುವ ಚಳಿಯಲ್ಲಿ ತಣ್ಣೀರಲ್ಲಿ ಮಿಂದು ಒದ್ದೆ ಬಟ್ಟೆಯುಟ್ಟು ಕಾದದ್ದೂ ಇಲ್ಲದಿಲ್ಲ! ಸಂಶೋಧನೆಯ ಮಾರ್ಗದಲ್ಲಿ ಎಂತಹ ಕಷ್ಟಗಳು ಎದುರಾದರೂ ಸಹಿಸಬಲ್ಲ ಅಸಮ ಸಾಹಸಿ ಗುರು

ರಾಜ ಭಟ್ಟರಿಗೆ ಸಂಶೋಧನೆಯೇ ಜೀವನದ ಉಸಿರಾಗಿತ್ತು. ಪ್ರಾಯಶಃ ಯಾವನೇ ಏಕೈಕ ವ್ಯಕ್ತಿ ತನ್ನ ಸ್ವಂತ ಕಷ್ಟ–ಸುಖಗಳನ್ನು ಲೆಕ್ಕಿಸದೆ ನಾಡಿನ ಚರಿತ್ರೆ, ಸಂಸ್ಕೃತಿಗಳ ಸಂಶೋಧನೆಗಾಗಿ ಭಟ್ಟರಷ್ಟು ದುಡಿದಿರಲಾರ. ಒಂದು ಸಂಸ್ಥೆ ಮಾಡಲಾರದ ಕಾರ್ಯ ಮಾಡಿದ ವ್ಯಕ್ತಿ ಗುರುರಾಜಭಟ್ಟರು. ಅನೇಕ ಮಹತ್ವಪೂರ್ಣ ಶಾಸನಗಳನ್ನೂ ವಿಗ್ರಹಗಳನ್ನು ಸಂಶೋಧಿಸಿ ಶಿಲೆಯೊಂದಿಗೆ ಶಿಲೆಯಾಗಿ ಬಿದ್ದಿದ್ದ ತುಳುನಾಡಿನ ಪ್ರಾಚೀನ ಸಂಸ್ಕೃತಿ, ಚರಿತ್ರೆಗೆ ಶಾಪವಿಮೋಚನೆ ಮಾಡಿದ ಶ್ರೀರಾಮ ಗುರುರಾಜ ಭಟ್ಟರು.

ಪ್ರಕಟಣೆಗಳಲ್ಲಿ ಭಟ್ಟರದು ಎತ್ತಿದ ಕೈ. ಇವರಷ್ಟು ಪುಸ್ತಕ, ಲೇಖನಗಳನ್ನು ಪ್ರಕಟಿಸಿದ ಸಂಶೋಧಕರು ನಾಡಿನಲ್ಲಿ ಬೆರಳೆಣಿಕೆಯಷ್ಟು. ಯಾವುದೇ ಸಂಶೋಧನೆಯನ್ನು ಅನತಿಕಾಲದಲ್ಲೇ ಪ್ರಕಟಿಸುವುದು ಭಟ್ಟರ ವೈಶಿಷ್ಟ್ಯ. ನಾಡಿನ ಪ್ರಸಿದ್ಧ ಪಂಡಿತ ಪತ್ರಿಕೆಗಳಲ್ಲಿ ಹಾಗೂ ನಿಯತಕಾಲಿಕಗಳಲ್ಲಿ ಇವರ ೭೦೦ ಕ್ಕೂ ಮಿಕ್ಕ ಲೇಖನಗಳು ಪ್ರಕಟಗೊಂಡಿವೆ. ತುಳುನಾಡಿನ ಸಂಸ್ಕೃತಿ–ಇತಿಹಾಸಗಳನ್ನು ಜನಪ್ರಿಯಗೊಳಿಸಿದ ಸಂಶೋಧಕ ಭಟ್ಟರು. ಈ ದೃಷ್ಟಿಯಿಂದ ಗುರುರಾಜ ಭಟ್ಟರನ್ನು 'ಜನಸಾಮಾನ್ಯರ ಇತಿಹಾಸಕಾರ' ಎಂದು ಕರೆಯಬಹುದು. ಕೇವಲ ಪ್ರಾಚೀನ ಸಂಸ್ಕೃತಿ ಇತಿಹಾಸ, ಶಾಸನ, ವಾಸ್ತುಶಿಲ್ಪ, ನಾಣ್ಯಗಳ ಕುರಿತು ಮಾತ್ರವಲ್ಲದೆ ಸಮಾಜ ಶಾಸ್ತ್ರ, ವಿದ್ಯಾಭ್ಯಾಸ, ಮಾನವ ಶಾಸ್ತ್ರಗಳ ಕುರಿತೂ ಸಮರ್ಥವಾಗಿ ಬರೆಯಬಲ್ಲ ಭಟ್ಟರು ಲೇಖನ ಕಲೆಯಲ್ಲಿ ಸಿದ್ಧಹಸ್ತ; ಕನ್ನಡ ಹಾಗೂ ಇಂಗ್ಲೀಷ್ ಭಾಷೆಗಳೆರಡರಲ್ಲೂ ಸಮರ್ಥವಾಗಿ ಬರೆಯಬಲ್ಲ ಸವ್ಯಸಾಚಿ. ಇವರ ಮುಖ್ಯ ಕೃತಿಗಳೆಂದರೆ ತುಳುನಾಡು, ತುಳುನಾಡಿನ ಸ್ಥಾನಿಕರು, "Antiqaities of South Canara." ಇವಲ್ಲದೆ ಕನ್ನಡ ಹಾಗೂ ಇಂಗ್ಲೀಷ್‌ನಲ್ಲಿ ಹತ್ತಾರು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಆದರೆ, ಇವೆಲ್ಲಕ್ಕಿಂತ ಮಿಗಿಲಾಗಿ, ಗುರುರಾಜ ಭಟ್ಟರ ಸಂಶೋಧನಾ ಸಾಮರ್ಥ್ಯಕ್ಕೆ ಪುಟವಿಟ್ಟ ಗ್ರಂಥ "Studies in Tulava History and Culture."

ಇದು ಪ್ರಾಚೀನ ತುಳುನಾಡೆಂದು ಪ್ರಸಿದ್ಧವಾಗಿದ್ದ ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ, ಕಲೆ, ಸಂಸ್ಕೃತಿಗಳ [illegible] ಮಾಡಿಸುವ ವಿಶ್ವಕೋಶ. ತುಳುನಾಡಿನ ಇತಿಹಾಸ, ಕಲೆ, ಸಂಸ್ಕೃತಿಗಳ ಸಂಶೋಧನೆಗೆ ತನ್ನ ಜೀವವನ್ನೇ ಮುಡಿಪಾಗಿಟ್ಟಿದ್ದ ಗುರುರಾಜ ಭಟ್ಟರ ವಿದ್ವತ್ತು, ಸಂಶೋಧನಾ ನೈಪುಣ್ಯ, ಸಾಹಸ ಅವಿರತ ಶ್ರಮಗಳ ಸ್ಮಾರಕ. ಸುಮಾರು ೫೦೦ ಪುಟಗಳ ಬರಹ ಹಾಗೂ [illegible]ಕ್ಕೂ ಮಿಕ್ಕ ಚಿತ್ರಗಳನ್ನೊಳಗೊಂಡ ಈ ಮಹಾಗ್ರಂಥ ಪ್ರಾದೇಶಿಕ ಚರಿತ್ರೆಯ ಕುರಿತು ಸಂಶೋಧನ ಗ್ರಂಥಗಳ ಪೈಕಿ ಅಗ್ರಮಾನ್ಯ; ಗ್ರಂಥ ಪ್ರಕಟಣೆಯ [illegible]. ಇಂತಹ ಬೃಹತ್ ಕೃತಿಯ ಪ್ರಕಾಶನಕ್ಕೆ ಯಾರೂ ಮುಂದೆ ಬಾರದಿದ್ದಾಗ ಭಟ್ಟರು ಸುಮಾರು ೨ ಲಕ್ಷ ರೂಪಾಯಿಗಳ ಸಾಲ ಪಡೆದು ಗ್ರಂಥವನ್ನು ಸ್ವಂತವಾಗಿ ಪ್ರಕಟಿಸಿದ್ದಲ್ಲದೆ ಪುಸ್ತಕ ಮಾರಾಟಗಾರರ ಶರತ್ತುಗಳಿಂದ ಬೇಸತ್ತು ಮನೆಮನೆಗೆ ಗ್ರಂಥವನ್ನೊಯ್ದು ಮಾರುವ ಸಾಹಸಕ್ಕೆ ಕೈಯಿಕ್ಕಿ ಸೈ ಎನಿಸಿಕೊಂಡರು.



"ಅದಕ್ಕಿಟ್ಟ ಹೆಸರು ಎಷ್ಟು ಸಾರ್ಥಕವಾಗಿದೆ ನೋಡಿ"

ಗುರುರಾಜ ಭಟ್ಟರೆಂದೂ ಪ್ರಶಸ್ತಿ, ಕೀರ್ತಿ, ಗೌರವಗಳ ಬೆನ್ನು ಹತ್ತಿರದವರಲ್ಲ. ಅವೇ ಭಟ್ಟರನ್ನರಸಿ ಬಂದಿವೆ. ೧೯೬೫ರದ ಇವರ "ತುಳು ನಾಡು" ಗ್ರಂಥಕ್ಕೆ ಕರ್ನಾಟಕ ಸರಕಾರದ ದೇವರಾಜ ಬಹದೂರ್ ದತ್ತಿ ಸ್ಮಾರಕ ಪ್ರಶಸ್ತಿ ಲಭ್ಯ; ವಿದ್ಯಾರಂಗದಲ್ಲಿನ ಇವರ ಸೇವೆಗಾಗಿ ೧೯೭೨ರಲ್ಲಿ ಇವರಿಗೆ ಮಣಿಪಾಲದ ಎಕಾಡೆಮಿ ಆಫ್ ಜನರಲ್ ಎಜುಕೇಶನ್ನಿನಿಂದ Honarary Fellow ಪದವಿಯ ಗೌರವ. ಇವಲ್ಲದೆ ರೋಟರಿ, ಲಯನ್ಸ್ ಇವೇ ಮುಂತಾದ ಸಂಘ ಸಂಸ್ಥೆಗಳಿಂದ ಇವರು ಪಡೆದ ಸನ್ಮಾನಗಳಿಗೆ ಲೆಕ್ಕವಿಲ್ಲ. ಪುರಾತತ್ವ ಸಂಶೋಧನೆಯಲ್ಲಿನ ಇವರ ಪ್ರಭುತ್ವವನ್ನು ಗಣಿಸಿದ ಕರ್ನಾಟಕ ಸರಕಾರ ಭಟ್ಟರಿಗೆ ರಾಜ್ಯ ಪುರಾತತ್ವ ಇಲಾಖೆಯ ಗೌರವ ಸಲಹೆಗಾರ ಹುದ್ದೆಯನ್ನಿತ್ತಿತು. ಇತ್ತೀಚೆಗೆ ಭಾರತೀಯ ಜ್ಞಾನಪೀಠವು ಅವರನ್ನು ಕರ್ನಾಟಕ ಹಾಗು ಕೇರಳಗಳ ಜೈನ ಸ್ಮಾರಕಗಳ ಅಧ್ಯಯನಕ್ಕಾಗಿ ವಿನಂತಿಸಿ ಭಟ್ಟರ ಕೀರ್ತಿ ಮುಕುಟಕ್ಕೊಂದು ಗರಿಯನ್ನು ಸೇರಿಸಿತು. ಇವರ ವಿದ್ವತ್ತನ್ನು ಗುರುತಿಸಿ ಜರ್ಮನಿಯ ಕೊಲೋನ್ ವಿಶ್ವವಿದ್ಯಾಲಯವು ಭಟ್ಟರನ್ನು ಗೌರವ ಪ್ರಾಧ್ಯಾಪಕರನ್ನಾಗಿ ಆಮಂತ್ರಿಸಿದ್ದು ಅವರಿಗಿದ್ದ ಅಂತರರಾಷ್ಟ್ರೀಯ ಖ್ಯಾತಿಗೊಂದು ನಿದರ್ಶನ. ಸಂಶೋಧನೆಗಾಗಿ ಪೂರ್ಣ ಕಾಲವನ್ನು ವ್ಯಯಿಸುವ ದೃಷ್ಟಿಯಿಂದ ತನ್ನ ಪ್ರಿನ್ಸಿಪಾಲ ಹುದ್ದೆಗೆ ಸ್ವ-ಇಚ್ಛೆಯಿಂದ ರಾಜಿನಾಮೆ ನೀಡಿದಂದಿನಿಂದ ಉಡುಪಿಯ ಮಂಜೇಶ್ವರ ಗೋವಿಂದ ಪೈ ಸಂಶೋಧನ ಕೇಂದ್ರದಲ್ಲಿ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು; ಇತ್ತೀಚೆಗೆ ಇವರು ಭಾರತದ ಕಲೆ, ಇತಿಹಾಸ, ಸಂಸ್ಕೃತಿಗಳ ಅಧ್ಯಯನಕ್ಕಾಗಿ ಉಡುಪಿಯಲ್ಲಿ 'ಭಾರತೀಯ ಅಧ್ಯಯನ ಸಂಸ್ಥೆ'ಯನ್ನು ಸ್ಥಾಪಿಸಿದ್ದು ಭಟ್ಟರ ಹಿಂಗದ ಸಂಶೋಧನಾ ತೃಷೆಗೊಂದು ನಿದರ್ಶನ.

ಸರಳ ಜೀವನ ಉಚ್ಚ ವಿಚಾರ ಗುರು-ರಾಜ ಭಟ್ಟರ ಜೀವನದ ಆದರ್ಶ. ಭಟ್ಟರ ಜೀವನವೊಂದು ತೆರೆದಿಟ್ಟ ಪುಸ್ತಕ. ವಿನಯಶೀಲ ಹಾಗೂ ಸರಳ ವ್ಯಕ್ತಿತ್ವದ ಭಟ್ಟರು ಮಾತುಗಳಿಗೆ ಸೂಜಿಗಲ್ಲಿನ ಆಕರ್ಷಣ ಶಕ್ತಿ; ಭಟ್ಟರ ಉತ್ತಮ ವಾಗ್ಮಿ. ಪ್ರಾದೇಶಿಕ ಇತಿಹಾಸ ಸಂಶೋಧನೆಗೆ ಭಟ್ಟರ ಕೊಡುಗೆ ಅಪಾರ. ದಕ್ಷಿಣ ಕನ್ನಡ ಜಿಲ್ಲೆಯ ಮನೆಮಾತಾಗಿದ್ದ ಗುರುರಾಜ ಭಟ್ಟರು ತಾರೀಖು ೨೮-೮-೧೯೭೮ ರಂದು ಆತ್ಮಹತ್ಯೆ ಮಾಡಿಕೊಂಡರೆಂಬ ವಾರ್ತೆ ಅವರ ಅಭಿಮಾನಿಗಳಿಗೆ, ಸಂಶೋಧಕರಿಗೆ ಅಪಾರ ಶೋಕಕ್ಕೆ ಕಾರಣ. ಇತಿಹಾಸ ಎಂದರೆ "ಈ ರೀತಿಯಾಗಿ ಸಂಭವಿಸಿತು" ಎಂದು ವಿವರಿಸುವುದು. ಈ ದೃಷ್ಟಿಯಿಂದ ಭಟ್ಟರ ಜೀವನ, ಸಾಧನೆಗಳಿಂದು ಇತಿಹಾಸದ ಮಾತು. ಅವರಿಂದು ಭೂತಕಾಲಕ್ಕೆ ಸೇರಿ ಹೋದ ವ್ಯಕ್ತಿ. ಆದರೆ ಅವರ ಆದರ್ಶ, ಸಾಹಸ, ಸಾಧನೆ, ಸಂಶೋಧನೆಗಳು ಸಂಶೋಧಕರಿಗೆ ದಾರಿದೀಪ.

●



ಒಂದು ಬಾರಿ ಶಂಕರನ ರಾಶಿಯನ್ನು ಪ್ರವೇಶಿಸುವುದಕ್ಕೆ ಮುಂಚೆ, ಶನಿ ಶಂಕರನ ಬಳಿಗೆ ಆಗಮಿಸಿ, 'ನಾನು ತಮ್ಮ ರಾಶಿಗೆ ಪ್ರವೇಶ ಮಾಡುವುದರಲ್ಲಿದ್ದೇನೆ' ಎಂದು ಹೇಳಿದನಂತೆ.

ಆಗ ಶಂಕರ, 'ಆದರೆ ಆಗ ಪಾರ್ವತಿ ಇಲ್ಲಿರುವುದಿಲ್ಲ. ನಂದಿಯನ್ನು ಕಾಡಿನಲ್ಲಿ ಬಿಡುತ್ತೇನೆ. ನಾನು ಧ್ಯಾನಾಸಕ್ತನಾಗಿ ಆಸೀನನಾಗುತ್ತೇನೆ,' ಎಂದ.

ಶನಿ ನುಡಿದ, 'ನಾನು ಪ್ರವೇಶಿಸುವೆನು, ಎಂಬುದಾಗಿ ಮುನ್ಸೂಚನೆ ನೀಡಿದರೇನೇ ಇಂತಹ ಬದಲಾವಣೆಗಳಾಗುವ ಸಂಭವವಿದೆ. ನಾನು ಪ್ರವೇಶಿಸಿದರೆ, ಆಗ ಮತ್ತೇನು ಬದಲಾವಣೆಗಳಾಗುತ್ತವೆಯೊ!

ಎನ್. ಕೆ. ನರಸಿಂಹಮೂರ್ತಿ

# ತ್ವಚೆಯ ಉರಿತ, ತುರಿತದ ಯಾತನೆಯನ್ನು ಮರೆತುಬಿಡಿ!









ನೈಸಿಲ್ ತನ್ನಿರಿ.
ತ್ವಚೆಉರಿತವನ್ನು
ಮರೆಯಿರಿ.
ಬೆಲೆ, ಕೇವಲ ರೂ.6 63.*

*ಅತ್ಯಧಿಕ ರಿಟೇಲ್ ದರ,
ಸ್ಥಳೀಯ ತೆರಿಗೆಗಳು ಪ್ರತ್ಯೇಕ.



Sista's-GN-79-364-Kan

ಅದು ಗ್ರಾಮಸ್ಥರಿಗೆ ಮೃತ್ಯುರೂಪವಾಗಿತ್ತು

# ತಡಸದ ಚಿರತೆ

ಡಿ. ಆರ್. ಕುಲಕರ್ಣಿ

ಸಾವಿರದೊಂಭೈನೂರಾ ಮೂವತ್ತಮೂರನೆಯ ಇಸ್ವಿ. ನಾನು ತಡಸದ ಪ್ರವಾಸಿ ಮಂದಿರದಲ್ಲಿ ಕಾರ್ಯನಿಮಿತ್ತ ಠಿಕಾಣಿ ಹೂಡಬೇಕಾಗಿ ಬಂತು. ಬಹುತೇಕ ಎಲ್ಲಾ ಕಂದಾಯ, ಅರಣ್ಯ ಮತ್ತು ಪೋಲೀಸು ಇಲಾಖೆಗಳ ಅಧಿಕಾರಿಗಳಿಗೆ ಅದು ಠಿಕಾಣಿ ಸ್ಥಳವಾಗಿತ್ತು. ನನ್ನೊಂದಿಗೆ ಧಾರವಾಡದ ಪೋಲೀಸು ಇನ್ಸ್‌ಪೆಕ್ಟರರೂ ಇದ್ದರು. ನಾವಿಬ್ಬರೂ ಜೊತೆಯಾಗಿ, ತಡಸದ ಅರಣ್ಯಾಧಿಕಾರಿ (ಫಾರೆಸ್ಟರ್) ಮತ್ತು ಪೋಲೀಸು ಸಬ್ ಇನ್ಸ್‌ಪೆಕ್ಟರರ ನಡುವೆಯಿದ್ದ ವಿವಾದವನ್ನು ವಿಚಾರಣೆ ನಡೆಸಿ ಬಗೆಹರಿಸಬೇಕಾಗಿತ್ತು. ಫಾರೆಸ್ಟರನ ಹತ್ತಿರ ಒಂದು ೧೨ ಬೋರ್ ಡಬಲ್ ಬ್ಯಾರಲ್ ಬಂದೂಕಿನ ಲೈಸೆನ್ಸು ಇತ್ತು. ಪೋಲೀಸ್ ಸಬ್ ಇನ್ಸ್‌ಪೆಕ್ಟರ್ ಆ ಲೈಸೆನ್ಸನ್ನು ಪರೀಕ್ಷೆ ಮಾಡಬೇಕೆಂದು ಬಯಸಿದ್ದ. ಅಂತೆಯೇ ಫಾರೆಸ್ಟರನಿಗೆ ಈ ಬಗ್ಗೆ ಹೇಳಿಕಳಿಸಿ ಲೈಸೆನ್ಸನ್ನು ಪರೀಕ್ಷಿಸುವುದಕ್ಕಾಗಿ ತನ್ನ ಕಚೇರಿಗೆ ತಂದು ಒಪ್ಪಿಸಬೇಕೆಂದು ತಿಳಿಸಿದ್ದ. ಆದರೆ ಫಾರೆಸ್ಟರ್ ಅದನ್ನು ತಿರಸ್ಕರಿಸಿ, ಪೋಲೀಸು ಸಬ್ ಇನ್ಸ್‌ಪೆಕ್ಟರನೇ ಸ್ವತಃ ತನ್ನ ಕಚೇರಿಗೆ ಬಂದು ಬಂದೂಕು ಮತ್ತು ಲೈಸೆನ್ಸುಗಳನ್ನು ಪರೀಕ್ಷಿಸಬಹುದೆಂದು ಸುದ್ದಿ ತಂದವನ ಬಳಿ ಹೇಳಿ ಕಳುಹಿಸಿಬಿಟ್ಟ.

ಈ ಸಣ್ಣ ಘಟನೆ ದೊಡ್ಡದಾಗಿ ಬೆಳೆದು ಇಬ್ಬರ ಮಧ್ಯೆಯೂ ನಿಂತು ಪತ್ರವ್ಯವಹಾರ ಪ್ರಾರಂಭವಾಯಿತು. ಮುಂದೆ ಇಬ್ಬರೂ ತಮ್ಮ ಉನ್ನತಾಧಿಕಾರಿಗಳಿಗೆ ಈ ಬಗ್ಗೆ ವರದಿ ಮಾಡಿಕೊಂಡರು. ನಾನು ಫಾರೆಸ್ಟರನ ವರದಿಯನ್ನು ವಿಭಾಗೀಯ ಅರಣ್ಯಾಧಿಕಾರಿಗೆ ತಲುಪಿಸಿದೆ. ಸಬ್ ಇನ್ಸ್‌ಪೆಕ್ಟರರ ವರದಿ ಜಿಲ್ಲಾ ಪೋಲೀಸ್ ಅಧಿಕಾರಿಗೆ (ಡಿ.ಎಸ್.ಪಿ.) ತಲುಪಿತು. ನಂತರ ನಮ್ಮಿಬ್ಬರಿಗೂ ಜೊತೆಯಾಗಿ ವಿಚಾರಣೆ ನಡೆಯಿಸಿ ಯಾರು ತಪ್ಪುಗಾರ ಎಂಬುದನ್ನು ಕಂಡು ಹಿಡಿದು ವರದಿ ಒಪ್ಪಿಸುವಂತೆ ಆಜ್ಞೆ ಬಂತು. ಆ ಕೆಲಸಕ್ಕಾಗಿಯೇ ನಾವಿಬ್ಬರೂ ಅಲ್ಲಿ ಠಿಕಾಣಿ ಹೂಡಿದ್ದು.

ಆ ಸಬ್ ಇನ್ಸ್‌ಪೆಕ್ಟರ್ ಆಗ ತಾನೇ ಜಮಾದಾರ ಹುದ್ದೆಯಿಂದ ಬಡ್ತಿ ಹೊಂದಿದ್ದನು. ತಾನು ಫಾರೆಸ್ಟರನಿಗಿಂತ ಹೆಚ್ಚು ಅಧಿಕಾರವುಳ್ಳವನೆಂದು ತಿಳಿದುಕೊಂಡಿದ್ದ. ಆದರೆ ಫಾರೆಸ್ಟರ್, ಆ ಸಬ್

(ಲೇಖಕರು ಇಂಗ್ಲೀಷಿನಲ್ಲಿ ಹೇಳಿದ್ದನ್ನು ಇಂಗ್ಲೀಷಿನಲ್ಲಿಯೇ ನಿರೂಪಿಸಿದವರು ಶ್ರೀ ಕೆ. ಜಿ. ಸತ್ತೂರ.)

ಇನ್ಸ್‌ಪೆಕ್ಟರ್ ಹೊಸದಾಗಿ ಬತ್ತಿ ಹೊಂದಿದವನಾದ್ದರಿಂದ ತನ್ನ ಸಮ ಅಧಿಕಾರಿ ಎಂದು ಭಾವಿಸಿಕೊಂಡಿದ್ದ. ಇದೇ ಅವರಿಬ್ಬರ ನಡುವೆ ವಿವಾದಕ್ಕೆ ಕಾರಣ. ವಿಚಾರಣೆ ನಡೆಸಲು ಹೋದ ನಾನು ಮತ್ತು ಪೋಲೀಸು ಇನ್ಸ್‌ಪೆಕ್ಟರ್, ಅವರಿಬ್ಬರಿಗೂ ರಾಜಿಮಾಡಿಕೊಳ್ಳುವಂತೆ ಮನವೊಲಿಸಿ ಇಬ್ಬರೂ ಸ್ನೇಹಿತರಾಗಿ ಮುಂದುವರಿಯಬೇಕೆಂದು ಹೇಳಿದೆವು. ಅವರಿಬ್ಬರೂ ನಮ್ಮ ಮಾತಿಗೆ ಬೆಲೆ ಕೊಟ್ಟು ಪರಸ್ಪರ ಹಸ್ತಲಾಘವ ಮಾಡಿದರು. ಆ ವಿಷಯ ಅಲ್ಲಿಗೇ ಮುಗಿಯಿತು.

ವಿಚಾರಣೆಯ ನಂತರ ನಾನು ಸ್ನಾನ ಮಾಡಬೇಕೆಂದು ಹೊರಟಾಗ ಒಬ್ಬ ಓಡಿ ಬಂದ. ತಾನೊಬ್ಬ ಅಗಸ ಎಂದ. ತನ್ನ ಜೀವನಕ್ಕೆ ಆಧಾರವಾಗಿದ್ದ ಕತ್ತೆಯನ್ನು ಚಿರತೆ ಕೊಂದಿದೆ ಎಂದೂ ಕೊಂದು ಅದರ ಶವವನ್ನು ಎಳೆದುಕೊಂಡೊಯ್ದು ಪ್ರವಾಸಿ ಮಂದಿರದ ಹಿಂಬದಿಗೆ ಬಿಟ್ಟು ಹದ್ದು ಕಾಗೆ–ನರಿ ನಾಯಿಗಳ ಕಣ್ಣಿಗೆ ಬೀಳದಂತೆ ಎಲೆ – ಕಂಟಿಗಳಿಂದ ಆ ಕಳೇವರವನ್ನು (ಮನುಷ್ಯ ಮುಚ್ಚಿಟ್ಟ ಹಾಗೆ) ಬಚ್ಚಿಟ್ಟಿದೆಯೆಂದು ತಿಳಿಸಿದ.

ಆ ಚಿರತೆಯ ಬಗ್ಗೆ ನಾನು ಕೇಳಿ ತಿಳಿದಿದ್ದೆ. ಬಹಳ ಬುದ್ಧಿವಂತ ಚಿರತೆ ಅದು. ಸಾಮಾನ್ಯವಾಗಿ ಚಿರತೆಗಳು ಒಂದಕ್ಕಿಂತ ಒಂದು ಚತುರವಾಗಿರುತ್ತವೆ. ಕೆಲವಂತೂ ಬಲು ದಿಟ್ಟ. ತಡಸದ ಈ ಚಿರತೆ ಅದೇ ಜಾತಿಗೆ ಸೇರಿದ್ದು. ಚಿರತೆ ಹೆಚ್ಚಾಗಿ ಜನವಸತಿಯ ಸಮೀಪದಲ್ಲೇ ದುರ್ಗಮ ಪ್ರದೇಶದಲ್ಲಿ ಅವಿತುಕೊಂಡಿರುತ್ತದೆ. ರಾತ್ರಿಯ ವೇಳೆಯಲ್ಲಿ ಹಳ್ಳಿಯಲ್ಲಿ ಬಂದು ಮೇಕೆ – ಕುರಿ – ನಾಯಿಗಳಂಥ ಸಾಕುಪ್ರಾಣಿಗಳ ಗೋಣು ಮುರಿದು ರಕ್ತ ಹೀರಿ ನಂತರ ದೂರಕ್ಕೆ ಎಳೆದೊಯ್ದು ತಿನ್ನುತ್ತದೆ. ಈಗ ಅದಕ್ಕೆ ಬಲಿಯಾಗಿತ್ತು ಆ ಅಗಸನ ಕತ್ತೆ.

ಬಹುಶಃ ಹಿಂದಿನ ರಾತ್ರಿಯೇ ಈ ಕೆಲಸ ಆಗಿರಬೇಕೆಂದು ಹೇಳಿದ ಅಗಸ ತನಗೆ ಗೊತ್ತಾದದ್ದು ಮುಂಜಾನೆಯೇ ಎಂದ. ಪ್ರವಾಸಿ ಮಂದಿರದ ಆವಾರದಲ್ಲಿಯೇ ಬಿದ್ದಿದ್ದ ಕಳೇವರವನ್ನು ನೋಡಲು ಹೇಳಿದ. ನಾನು, 'ಅದಕ್ಕೀಗ ಸಮಯವಿಲ್ಲ. ಮುಖ್ಯ ಕೆಲಸಗಳಿವೆ' ಎಂದೆ. ಆತ ಸುಮ್ಮನೇ ಹೊರಟುಹೋದ. ತುಸು ಸಮಯದ ನಂತರ



ಕೆಲ ಜನ ಹಳ್ಳಿಗರೊಂದಿಗೆ ಬಂದ. ಹಳ್ಳಿಗರೆಲ್ಲ, 'ಚಿರತೆಯನ್ನು ಹೇಗಾದರೂ ಮಾಡಿ ಕೊಲ್ಲಿರಿ ಸಾಹೇಬರೇ. ಇಲ್ಲದೇ ಹೋದರೆ ನಮ್ಮ ದನಕರುಗಳನ್ನು ಅದು ದಿನಕ್ಕೊಂದರಂತೆ ಕೊಲ್ಲುತ್ತದೆ' ಎಂದು ದೈನ್ಯದಿಂದ ಹೇಳಿದರು. ಅರಣ್ಯಾಧಿಕಾರಿಯಾಗಿದ್ದರಿಂದ ಈ ಉಪದ್ರವಿ ಚಿರತೆಯನ್ನು ಕೊಂದು ಹಳ್ಳಿಗರ ಕಷ್ಟ ನಿವಾರಿಸಬೇಕಾದದ್ದು ನನ್ನ ಕರ್ತವ್ಯವಾಗಿತ್ತು.

ಆ ಚಿರತೆಯ ಬಗ್ಗೆ ಒಂದಷ್ಟು ಮಾಹಿತಿ ಸಂಗ್ರಹಿಸಿದೆ. ಹಳ್ಳಿಯಿಂದ ಒಂದು ಮೈಲು ಅಂತರದ ಕಾಡಿನಲ್ಲಿ ಹಾಳುಬಾವಿಯೊಂದಿತ್ತು, ನೀರಿಲ್ಲದ ಒಣ ಹಾಳು ಬಾವಿ. ಗಿಡಗಂಟಿಗಳಿಂದ ಮುಳ್ಳುಕಂಟಿಗಳಿಂದ ತುಂಬಿಕೊಂಡಿದ್ದ ಆಬಾವಿ ಒಂದು ಅಭೇದ್ಯ ಕೋಟೆಯ ಹಾಗಿತ್ತು. ಅಲ್ಲಿಯೇ ವಾಸವಾಗಿತ್ತು ಈ ಚಿರತೆ.

ಹಳ್ಳಿಗರಿಗೆ ನಾನು ಚಿರತೆಯನ್ನು ಕೊಲ್ಲುವ ಆಶ್ವಾಸನೆ ಕೊಟ್ಟೆ. ಅದಕ್ಕಾಗಿ ತಕ್ಕ ಏರ್ಪಾಟುಗಳನ್ನು ಮಾಡುವಂತೆ ಹೇಳಿದೆ. ಕತ್ತೆಯ ಕಳೇ



ಮರವನ್ನು ಚಿರತೆ ಮುಚ್ಚಿಟ್ಟಿರುವ ಸ್ಥಳದ ಸಮೀಪ ಮರವೊಂದರ ಮೇಲೆ ಬೇಟೆಗಾಗಿ ಮಂಚವನ್ನು ಸಿದ್ಧಪಡಿಸುವ ಬಗ್ಗೆ ತಿಳಿಸಿದೆ. ಆದರೆ ಮಂಚವನ್ನು ಕಟ್ಟಲು ಅನುಕೂಲವಾದ ಮರಗಳು ಅಲ್ಲಿ ಇಲ್ಲವೆಂದು ತಿಳಿಯಿತು. 'ಹಾಗಾದರೆ, ಇರುವ ಮರದಲ್ಲೇ ಗಟ್ಟಿಯಾದ ರೆಂಬೆಯೊಂದನ್ನು ಆಯ್ದು ಮಲಗುವ ಹೊರಸನ್ನು ತಂದು ಹಗ್ಗದಿಂದ ತೊಟ್ಟಿಲದ ಹಾಗೆ ಕಟ್ಟಿ ಎತ್ತರಕ್ಕೇರಿಸಿ ಭದ್ರವಾಗಿ ನಿಲ್ಲಿಸಿರಿ' ಎಂದೆ. ಅವರು ಹಾಗೇ ಮಾಡಿ ಮುಗಿಸಿದ ಮೇಲೆ ನಾನು ಮಧ್ಯಾಹ್ನ ವ್ಯವಸ್ಥೆ ಸರಿಯಾಗಿದೆಯೇ ಎಂದು ಪರೀಕ್ಷಿಸಿಕೊಂಡು ಬಂದೆ. ವ್ಯವಸ್ಥೆ ಸರಿಯಾಗಿತ್ತು. ರಾತ್ರಿ ಅಲ್ಲಿ ಕುಳಿತು ಚಿರತೆ ಬಂದ ಕೂಡಲೇ ಹೊಡೆಯಲು ನಿರ್ಧರಿಸಿದೆ.

ಫಾರೆಸ್ಟರ್ ಮತ್ತು ಪಿ. ಎಸ್. ಐ. ನಡುವಿನ ವಿವಾದದ ಇತ್ಯರ್ಥಕ್ಕೆ ನನ್ನೊಂದಿಗೆ ಬಂದಿದ್ದ ಪೋಲೀಸು ಅಧಿಕಾರಿ ನನ್ನ ಹಳೆಯ ಮಿತ್ರರು, ಒಳ್ಳೆಯ ಕ್ರೀಡಾಪಟು. ಚಿರತೆಯ ಬೇಟೆಗೆ ನನ್ನೊಂದಿಗೆ ಅವರನ್ನು ಕರೆದೆ. ಅದಕ್ಕಾಗಿ ಎಲ್ಲಾ ಏರ್ಪಾಡುಗಳೂ ಆಗಿವೆ ಎಂದೆ. ಅವರು ಅದಕ್ಕಾಗಿ ಕೃತಜ್ಞತೆ ಅರ್ಪಿಸಿ, "ನಾನು ಒಳ್ಳೆ ಟೆನ್ನಿಸ್ ಆಟಗಾರ. ಚೆಂಡು ಹೊಡೆದು ಗೊತ್ತಿದೆಯೇ ಹೊರತು ಚಿರತೆಗೆ ಗುಂಡು ಹೊಡೆದು ಗೊತ್ತಿಲ್ಲ. ಹೇಗಾದರೂ ಆ ಹೀದೆಯನ್ನು ತೋರಿಸಿ ಬಿಡಿ" ಎಂದರು.

ತಡಸ ಒಂದು ಗ್ರಾಮ. ಹುಬ್ಬಳ್ಳಿಯಿಂದ ಶಿರ್ಸಿಗೆ ಹೋಗುವ ಮಾರ್ಗದಲ್ಲಿದೆ. ಆ ದಿನಗಳಲ್ಲಿಯೂ ಆ ಮಾರ್ಗದಲ್ಲಿ ವಾಹನ ಸಂಚಾರ ತೀವ್ರತರವಾಗಿತ್ತು. ಹೀಗಾಗಿ ನಾನು ಬೇಟೆಗಾಗಿ ಮಂಚವನ್ನೇರಲು ಕಾಯಬೇಕಾಯಿತು. ಸೂರ್ಯಾಸ್ತದ ನಂತರ ಕತ್ತಲು ಆವರಿಸಿದ ಮೇಲೆ ನಾನು ನನ್ನ ೧೨ ಬೋರ್ ಡಬಲ್ ಬ್ಯಾರಲ್ ಬಂದೂಕನ್ನು, ಅರ್ಧ ಡಜನ್ ಕಾರ್ಟ್ರಿಜ್‌ಗಳನ್ನೂ, ಎರಡು–ಮೂರು ಬುಲೆಟ್‌ಗಳನ್ನೂ ಮತ್ತು ಕೆಲವು ಬಕ್‌ಶಾಟ್‌ಗಳನ್ನೂ ತೆಗೆದುಕೊಂಡೆ. ನನ್ನ ಹತ್ತಿರ ಒಂದು ೫ ಸೆಲ್ಲುಗಳ ಟಾರ್ಚ್ ಇತ್ತು. ಅದನ್ನು ಬಂದೂಕಿಗೆ ಕೂಡಿಸಿದೆ. ಹೀಗೆ ಬಂದೂಕಿಗೆ ಟಾರ್ಚ್ ಕೂಡಿಸುವುದು ಬೇಟೆಯಲ್ಲಿ ಬಹಳ ಉಪಯುಕ್ತ ಕ್ರಮ. ಇದರಿಂದ ಗುರಿ ಹಿಡಿಯದೇ ಬೇಟೆಯಾಡಬಹುದು. ಸ್ವಲ್ಪ ಜಾಗರೂಕನಾಗಿ ಹೊಡೆದುಬಿಟ್ಟರಾಯಿತು – ಗುಂಡು ಪ್ರಾಣಿಯ ಗುಂಡಿಗೆಯನ್ನು ಸೀಳಿತೆಂದೇ ತಿಳಿಯಿರಿ.

ಗುಂಡು ಹಾರಿಸುವುದಕ್ಕಿಂತ ಮೊದಲು ನಾನು ಬಂದೂಕಿನ ಬಲ ಬ್ಯಾರಲ್‌ನ್ನು ಬಾಲ್ ಕಾಟ್ರಿ

ಜ್‌ನಿಂದ ಮತ್ತೊಂದು ಬ್ಯಾರಲ್ಲನ್ನು ಬಕ್‌ಶಾಟ್ ಕಾರ್ಟಿಜ್ಜಿನಿಂದ ಲೋಡ್ ಮಾಡಿದ್ದೆ. ಎರಡನ್ನೂ ಒಂದೇ ಸಲ ಹಾರಿಸಿದ್ದು ನನ್ನ ಬೇಟೆಗಾರಿಕೆಯ ವೈಶಿಷ್ಟ್ಯ. ಚಿರತೆ ಬರುವರೆಗೆ ನಾನು ಕಾಯುತ್ತ ಕೂಡಬೇಕಾಯಿತು. ಪ್ರವಾಸಿ ಮಂದಿರದ ದೀಪಗಳನ್ನೆಲ್ಲ ಆರಿಸಿದಾಗ ರಾತ್ರಿ ೯-೩೦. ಚಿರತೆ ತಾನಡಗಿದ್ದಲ್ಲಿಂದ ಮೆಲ್ಲನೇ ಮೇಲೆ ಬಂದಿತು. ಕತ್ತೆಯ ಕಳೇಬರದ ಕಡೆ ಒಂದೊಂದೇ ಹೆಜ್ಜೆ ಇಡುತ್ತಿದ್ದಂತೆಯೇ ಮರದಲ್ಲಿ ನಿದ್ರಿಸುತ್ತಿದ್ದ ಮಂಗಗಳು ಎಚ್ಚೆತ್ತು ಕಿರುಚಾಡತೊಡಗಿದವು. ಹೀಗೆ ಮಂಗಗಳು ಕಿರುಚಾಡತೊಡಗುವುದೆಂದರೆ ಹುಲಿ ಚಿರತೆ ಅಥವಾ ಹಿಂಸ್ರಪಶು ಕೆಲವೇ ನಿಮಿಷಗಳಲ್ಲಿ ದಾಳಿ ಮಾಡಲಿದೆ ಎಂದು ಅರ್ಥ. ಈ ಹೊತ್ತಿಗೆ ನಾನು ಮೈಯೆಲ್ಲಾ ಕಣ್ಣಾಗಿಸಿಕೊಂಡು ಕುಳಿತೆ. ಎಡಗಡೆಗೆ ಬಂದೂಕು ಎದೆಗೊತ್ತಿ ಹಿಡಿದೆ. (ನನ್ನ ಬಲಗಣ್ಣಿನ ದೃಷ್ಟಿ ಸರಿಯಾಗಿರಲಿಲ್ಲ.) ಚಿಕ್ಕಸ ಗತಿಯಲ್ಲಿ ಚಿರತೆ ಸಾಗಿ ಬಂತು. ಅದು ನನಗೆ ಗೊತ್ತಾಗುತ್ತಿದ್ದುದು ಅದು ಕತ್ತೆಯ ಕಳೇಬರದ ಮೇಲೆ ಇದ್ದ ಕಂಟಿಗಳನ್ನು ಬಾಯಿಂದ ಕಾಲುಗಳಿಂದ ಸರಿಸತೊಡಗಿದಾಗಲೆ. ಅದು ಅಲ್ಲಿಯೇ ಕುಳಿತು ಕತ್ತೆಯ ಮಾಂಸಗಳನ್ನು ತಿನ್ನುವುದು ಎಂದುಕೊಂಡೆ. ಆದರೆ ಹಾಗೆ ಮಾಡಲಿಲ್ಲ. ಬದಲು ಕತ್ತೆಯ ಕಳೇಬರವನ್ನೇ ಬಾಯಿಂದ ಕಚ್ಚಿ ಎಳೆದುಕೊಂಡು ಒಯ್ಯತೊಡಗಿತು. ಬಿಟ್ಟರೆ ಮತ್ತೆ ಸಿಕ್ಕದೆಂದು ಯೋಚಿಸಿ ನಾನು ಬಂದೂಕನ್ನು ಚಿರತೆಯ ಎದೆಗೆ ಗುರಿಯಿಟ್ಟು ಎರಡೂ ಬುಲೆಟ್‌ಗಳನ್ನು ಒಮ್ಮೆಲೇ ಹಾರಿಸಿದೆ.

ಬಾಯಿಯಲ್ಲಿ ಕಚ್ಚಿ ಹಿಡಿದಿದ್ದ ಕಳೇವರವನ್ನು ನೆಲಕ್ಕೆಸೆದ ಚಿರತೆ ಒಂದೇ ನೆಗೆತಕ್ಕೆ ೧೫೦ ಅಡಿ ದೂರ ಹಾರಿ ನೆಲಕ್ಕೆ ಬಿತ್ತು. ಸಾಯುವ ಸಂಕಟ ತಾಳಲಾರದೇ ಬಾಯಲ್ಲಿ ಒಂದು ಕಲ್ಲನ್ನು ಕಚ್ಚಿ ಹಿಡಿದಿತ್ತು. ನಾನು ವೇಳೆ ನೋಡಿಕೊಂಡೆ, ೧೦ ಗಂಟೆಯಾಗಿತ್ತು. ನನ್ನ ಸಿಬ್ಬಂದಿಯವರಿಗೆ ಸೀಟಿ ಯೂದಿದೆ. ಇನ್ನೂ ಸ್ವಲ್ಪ ಹೊತ್ತು ಕಾಯಲು ಹೇಳಿದೆ, ಚಿರತೆ ಸತ್ತಿದೆಯೋ ಎಂಬುದನ್ನು ಖಾತ್ರಿ ಮಾಡಿಕೊಳ್ಳಲೋಸುಗ. ಅವರು ಮರದ ಬಳಿ ಬಂದು. ನಾನು ಕೆಳಗಿಳಿಯಲು ಏಣಿಯನ್ನು ಹಿಡಿದರು. ಅವರೆಲ್ಲ ಸತ್ತ ಚಿರತೆಯನ್ನು ನೋಡಲು ತುಂಬ ಕಾತುರರಾಗಿದ್ದರು. ಆದರೆ ಅವರಿಗೆ 'ಈಗ ಬೇಡ. ಮುಂಜಾನೆ ನೋಡೋಣ' ಎಂದೆ. ಬಂದೂಕಿನ ಸದ್ದು ಕೇಳಿದ ನನ್ನ ಮಿತ್ರ ಪೋಲೀಸು ಅಧಿಕಾರಿ ಮತ್ತು ಫಾರೆಸ್ಟರರು ನಾನು ಚಿರತೆಯನ್ನು ಕೊಲ್ಲುವಲ್ಲಿ ವಿಜಯಿಯಾದೆನೆಂದು ತಿಳಿದು ಅಭಿನಂದಿಸಲು ಬಂದರು.

ಮರು ಮುಂಜಾನೆ ನಾವೆಲ್ಲ ಚಿರತೆಯ ಶವವನ್ನು ನೋಡಲು ಹೋದೆವು. ನೆಲಕ್ಕೊರಗಿ ಬಿದ್ದಿತ್ತು ಚಿರತೆ. ಬಾಯಲ್ಲಿ ಕಲ್ಲನ್ನು ಬಲವಾಗಿ ಕಚ್ಚಿ ಹಿಡಿದಿತ್ತು. ಅದು ದೊಡ್ಡದಾದ ಚಿರತೆಯಾದ್ದರಿಂದ ನಾನು ನೇರವಾಗಿ ಅದರ ಎದೆಗೆ ಗುರಿಯಿಟ್ಟು ಹೊಡೆದಿದ್ದೆ. ಗುರಿ ತಪ್ಪಲಿಲ್ಲ. ಈ ವರೆಗಿನ ನನ್ನ ಚಿರತೆ ಬೇಟೆಗಳಲ್ಲಿ ಗುಂಡು ಬಡಿದ ತಕ್ಷಣವೆ ಚಿರತೆ ಸತ್ತುಬಿದ್ದಿತ್ತು. ಇದು ಹಾಗಲ್ಲ, ಸಿಟ್ಟಿನಿಂದ ನೆಟಿನು ನೆಗೆದು ದೂರಕ್ಕೆ ಬಿದ್ದಿತ್ತು.

೧೯೩೧ರಲ್ಲಿ ಖೊಡ್ಲಿಯಲ್ಲಿ ಹೊಡೆದ ಚಿರತೆಗಿಂತ ಈ ಚಿರತೆ ದೊಡ್ಡದು. ●

---

ಇಂಗ್ಲೆಂಡ್‌ನ ಇಪ್ಸ್‌ವಿಚ್‌ನ ಕೇವಲ ೮೧ ವರ್ಷದ ರಾಬರ್ಟ್ ಕಲೂಸರ್ ಮತ್ತು ಕೇವಲ ೮೩ ವರ್ಷದ ಶ್ರೀಮತಿ ಅಲೀಸ್ ಸ್ಟೋರ್ಟ್‌ಫಲ್ ಕೊನೆಗೂ (ಮರು) ಮದುವೆಯಾದವರು!

ಅವರು ತಮ್ಮ ಹದಿಹರೆಯದಲ್ಲಿ ಪರಸ್ಪರರನ್ನು ತೀವ್ರವಾಗಿ ಲವ್ ಮಾಡುತ್ತಿದ್ದರಂತೆ. ಅದು ೧೯ನೇ ಶತಮಾನದ ಕೊನೆಗಾಲ ಅನ್ನಿ. ಆದರೆ ದುರದೃಷ್ಟವಶಾತ್ ಅವರಿಬ್ಬರೂ ಬೇರೆ ಬೇರೆಯವರನ್ನು ಆಗ ಮದುವೆಯಾಗಬೇಕಾಯಿತು -ಅವರ ಅಪ್ಪ ಅಮ್ಮಂದಿರು ಆಗ ಅವರ 'ರೋಮಾನ್ಸ್'ಗೆ ಅಡಚಣೆಯೊಡ್ಡಿದ್ದರಿಂದ. ಈಗ ಆ ಅಪ್ಪ ಅಮ್ಮಂದಿರು ಹಾಗೂ ಅವರ ಮೊದಲ ಜೀವನ ಸಂಗಾತಿಗಳು 'ಗೊಟಕ್' ಅಂದುದರಿಂದ ದಾರಿ ಸುಗಮವಾಗಿ ಮದುವೆಯಾಗಲು ಸಾಧ್ಯವಾಯಿತಂತೆ!

—ಎಸ್. ವಿಶ್ವನಾಥ

# 'ಶನಿ' ಗ್ರಹವೋ? ನಕ್ಷತ್ರವೋ?

ಪ್ರಫುಲ್ಲಚಂದ್ರ

ಸೌರಮಂಡಲದಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿರುವ ಶನಿವಲಯಗಳು ಬಹುಕಾಲದಿಂದಲೂ ವಿಗೋಳಶಾಸ್ತ್ರಜ್ಞರಿಗೆ ಸವಾಲಾಗಿ ನಿಂತಿವೆ. ಪೃಥ್ವಿಗಿಂತ ಹತ್ತು ಪಟ್ಟು ಸೂರ್ಯನಿಂದ ದೂರವಿರುವ ಈ ಗೋಲ ಸಾಕಷ್ಟು ಪ್ರಕಾಶಮಾನವಾಗಿ ಹೊಳೆಯುತ್ತದೆ. ಕೆಲವರು ಇದಕ್ಕೆ ನಕ್ಷತ್ರದಂತೆ ಸ್ವಯಂಪ್ರಕಾಶವಿರಬಹುದು ಎಂದು ಊಹಿಸಿದ್ದರು. ಆಧುನಿಕ ಉಪಕರಣಗಳಿಂದ ಪರೀಕ್ಷಿಸಿದಾಗ ಊಹೆ ತಪ್ಪೆಂದು ತಿಳಿಯಿತು. ಗೋಲದ ಮೇಲ್ಮೈಯ ವಾತಾವರಣಕ್ಕೆ ಬೆಳಕನ್ನು ಪರಾವರ್ತನಗೊಳಿಸುವ ಸಾಮರ್ಥ್ಯ ಹೆಚ್ಚಿದೆ. ಸೂರ್ಯನ ಬೆಳಕಿನೊಂದಿಗೆ ಬೆರೆತು ಬರುವ ಹತ್ತಿರದ ನಕ್ಷತ್ರಗಳ ಪ್ರಕಾಶವನ್ನೂ ಶನಿಗೋಲ ಪರಾವರ್ತಿಸುವದು. ಆದರೆ ಮುಖ್ಯ ಗೋಲದ ಸುತ್ತಲಿನ ವಲಯುಗಳಿಗೆ ಬೆಳಕನ್ನು ಹೀರುವ ಗುಣವಿದೆ. ಅಂತಲೇ ಅವು ಬರಿಗಣ್ಣಿಗೆ ಕಾಣಿಸುವದಿಲ್ಲ. ಪರಸ್ಪರ ವಿರುದ್ಧ ಗುಣಧರ್ಮಗಳಿರುವ ವಸ್ತುಗಳ ಭಾಂಡಾರ 'ಶನಿ' ತನ್ನ ವೈಚಿತ್ರ್ಯಗಳಿಂದ ವಿಜ್ಞಾನಿಗಳನ್ನು ದಿಗ್ಭ್ರಮೆಗೊಳಿಸಿದ್ದಾನೆ. ವಾಮನಾಕಾರದ ಬ್ರಹ್ಮಾಂಡದಂತಿರುವ ಶನಿಗೋಲ ಮತ್ತು ಅದರ ವಲಯುಗಳು 'ಶನಿ' ಒಂದು ನಕ್ಷತ್ರವಾಗಿರಲು ಸಾಧ್ಯವೇ ಎಂಬ ಶಂಕೆಗೆ ಜನ್ಮ ಕೊಟ್ಟಿವೆ. ರೇಡಿಯೋ ದೂರದರ್ಶಿ, ಕೃತಕ ಉಪಗ್ರಹಗಳಿಂದ ಸಂಗ್ರಹಿಸಿದ ಮಾಹಿತಿ ಈ ವಿಷಯದ ಮೇಲೆ ಹೊಸ ಬೆಳಕನ್ನು ಚೆಲ್ಲಲಿದೆ.

ಅತ್ಯಾಧುನಿಕ ಉಪಕರಣಗಳಿಂದ ಕೂಡಿದ ಬಾಹ್ಯಾಕಾಶ ನೌಕೆಯೊಂದನ್ನು ೧೯೭೦ ರಲ್ಲಿ ಅಮೇರಿಕ ಹಾರಿಬಿಟ್ಟಿತು. ಅದು ನಮ್ಮ ಸೌರಮಂಡಲವನ್ನು ದಾಟಿ ಹತ್ತಿರದ ನಕ್ಷತ್ರದ ಕಡೆಗೆ ಪ್ರಯಾಣ ಬೆಳಸಿ ಗಂಟೆಗೆ ಸರಾಸರಿ ೪೦ ಸಾವಿರ ಮೈಲು ವೇಗದಿಂದ ಸಾಗುತ್ತಲಿದೆ. ಸುಮಾರು ೫೦ ವರ್ಷಗಳ ಅಖಂಡ ಪ್ರಯಾಣದ ನಂತರ ಗುರಿ ತಲಪುವ ನಿರೀಕ್ಷೆಯಿದೆ. ನವಗ್ರಹಗಳಾಚೆ ಶೂನ್ಯಾಕಾಶದಲ್ಲಿ ಬಹುದೂರ ಸಾಗಿ ಅಲ್ಲಿಂದ ನಮ್ಮ ಸೂರ್ಯ ಮತ್ತು ಸೌರಮಂಡಲ ಹೇಗೆ ಕಾಣುವದು ಎನ್ನುವದನ್ನು ತಿಳಿಯಲು ರೇಡಿಯೋ ದೂರದರ್ಶಿ, ಚಲಚಿತ್ರ ಕ್ಯಾಮರಾ ಮುಂತಾದ ಆಧುನಿಕ ಸಲಕರಣೆಗಳು ಭೂಮಿಗೆ ಫೋಟೊ ಮತ್ತಿತರ ಮಹತ್ವದ ಮಾಹಿತಿ ಕಳಿಸಿಕೊಟ್ಟಿವೆ. ಅಂತರಿಕ್ಷ ನೌಕೆ ನಮ್ಮ ಸೌರವ್ಯೂಹ ದಾಟಿ ಹೋಗುವ ಮುನ್ನ ಗುರು, ಶನಿ, ಯುರೇನಸ್, ಪ್ಲುಟೋ ಗ್ರಹಗಳ ಮತ್ತು ಅವುಗಳ ಉಪಗ್ರಹಗಳ ಚಲನವಲನದ ಬಗ್ಗೆ ಸಾಕಷ್ಟು ಮಾಹಿತಿಯನ್ನು ಟಿ.ವಿ. ತೆರೆಗೆ ಕಳಿಸಿಕೊಟ್ಟಿದೆ. ನಾವು ಕಾಣುವ ಆಕಾಶಗಂಗೆ ಒಂದು ಬ್ರಹ್ಮಾಂಡ; ಅದರ ಒಂದು ಮೂಲೆಯಲ್ಲಿ ಸೂರ್ಯನಿದ್ದಾನೆ. ೧೯೭೯ರಿಂದ ೧೯೮೯ರ ವರೆಗೆ ಅಂತರಿಕ್ಷ ನೌಕೆ ಈ ಬ್ರಹ್ಮಾಂಡದ ಅನೇಕ ಚಿತ್ರಗಳನ್ನು ಕಳಿಸಿತು. ಗಣಕಯಂತ್ರದ ನೆರವು ಪಡೆದು ತುಂಡು ಚಿತ್ರಗಳನ್ನು ಜೋಡಿಸಿ



ಪೂರ್ತಿ ಮಾಡಿ ನೋಡಿದಾಗ ಆಕಾಶಗಂಗೆಯ ಉದ್ದ ಸುಮಾರು ೯ ಲಕ್ಷ ಪ್ರಕಾಶ ವರ್ಷಗಳು, ಮತ್ತು ಮುಖ್ಯ ನಕ್ಷತ್ರ ಸೂರ್ಯನಿಂದ ಸುಮಾರು ೪ ಲಕ್ಷ ಪ್ರಕಾಶ ವರ್ಷಗಳಷ್ಟು ದೂರದಲ್ಲಿದೆ. ಮುಖ್ಯ ನಕ್ಷತ್ರದ ವ್ಯಾಸ ಸುಮಾರು ೫೦ ಸಾವಿರ ಪ್ರಕಾಶ ವರ್ಷಗಳು. ಉಷ್ಣತಾಮಾನ ಸೂರ್ಯನಿಗಿಂತ ನೂರು ಪಾಲು ಹೆಚ್ಚು ಅಸಂಖ್ಯ ಚಿಕ್ಕ ಪುಟ್ಟ ನಕ್ಷತ್ರಗಳು ತಮ್ಮ ಸೌರವ್ಯೂಹಗಳ ಸಮೇತ ಬ್ರಹ್ಮಾಂಡದಲ್ಲಿ ಪರಿಭ್ರಮಣ ಮಾಡುತ್ತಲಿವೆ. ನಮ್ಮ ಸೂರ್ಯ ಮತ್ತು ಅವನನ್ನಾಧರಿಸುವ ಸೌರಮಂಡಲ ಸುಮಾರು ಸೆಕೆಂಡಿಗೆ ೧೨ ಮೈಲಿನಷ್ಟು ವೇಗದಿಂದ ಚಲಿಸುತ್ತಿದೆ. ಈ ಹೊಸ ಸಂಗತಿಗಳೊಂದಿಗೆ ಶನಿ ವಲಯಗಳ ಬಗ್ಗೆಯೂ ಸಾಕಷ್ಟು ಮಾಹಿತಿ ದೊರಕಿದೆ.

ಪ್ರತಿ ವಸ್ತುವೂ ಅವರ ಗಾತ್ರ, ಚಲನೆಯ ವೇಗ, ವೈಶಾವು ಮುಂತಾದ ಮಾಹಿತಿಗಳನ್ನು ಹೊತ್ತಿರುವ 'ರೇಡಿಯೋ ಸಂಕೇತ'ಗಳನ್ನು ಕಳಿಸುವದು. ಅನೇಕ ಸಂಕೇತಗಳು ವಿಶ್ವದಲ್ಲಿ ಪ್ರಸಾರಗೊಳ್ಳುತ್ತಿದ್ದಾಗ್ಯೂ ಪ್ರತಿಯೊಂದರ ವೈಶಿಷ್ಟ್ಯಕ್ಕೆ ಧಕ್ಕೆಯುಂಟಾಗಿಲ್ಲ. ಬೆಳಕು ಒಂಥರಲ್ಲೊಂದು ಬೆರೆತರೆ ಬೇರೆಯಾಗಿ ಗುರುತಿಸುವದು ಕಷ್ಟ. ಮತ್ತು ಕಾಜಿನ ಗೋಲಕಗಳಿಂದ ಹಾಯ್ದು ಬರುವಾಗ ಎಷ್ಟೋ ಮಾಹಿತಿಗಳು ಉಪಕರಣದ ಬಿಡಿ ಭಾಗಗಳಲ್ಲಿಯೇ ಹೀರಲ್ಪಟ್ಟು ನಾಶವಾಗುವವು.

೧೭ನೇ ಶತಮಾನದಲ್ಲಿ ಈ ರೇಡಿಯೋ ಅಲೆಗಳ ಉಪಯೋಗದಿಂದ ಖಗೋಲ ವಿಜ್ಞಾನಕ್ಕೆ ಸಾಕಷ್ಟು ಪ್ರಯೋಜನವಿದೆ ಎಂದು ತಿಳಿದು ರೇಡಿಯೋ ದೂರದರ್ಶಿಯು ಜನ್ಮವಾಯಿತು. ರೇಡಿಯೋ ದೂರದರ್ಶಿಯಲ್ಲಿ ವಸ್ತುವನ್ನು ಸುಮಾರು ೧ ಲಕ್ಷಪಟ್ಟು ದೊಡ್ಡದಾಗಿ ಕಾಣಲು ಸಾಧ್ಯ. ಮತ್ತು ಎರಡು ನೆರೆ–ಹೊರೆಯ ವಸ್ತುಗಳು ದೂರದಿಂದ ನೋಡಿದಾಗ ಒಂದೇ ಆಗಿ ಕಾಣುವ ದೃಷ್ಟಿಮಾಂದ್ಯದ ಕೊರಗನ್ನು ತಪ್ಪಿಸಲು ಸಾಧ್ಯ. ಉದಾಹರಣೆಗೆ ಚಂದ್ರನ ಮೇಲೆ ಓಡಾಡುವ ಇರುವೆಯ ಸಾಲನ್ನು ರೇಡಿಯೋ ದೂರದರ್ಶಿಯಲ್ಲಿ ವೀಕ್ಷಿಸಿದರೆ ಸಾಲಿನಲ್ಲಿರುವ ಇರುವೆಗಳನ್ನು ಎಣಿಸಬಹುದು.

೧೭ನೇ ಶತಮಾನದಿಂದ ೨೦ನೇ ಶತಮಾನದ ವರೆಗೂ ಶನಿಗ್ರಹದ ವೀಕ್ಷಣೆ ನಡೆದೇ ಇದೆ. ಗೆಲಿಲಿಯೋ ಕಂಡಂತೆ ವಲಯಗಳು ತಮ್ಮ ಕಕ್ಷೆಯನ್ನು ಬದಲಿಸುತ್ತವೆ. ಹಾಗು ಮುಖ್ಯ ಗೋಲದ ಮೇಲೆ ಅವುಗಳ ನೆರಳು ಚಲಿಸುತ್ತ ಪಟ್ಟಿಗಳನ್ನುಂಟು ಮಾಡುವದು. ದಟ್ಟವಾದ ವಾತಾವರಣವಿರುವ ಶನಿ ಕಕ್ಷೆ ೨೬° ಕೋನ ಮಾಡಿಕೊಂಡು ವೈ ಸುತ್ತುತ್ತದೆ. ಋತುಮಾನಗಳಿವೆ. ೧೮ನೇ ಶತಮಾನದ ಮಧ್ಯದ ವರೆಗೂ ಶನಿವಲಯಗಳು ಅನಿಲ ಮಿಶ್ರಣದಿಂದ ತುಂಬಿವೆ ಎಂದು ನಂಬಲಾಗಿತ್ತು. ಸುಮಾರು ೨೦೦ ಇಂಚು ವ್ಯಾಸದ ಬೃಹತ್

ದೂರದರ್ಶಿಯಲ್ಲಿ ೧೮೬೦–೬೧ರಲ್ಲಿ ಶನಿವಲಯಗಳನ್ನು ಅಭ್ಯಸಿಸಲಾಯಿತು. ಭೂಮಿಯ ಕಕ್ಷೆ (ಸೂರ್ಯನನ್ನು ಸುತ್ತುವ ಪಥ) ಶನಿವಲಯಗಳ ಕಕ್ಷಾ ಪಾತಳಿಗೆ ಸರಿಹೊಂದಿ ಕೆಲ ಕಾಲ ವಲಯಗಳು ಕಾಣಿಸಲಿಲ್ಲ. ಅವಕ್ಕೆ ಬದಲು ಮುಖ್ಯ ಗೋಳದ ಮೇಲೆ ಒಂದು ಕಪ್ಪು ರೇಖೆ ಕಂಡಿತು. ಈ ರೇಖೆಯನ್ನು ದೂರ ದರ್ಶಿಯಲ್ಲಿ ಕಂಡಾಗ ಅನೇಕ ಸಣ್ಣ ಸಣ್ಣ ಕಪ್ಪು ಕಲೆಗಳು ಕಾಣಿಸಿದವು. ವಲಯಗಳಲ್ಲಿ ಅನಿಲಗಳೊಂದಿಗೆ ಘನವಸ್ತುಗಳೂ ತೇಲುತ್ತಲಿವೆ. ಅವುಗಳ ನೆರಳೇ ಆ ರೇಖೆ. ಮತ್ತು ರೇಖೆಯ ದಪ್ಪದಿಂದ ಲೆಕ್ಕ ಹಾಕಲಾಗಿ ವಲಯಗಳ ದಪ್ಪ ಸುಮಾರು ೧೦–೧೫ ಮೈಲು ಎಂದು ತಿಳಿಯಿತು. ಅಮೇರಿಕ ಕಳಿಸಿದ ಅಂತರಿಕ್ಷ ನೌಕೆಯಿಂದ ೧೯೭೯ರಲ್ಲಿ ಸಂಗ್ರಹಿಸಲಾದ ಚಿತ್ರಗಳು ಶನಿವಲಯದಲ್ಲಿ ಅಸಂಖ್ಯ ಚಿಕ್ಕ ಪುಟ್ಟ ತೇಲಾಡುವ ಕಲ್ಲುಗಳಿವೆ. ಪ್ರದಕ್ಷಿಣೆ ಹಾಕುವಾಗ ದಟ್ಟವಾದ ವಾತಾವರಣದ ಕಾರಣದಿಂದಾಗಿ ಅವುಗಳು ಬಣ್ಣ ಬದಲಿಸಿದಂತೆ ಭಾಸವಾಗುತ್ತದೆ (ಉದಯಿಸುವಾಗ ಮತ್ತು ಅಸ್ತಮಿಸುವಾಗ ಸೂರ್ಯ–ಚಂದ್ರರು ಕೆಂಪು, ಕತ್ತಲೆ, ಹಳದಿ ಬಣ್ಣದವರಾಗಿ ಕಾಣಿಸುವುದನ್ನು ಇಲ್ಲಿ ಸ್ಮರಿಸಬಹುದು) ಎಂಬ ಸಂಗತಿ ತಿಳಿಯಿತು.

ಶನಿಗೋಲವು ಗಾತ್ರದಲ್ಲಿ ಭೂಮಿಗಿಂತ ೯೫ ಪಟ್ಟು ದೊಡ್ಡದು. ದ್ರವ್ಯರಾಶಿ ಸುಮಾರು ೧೦ ರಷ್ಟಿದೆ. ಆದಾಗ್ಯೂ ಧಾರ್ಢ್ಯ ಸೀಮೆ ಎಣ್ಣೆಗಿಂತ ಕಡಿಮೆ, ೦.೭ ಮಾತ್ರ. ಶನಿಗೋಲ ನೀರಿನಲ್ಲಿ ಸುಲಭವಾಗಿ ತೇಲುವುದು. ಉಷ್ಣತಾಮಾನ ಶೂನ್ಯಕ್ಕಿಂತ ಬಹಳ ಕೆಳಗಿದೆ. ಪರಿಭ್ರಮ್ರಣಾವಧಿ ೧೦ ಗಂಟೆ ೩೦ ನಿಮಿಷಗಳು. ಈ ಗ್ರಹದ ಮೈ ಸುತ್ತುವ ವೇಗ ಧ್ರುವ ಪ್ರದೇಶಗಳಲ್ಲಿ ಹೆಚ್ಚು ಮತ್ತು ಮಧ್ಯಭಾಗದಲ್ಲಿ ಕಡಿಮೆಯಿರುವದು ಅತ್ಯಾಶ್ಚರ್ಯಕರ! ಕಡಿಮೆ ಉಷ್ಣಾಂಶದಲ್ಲೂ ಅನಿಲಗಳೇ ಹೆಚ್ಚಾಗಿ ತುಂಬಿರುವ ಶನಿಗೋಲ ಕಳೆಗುಂದಿರುವ ನಕ್ಷತ್ರದ ಸಂಕೇತ, ಒಟ್ಟು ೯ ಉಪಗ್ರಹಗಳಿವೆ. ಅವರಲ್ಲಿ ಎರಡು ದೊಡ್ಡವು, ಮುಖ್ಯ ಗೋಲದಿಂದ ಸುಮಾರು ೮೦ ಲಕ್ಷ ಮೈಲು ದೂರದಲ್ಲಿದೆ. ಗ್ರಹಗಳಲ್ಲಿಯೇ ಪ್ರಬಲವೆನಿಸಿರುವ 'ಗುರುವಿನ ಉಪಗ್ರಹದ ದೂರ ೬೦ ೪ ಲಕ್ಷ ಮೈಲು ಮಾತ್ರ. ಶನಿ ಅಷ್ಟೊಂದು ದೂರದ ಉಪಗ್ರಹಗಳ ಮೇಲೂ ಅಂಕಿತ ಹೊಂದಿರುವುದು ನಕ್ಷತ್ರದ ಗುಣವನ್ನೇ ಹೋಲುವುದು.

ನಮ್ಮ ಸೌರವ್ಯೂಹದ ತವರು ಮನೆಯಾಗಿರುವ 'ಅಂಡ್ರೊಮೆಡಾ' ಬ್ರಹ್ಮಾಂಡ ನಕ್ಷತ್ರಗಳ ಜೀವನ ಪರಿಚಯ ಮಾಡಿಸುವುದು. ಪರಮಾಣು ಸ್ಫೋಟದ ಶಕ್ತಿಯಿಂದ ಉತ್ಪತ್ತಿಸುವ ಉಷ್ಣತೆ ಮತ್ತು ಕಾಂತಿ ನಕ್ಷತ್ರದ ಜೀವಾಳವೆನಿಸಿದೆ. ಗಣಿತ ಅಣುಸ್ಫೋಟದಿಂದ ಹೊರಹೊಮ್ಮುವ ಅಮಿತ ಶಕ್ತಿಗೆ ಸರಪಣಿ ಕ್ರಿಯೆ ಎನ್ನುವರು. ಕೆಲ ಕಾರಣಗಳಿಂದ ಈ ಸರಪಣಿ ಕ್ರಿಯೆ ಮಧ್ಯದಲ್ಲಿ ತಂಪಾಗಿ ನಿಂತು ಹೋದರೆ ಉಷ್ಣತಾಮಾನ ತಗ್ಗಿ ನಕ್ಷತ್ರವು




"ಧೂಮಪಾನದ ದುಷ್ಪರಿಣಾಮಗಳ ಬಗ್ಗೆ ಈ ಕ್ಷಣದಲ್ಲಿ ಒಂದು ಲೇಖನ ಬರೆಯಬಲ್ಲೆ, ಎರಡೇ ಎರಡು ಪ್ಯಾಕ್ ಸಿಗರೇಟ್ ತರಿಸಿ, ಸಾಕು."

ಸ್ವಯಂಪ್ರಕಾಶವನ್ನು ಕಳೆದುಕೊಳ್ಳುತ್ತದೆ. ಆಗ ಅದರ ಆಕರ್ಷಣಾಶಕ್ತಿ ವೃದ್ಧಿಸಿ ಗಾತ್ರ ಚಿಕ್ಕದಾಗುವದು. ಇದರಿಂದ ಅಂತರಿಕ್ಷದಲ್ಲಿ ಖಾಲಿ ಕತ್ತಲೆಯಿಂದ ತುಂಬಿದ ಜಾಗೆಗಳು ಉದ್ಭವಿಸುವವು. ಆಕಾಶಗಂಗೆಯಲ್ಲಿ ಇಂತಹ ಕಪ್ಪು ರಂಧ್ರಗಳು ಬೇಕಾದಷ್ಟಿವೆ. ಸೌರ ಮಂಡಲದ ಉಗಮ ಎರಡು ನಕ್ಷತ್ರಗಳ ತಿಕ್ಕಾಟದ ಪರಿಣಾಮವೆಂದು ನಂಬಲಾಗಿದೆ. ಕೆಲವು ಖಗೋಳಜ್ಞರ ಅಭಿಮತದಂತೆ ಒಂದು ನಕ್ಷತ್ರ ಸೂರ್ಯ ಆದರೆ ಇನ್ನೊಂದು ಶನಿಗೋಲ. ಶನಿಗೋಲ ಮತ್ತು ವಲಯಗಳು ತೋರುವ ಚಿತ್ರ-ವಿಚಿತ್ರ ಭೌತಿಕ ಗುಣಧರ್ಮಗಳಿಂದಾಗಿ 'ಅದು ನಕ್ಷತ್ರವೇ?' ಎಂಬ ಶಂಕೆಯುಂಟಾಗುವದು ಸಹಜ. ಬ್ರಹ್ಮಾಂಡದಲ್ಲಿ ಚಿಕ್ಕ ನಕ್ಷತ್ರಗಳು ದೊಡ್ಡ ನಕ್ಷತ್ರಗಳನ್ನು ಸುತ್ತು ಹಾಕುವ ದೃಶ್ಯವನ್ನು ಕಾಣುತ್ತೇವೆ. ಗ್ರಹಗಳಂತೆ ಇವುಗಳ ಚಲನೆ ನಿಯಮಿತವಾದುದಲ್ಲ. (ಉದಾ-ಧೂಮಕೇತುಗಳು) ಶನಿಯ ಬೇರೆ ಬೇರೆ ಭಾಗಗಳು ಬೇರೆ ಬೇರೆ ದೈನಂದಿನ ಗತಿಯನ್ನು ಪಡೆದಿರುವದು ನಕ್ಷತ್ರಗಳ ಗುಣವನ್ನು ಸಾರುವದು. ವಲಯಗಳಲ್ಲಿರುವ ಪದಾರ್ಥಗಳಿಗೆ ಬೆಳಕನ್ನು ಹೀರುವ ಅಭ್ಯಾಸ. ಆದರೆ ಮುಖ್ಯ ಗೋಲಕ್ಕೆ ಪ್ರಕಾಶವನ್ನು ಪರಾವರ್ತಿಸಿ ಹೊರ ಚಿಮ್ಮುವ ಆತುರ. ಈ ವೈವಿಧ್ಯ ಎರಡು ವಿಭಿನ್ನ ನಕ್ಷತ್ರಗಳ ತಿಕ್ಕಾಟದ ಪರಿಣಾಮವೆನ್ನಬಹುದಾಗಿದೆ. ಅನಿಲಗಳ ಮಿಶ್ರಣ ಘನರೂಪ ತಾಳದೇ ಉಳಿದಿರುವದು, ಗ್ರಹ ನಿಯಮಕ್ಕೆ ವಿರುದ್ಧವಾಗಿದೆ. ಕಳೆದ ಎರಡು ಶತಮಾನಗಳಿಂದ ಆಕಾಶವನ್ನು ವೀಕ್ಷಿಸಿದಾಗ ಕೆಲ ಸಲ ನಕ್ಷತ್ರಗಳು ಶನಿಗ್ರಹ ಪಥವನ್ನು ಭೇದಿಸಿಕೊಂಡು ಸಮೀಪದಲ್ಲಿ ಸುಳಿದು ಹೋಗುತ್ತವೆ. ಧೂಮಕೇತುಗಳು ನಮ್ಮ ಸೌರವ್ಯೂಹದತ್ತ ಬಂದರೆ ಶನಿವಲಯಗಳು ಕಂಪಿಸಿದಂತೆ ತೋರುವದು ಮತ್ತು ಅವುಗಳ ಪಾತಳಿ ಮೇಲಿಂದ ಮೇಲೆ ಬದಲಾಗುವದನ್ನು ನೋಡಬಹುದು.

ಮಾನವ ಕೃತಕವಾಗಿ ಶನಿಗೋಲದಲ್ಲಿ ಅಣು ಬಾಂಬನ್ನು ಒಂದೇ ಸವನೆ ಸ್ಫೋಟಗೊಳಿಸಿದರೆ ಕಳೆಗುಂದಿದ ನಕ್ಷತ್ರ ಪುನಃ ಚೇತರಿಸಿಕೊಂಡು ಬೆಳಕನ್ನು ಚೆಲ್ಲಬಹುದು. ಆಗ ಸೌರವ್ಯೂಹದಲ್ಲಿ ಎರಡು ಸೂರ್ಯರನ್ನು ಕಾಣುವೆವು. ಶನಿಗ್ರಹ ಕಳೆಗುಂದಿದ ನಕ್ಷತ್ರವೆಂಬ ವಾದ ಸರಿಯಿದ್ದಲ್ಲಿ ಕೃತಕ ಸೂರ್ಯನನ್ನು ಕಾಣುವ ಕಾಲ ದೂರವಿಲ್ಲ. ✿

(ಶನಿವಲಯಗಳಂತೆ ಗುರುವಿಗೂ ನಪ್ಚ್ಯೂನಿಗೂ ವಲಯಗಳಿವೆಯೆಂದು ಇತ್ತೀಚೆ ಗೊತ್ತಾಗಿದೆ. -ಸಂ)



## ಏಳೇಳು !

ನ್ಯೂಯಾರ್ಕಿನ ಜಾರ್ಜ್ ಮೆಕೂ ಎಂಬ ಮಹಿಳೆಯ ಏಳು ಮಕ್ಕಳ ಜನ್ಮದಿನವೂ ಮಾರ್ಚ್ ೭ನೆಯ ತಾರೀಖು ! ಮೊದಲ ಮಗು ಹುಟ್ಟಿದ್ದು ೧೯೫೦ರ ಮಾರ್ಚ್ ೭ಕ್ಕೆ. ಎರಡನೆಯ ಮಗು ೧೯೫೨ರ ಮಾರ್ಚ್ ೭ ರಂದು ಜನಿಸಿತು. ೧೯೫೪ರ ಮಾರ್ಚ್ ೭ ರಂದು ಮೂರನೆಯ ಮಗುವಿನ ಜನ್ಮ. ನಾಲ್ಕನೆಯಾತ ಎರಡು ವರ್ಷದ ನಂತರ ಮಾರ್ಚ್ ೭ ರಂದೇ ಹುಟ್ಟಿದ. ನಂತರದ ಎರಡು ವರ್ಷಗಳಾದಾಗ ಮಾರ್ಚ್ ೭ ರಂದು ಐದನೆಯವ ಜನಿಸಿದರೆ, ಆರನೆಯವ ೧೯೬೦ ರ ಮಾರ್ಚ್ ೭ ರಂದು ಅವತರಿಸಿದ. ೧೯೬೨ ರ ಮಾರ್ಚ್ ಏಳಕ್ಕೆ ಏಳನೆಯವ ಹುಟ್ಟಿದ.

ಆ ಏಳು ಮಕ್ಕಳ ತಾಯಿ ತನ್ನೆಲ್ಲ ಮಕ್ಕಳ ಜನ್ಮದಿನವನ್ನೂ ಪ್ರತಿ ವರ್ಷದ ಮಾರ್ಚ್ ೭ ರಂದು ಬಲು ಅದ್ದೂರಿಯಾಗಿ ಆಚರಿಸುತ್ತಾಳೆ.

# ನಗೆಮಲ್ಲಿಗೆ

"ಹೆಸರಿನ ಹಾಗೇ ಗುಣವೂ ಕೂಡ; ಇದಕ್ಕೆ ಒಂದು ಶ್ರೇಷ್ಠ ಉದಾಹರಣೆ ಕೊಡಬಲ್ಲಿರಾ?" ಮೇಷ್ಟ್ರು ಕೇಳಿದರು.

ಗುಂಡ ಎದ್ದುನಿಂತ. "ಹೆಸರಿನ ಹಾಗೇ ಗುಣವೂ ಕೂಡ ಎಂಬುದಕ್ಕೆ ಶ್ರೇಷ್ಠ ಉದಾಹರಣೆ ಎಂದರೆ ಮಾವಿನಹಣ್ಣು. ಅದು ನೋಡಲಿಕ್ಕೆ ಮಾವಿನಹಣ್ಣಿನ ಹಾಗೇ ಇದೆ. ರುಚಿಯಲ್ಲೂ ಮಾವಿನಹಣ್ಣಿನ-ಹಾಗೇ ಸಿಹಿ ಇದೆ. ಪೇಟೆಯಲ್ಲಿ ಅದನ್ನು ಮಾವಿನಹಣ್ಣು ಎಂದೇ ಕರೆಯುತ್ತಾರೆ. ಅದು ಬೆಳೆಯುವ ಗಿಡಕ್ಕೆ ಮಾವಿನಹಣ್ಣಿನ ಗಿಡ ಅನ್ನುತ್ತಾರೆ. ಅದರ ಬಣ್ಣ ಕೂಡ ಮಾವಿನಹಣ್ಣಿನ ಬಣ್ಣವನ್ನೇ ಹೋಲುತ್ತದೆ. ಮಾವಿನ ಹಣ್ಣಿನಲ್ಲಿರಬೇಕಾದ ಎಲ್ಲಾ ಗುಣ-ಗಳೂ ಮಾವಿನ ಹಣ್ಣಿನಲ್ಲಿವೆ..."

ಮೇಷ್ಟ್ರು ಅರ್ಧಗಂಟೆ ಸುಸ್ತು.

*

ಹಾಲಿನ ಕೇಂದ್ರದವ ನೀರು ಬೆರೆಸಿ ಹಾಲು ಮಾರುತ್ತಾನೆಂಬ ದೂರು ಬಂತು. ಆರೋಗ್ಯಾಧಿಕಾರಿ ಹಾಲಿನ ಕೇಂದ್ರಕ್ಕೆ ಭೇಟಿ ಇತ್ತ. ಅಲ್ಲಿ ಐದಾರು ವರ್ಷದ ಬಾಲಕನಿದ್ದ, ಹಾಲು ಮಾರುವವನ ಮಗ. ಆರೋಗ್ಯಾಧಿಕಾರಿ, "ಏನು ಮಗು, ನಿಮ್ಮಪ್ಪ ಹಾಲು ಮಾರಾಟ ಮಾಡುವ ಮುಂಚೆ ಅದರಲ್ಲಿ ಏನಾದರೂ ಹಾಕ್ತಾರಾ?" ಎಂದು ಕೇಳಿದ.

"ಸುಮ್ನೆ ಹೇಳ್ತೀನಾ? ತಿಂಡಿ ತಿನ್ನೋಕೆ ದುಡ್ಡು ಕೊಟ್ರೆ ಮಾತ್ರ ಹೇಳ್ತೀನಿ." ಅಂದ ಮಗು. ಅತನ ಕೈಗೆ ಎಂಟಾಣೆ ಬಿತ್ತು.

"ಹೌದು. ಹಾಕ್ತಾರೆ" ಅಂದಿತು ಮಗು, "ಹಾಲು ಕೊಡೋಕಿಂತಾ ಮುಂಚೆ ಹಾಲಿನ ಕ್ಯಾನಿನಲ್ಲಿ ಮಾವು (ಅಳತೆ ಪಾತ್ರೆ) ಹಾಕ್ತಾರೆ..."

ರಾಯರು ತಾವು ಮದುವೆ ಯಾಕಾದರೂ ಮಾಡಿಕೊಂಡೆನೋ ಎಂದು ಪಶ್ಚಾತ್ತಾಪ ಪಡುತ್ತ ಕೇಳುತ್ತಿದ್ದರು: "ಅಪ್ಪ ಎಂಥಾ ಕೆಟ್ಟ ಅಡಿಗೆ ಮಾಡ್ತಾಳೆ ಅಂದ್ರೆ ನಮ್ಮ ನಾಯಿ ಕೂಡಾ ಪಕ್ಕದ ಮನೇ ಅನ್ನ ತಿನ್ನುತ್ತೆ."

*

"ನಾನೊಂದು ಹೊಸಾ ನಾಟ್ಕ ಬರದಿ-ದೀನಿ ಅಂದೆನಲ್ಲ; ಈವತ್ತು ಅದರ ಪ್ರಯೋಗ ಇದೆ. ರಾತ್ರಿ ೯ ವರೆಗೆ. ಬಾ" ಅಂದ ನಾಟಕಕರತ್ನ ನರಸಿಂಹಯ್ಯ.

"ಮುಗಿಯೋದೆಷ್ಟೊತ್ಗೆ?" ಕೇಳಿದ ನಾಣಿ.

"ಗೊತ್ತಿಲ್ಲ."

"ಯಾಕೆ?"

"ನಾಟಕದ ಹೆಸ್ರು 'ನಿದ್ರೆ' ಅಂತ. ಸ್ಟೇಜಿನ ಮೇಲೆ-ಬಂದು, ಯಾವ್ಯಾವ ರೀತಿ ನಿದ್ದೆ ಮಾಡಬಹುದು ಅಂತ ತೋರಿಸೋದೆ ನನ್ನ ಧ್ಯೇಯ. ನಮ್ಮಾರ್ಟಿಸ್ಟುಗಳು ಅದ್ರಲ್ಲಿ ಎಷ್ಟು ತಲ್ಲೀನರಾಗ್ತಾರಂದ್ರೆ ಅವರು ನಿಜ-ವಾಗ್ಲೂ-ನಿದ್ದೆ ಮಾಡೋಕೆ ಶುರೂ ಮಾಡ್ತಾರೆ. ಅಂದ್ಮೇಲೆ ಇಷ್ಟೊತ್ಗೇ ಮುಗಿ-ಯುತ್ತೆ ಅಂತ್ಹೇಳೋಕಾಗತ್ತಾ?"

*

ಬುದ್ಧಿ ಸುಧಾರಣಾ ಕೇಂದ್ರದಿಂದ ಗುಂಡನಿಗೊಂದು ಪತ್ರ ಬಂತು.

"ಮಾನನೀಯರೆ,

ನೀವು ನಮ್ಮಲ್ಲಿ ಒಂದು ವಾರದ ಕೋರ್ಸ್ ಪಡೆದು ಅದರ ಲಾಭ ಪಡೆದದ್ದು ನಮಗೆ ಬಹು ಸಂತೋಷದ ವಿಷಯ. ನೀವು ನಿಮ್ಮ ಮಿತ್ರರೊಂದಿಗೆ ಈ ಬಗ್ಗೆ ಚರ್ಚಿಸಿ ನಮ್ಮ ಸಂಸ್ಥೆಯ ಪ್ರಚಾರ ಮಾಡುವಿರೆಂದು ನಂಬಿದ್ದೇವೆ.

ಪಿ. ಸೂ.:- ನೀವು ಕೊನೆಯ ದಿನ ಬೆಳಗ್ಗೆ ಸ್ನಾನ ಮಾಡಲೆಂದು ಬಚ್ಚಲು ಮನೆಗೆ ಹೋದವರು ನೇರವಾಗಿ ಮನೆಗೇ ಹೊರಟುಬಿಟ್ಟಿರಿ- ಟವೆಲ್ ಎಂದು ಕೂಗುತ್ತ. ನಿಮ್ಮ ಆ ಹಸಿಬಟ್ಟೆಗಳನ್ನು ಒಣಗಿಸಿದ್ದೇವೆ.

ಉಳಿದ ಸಾಮಾನುಗಳ ಜತೆ ಇಂದೇ ಕಳಿಸುತ್ತಿದ್ದೇವೆ.

*

ಡಾಕ್ಟರ್ : ನಿಮ್ಮ ಯಜಮಾನ್ರಿಗೆ ನಿನ್ನೆ ರಾತ್ರಿ ನಿದ್ರೆ ಬಂತಾ?

ಮಹಿಳೆ : ನೋಡಿ ಈಗ ಸಂಜೆ ೬ ಗಂಟೆ. ಇನ್ನೂ ನಿದ್ರೆ ಮಾಡ್ತಿದ್ರು ನಿಮ್ಮತ್ರ ಬರೋವರೆಗೂ.

ಡಾಕ್ಟರ್ : ಹೌದಾ?

ಮಹಿಳೆ : ಹಾಂ. ನೀವು ನಾಕಾಣೆ ಪಾವಲಿಯ ಮೇಲೆ ಹಾಕೋ ಅಷ್ಟು ನಿದ್ರೆಪುಡಿ ಹಾಕಿಕೊಡಿ ಅಂದಿದ್ರಲ್ಲ. ನನ್ಹತ್ರ ನಾಕಾಣೆ ಇರ್ಲಿಲ್ಲ, ಎಂಟಾಣೆ ಚೂರಿತ್ತು. ಅದರ ಮೇಲೆ ಹಾಕೋ ಅಷ್ಟು ಅವರಿಗೆ ಕೊಟ್ಟೆ.



ಇದು ತುಂಬಾ ಅನ್ಯಾಯ ಕಣೋ,

*

ಆಗಲೇ ಫೋಟೋ ತೆಗೆದ ಗಂಡನ ಕೈಲಿದ್ದ ರೀಲನ್ನು ಕಂಡ ಹೆಂಡತಿ-

"ಎಲ್ರೀ, ನೋಡೋಣ ನಮ್ಮಿಬ್ಬ ಫೋಟೋ" ಎಂದಳು.

ಗಂಡ : ಎಲೇ ಹುಚ್ಚಿ, ಇಷ್ಟು ಬೇಗ ಹೇಗೆ ಕಾಣಿಸ್ತೇತು? ರೀಲನ್ನಿನ್ನೂ ತೊಳೆಯಬೇಕಷ್ಟೇ" ಎಂದು ಸಮಾಧಾನಿಸಿದ.

ಕೂಡಲೇ ಹೆಂಡತಿ— "ಏನ್ರೀ ಇಷ್ಟಾಕ್ರೀ ಯೋಚ್ನೆ? ಹೊರಗಿಟ್ಬಿಡಿ ಆ ಮಳೇಲಿ. ಒಂದೆರಡು ತಾಸಿನ ಮೇಲೆ ನೋಡೋಣ!" ಎನ್ನುವುದೇ!

*

ತನ್ನ ಪಾಠ ಪುಸ್ತಕದಲ್ಲಿದ್ದ 'ಕವಿ ಪರಿಚಯ' ಕಂಡ ಪುಟ್ಟ, ಅಪ್ಪನನ್ನು ಕೇಳಿದ- "ಅಪ್ಪಾ! ಇದೇನಪ್ಪ 'ಕಾಳಿದಾಸ (೧೭೦೬-೧೭೮೪)' ಎಂದು ಬರೆದಿದ್ದಾರೆ?"

ಅಪ್ಪ:— ಅಷ್ಟೂ ತಿಳಿಯೋಲ್ವೇ ಮಂಕಾ! ಅದು ಅವನ ಆಫೀಸು ಮತ್ತು ಮನೆ ಟೆಲಿಫೋನ್ ನಂಬರಲ್ವೇನೋ!

*

ಹುಚ್ಚಾಸ್ಪತ್ರೆಯಿಂದ ಗುಣಮುಖನಾದ ಹುಚ್ಚನೊಬ್ಬನನ್ನು ಕರೆದೊಯ್ಯಲೆಂದು ಅವನ ಸಂಬಂಧಿಕರು ಆಗಮಿಸಿದ್ದರು. ಅವನ ಕೊನೆಯ ಪರೀಕ್ಷೆ ಎಂದು ವೈದ್ಯರು ಅವನ ವಾರ್ಡಿನ ಹಾಜರಿ ಕರೆ ಎಂದು ಆದೇಶವಿತ್ತರು.

ಎಲ್ಲರ ಹಾಜರಿಯನ್ನು ಸರಿಯಾಗಿ ಕರೆದ ಹುಚ್ಚ ತನ್ನ ಹೆಸರು ಕರೆದಾಗ ಯಾರೂ ಉತ್ತರಿಸದಿದ್ದುದನ್ನು ಕಂಡು, ಗೈರು ಹಾಜರಿಯ ಸಂಕೇತ ಬರೆದಿಡಬೇಕೆ!

-ವಸಂತ ಹೆಬ್ಬಾರ

# ಪತ್ರಗಳಲ್ಲಿ ಕಂಡ ವಿದ್ಯಾರ್ಥಿಗಳು

**ಎಂ. ಜಿ. ಈಶ್ವರ**

ಭಾಷೆಯನ್ನು ಸುಲಲಿತವಾಗಿ ಬಳಸುವಂತಾಗಲಿ ಎಂದು ಪಿ. ಯು. ಸಿ. ವಿದ್ಯಾರ್ಥಿಗಳಿಗೆ. ಪಠ್ಯಪುಸ್ತಕಗಳ ಜೊತೆಗೆ ಮೊದಲನೆಯ ವರ್ಷದವರಿಗೆ ಕಾಂಪೋಜಿಷನ್ ಮತ್ತು ಎರಡನೆಯ ವರ್ಷದವರಿಗೆ ವ್ಯಾಕರಣ ಪರಿಚಯವನ್ನು ಗೊತ್ತುಮಾಡಲಾಗಿದೆ. ಮೊದಲನೆಯ ವರ್ಷದ ಕಾಂಪೋಜಿಷನ್ನಲ್ಲಿ ಪತ್ರ ಲೇಖನ, ಪ್ರಬಂಧ ಲೇಖನ, ಮತ್ತು ಸಂಕ್ಷಿಪ್ತ ಲೇಖನ ಎಂಬ ಮೂರು ರೀತಿಯ ಲೇಖನಗಳನ್ನು ಅಭ್ಯಾಸ ಮಾಡಿಸಿ, ಅವುಗಳ ಬಗ್ಗೆ ಪರೀಕ್ಷೆಯಲ್ಲಿ ಪ್ರಶ್ನಿಸಲಾಗುವುದು.

ಪ್ರಸ್ತುತ ಮೂರು ಲೇಖನಗಳೂ ವಿದ್ಯಾರ್ಥಿಯ ಸ್ವತಂತ್ರ ಭಾಷಾ ಮಟ್ಟವನ್ನು ಗುರುತಿಸುವ ಸಾಧನಗಳಾಗಿವೆ. ಏಕೆಂದರೆ ಪಠ್ಯಪುಸ್ತಕಗಳ ಕ್ರಮಬದ್ಧ ಅಭ್ಯಾಸವು ಕೆಲವು ಸಂದರ್ಭಗಳಲ್ಲಿ ಅಧ್ಯಾಪಕರಿಂದ ಪ್ರಶ್ನೆ–ಉತ್ತರಗಳ ನೋಟ್ಸ್ ಪಡೆಯಬಹುದು ಅಥವಾ ತರಗತಿಯಲ್ಲಿ ಅಧ್ಯಾಪಕರು ನೋಟ್ಸ್ ಕೊಡದಿದ್ದರೂ ಮಾರುಕಟ್ಟೆಯಲ್ಲಿ ಸಿಕ್ಕುವ ಗೈಡ್‌ಗಳಿಗೆ ಅಭಾವವಿಲ್ಲ ತಾನೆ? ಹಾಗಾಗಿ ಪಠ್ಯ ಪ್ರಶ್ನೆಗಳಿಗೆ ಅಧ್ಯಾಪಕರು ಕೊಟ್ಟ ಉತ್ತರವು ನೋಟ್ಸೊ, ಇಲ್ಲವೆ ಮಾರುಕಟ್ಟೆಯ ಗೈಡೊ ಆಗಿರುತ್ತದೆ. ಅಲ್ಲದೆ ಕೇಳುವ ಪ್ರಶ್ನೆಗಳೂ ತುಂಬ ಶಿಥಿಲವಾಗಿದ್ದು ಹತ್ತು ವಾಕ್ಯಗಳಿಗೆ ಮೀರಿ ಬರೆಯಬಾರದಿರುವುದರಿಂದ ಅಂತಹ ಸನ್ನಿವೇಶಗಳಲ್ಲಿ ವಿದ್ಯಾರ್ಥಿಯ ಭಾಷೆ ಹೇಗಿದೆ ಎಂದು ಯಾವ ಮೀಟರ್ ಇಟ್ಟು ಅಳೆಯಲೂ ಸಾಧ್ಯವಾಗುವುದಿಲ್ಲ.

ಆದರೆ ಪತ್ರಲೇಖನ, ಪ್ರಬಂಧ ಲೇಖನ, ಹಾಗೂ ಸಂಕ್ಷಿಪ್ತ ಲೇಖನಗಳು ಕೈಗೆ ಸಿಕ್ಕದ ಅಮೂರ್ತ ಪ್ರಶ್ನೆಗಳಾಗುತ್ತವೆ. ಇವಕ್ಕೆ ಉತ್ತರಿಸುವಾಗ ವಿದ್ಯಾರ್ಥಿ ತನ್ನ ಸ್ವಂತ ಶಕ್ತಿಯನ್ನು ಅವಲಂಬಿಸಬೇಕಾಗುತ್ತದೆ. ಈ ಲೇಖನಗಳ ಉದ್ದೇಶ ವಿದ್ಯಾರ್ಥಿಯು ತನ್ನ ಪಠ್ಯಪುಸ್ತಕದ ಹೊರತಾಗಿ ಭಾಷೆಯನ್ನು ಹೇಗೆ ಮತ್ತು ಎಷ್ಟು ಸಮರ್ಥವಾಗಿ ಬಳಸಲು ಕಲಿತಿದ್ದಾನೆ, ವಿಷಯ ಸಂಗ್ರಹ ಹಾಗೂ ಅದರ ನಿರೂಪಣೆ ಹೇಗಿದೆ? ಮತ್ತು ಭಾಷೆಯನ್ನು ವಿಸ್ತರಿಸುವ, ಸಂಕ್ಷಿಪ್ತ

ಗೊಳಿಸುವ ಅಂಶ ತಿಳಿದಿದೆಯೆ ಎನ್ನುವುದು.

"ನನ್ನ ಮಗ ಅಥವಾ ಮಗಳು ಕಾಲೇಜು ಓದುತ್ತಿದ್ದಾರೆ, ಪತ್ರದ ಬರವಣಿಗೆ ನೋಡಿದರೆ ಹೇಗೆ ಓದುತ್ತಿದ್ದಾರೊ" ಎಂದು ಮರಗುವ ತಂದೆ ತಾಯಿಗಳ ಉದ್ಗಾರಗಳನ್ನು ಗಮನಿಸಿದರೆ ಇವುಗಳಲ್ಲಿ ಪತ್ರ ಲೇಖನಕ್ಕೆ ಹೆಚ್ಚು ಮಹತ್ವ ಬರುತ್ತವೆ. ಪರೀಕ್ಷೆಯಲ್ಲಿ ಮೂರು ಪತ್ರ ಲೇಖನ ಗಳನ್ನು ಕೇಳಿ ಯಾವುದಾದರೂ ಒಂದಕ್ಕೆ ಉತ್ತರಿಸಲು ತಿಳಿಸಲಾಗುವುದು. ಸಾಧಾರಣವಾಗಿ ಪ್ರವಾಸ, ಪರೀಕ್ಷಾ ವ್ಯಾಸಂಗ, ಕಾಲೇಜು ಅನುಭವ, ವಸತಿ ಸೌಕರ್ಯ, ಪುಸ್ತಕ ಭಂಡಾರ–ಇತ್ಯಾದಿ ವಿಷಯಗಳನ್ನು ಕುರಿತು ಬಂಧುವೊಬ್ಬರಿಗೆ ಪತ್ರ, ಅಥವಾ ವಾಸಿಸುವ ಬಡಾವಣೆಯಲ್ಲಿ ಇರುವ ತೊಂದರೆಗಳ–ನೀರಿನ ಅಭಾವ, ಬೀದಿ ದೀಪ ದುರಸ್ತಿ, ಕಳ್ಳಕಾಕರ ಹಾವಳಿ, ಸೊಳ್ಳೆಗಳ ಅವಾಂತರ, ರಸ್ತೆ ರಿಪೇರಿ ಇತ್ಯಾದಿ–ನಿವಾರಣೆಗೆ ಸಂಬಂಧಪಟ್ಟ ಅಧಿಕಾರಿಗಳಿಗೆ, ಇಲ್ಲವೆ ಯಾವುದಾದರೂ ಪತ್ರಿಕೆಯ ವಾಚಕರ ವಾಣಿ ವಿಭಾಗಕ್ಕೆ ಪತ್ರ ಬರೆಯಲು ತಿಳಿಸಲಾಗುತ್ತದೆ. ಉತ್ತರವನ್ನು ಮೌಲ್ಯಮಾಪನ ಮಾಡುವಾಗ ಪತ್ರ ಬರೆಯುವ ಮಾದರಿಯನ್ನು ಪರಿಗಣಿಸುವುದರ ಜೊತೆಗೆ ವಿಷಯ ನಿರೂಪಣೆಯನ್ನೂ ಗಮನಿಸಲಾಗುತ್ತದೆ.

೧೯೭೮ ರ ಏಪ್ರಿಲ್ ನಲ್ಲಿ ನಡೆದ ಪಿ. ಯು.ಸಿ. ಪರೀಕ್ಷೆಯಲ್ಲಿ "ಪರೀಕ್ಷಾ ವ್ಯಾಸಂಗವನ್ನು ಕುರಿತು ನಿಮ್ಮ ತಂದೆಗೆ ಪತ್ರ ಬರೆಯಿರಿ" ಎಂದು ಕೇಳಲಾಗಿತ್ತು. ಉತ್ತರವಾಗಿ ಹಲವು ವಿದ್ಯಾರ್ಥಿಗಳು ಬರೆದ ಪತ್ರದ ಮಾದರಿಗಳನ್ನು ಇಲ್ಲಿ ಕೊಟ್ಟಿದ್ದೇನೆ. ಪತ್ರಗಳಲ್ಲಿದ್ದ ಕಾಗುಣಿತದ ತಪ್ಪುಗಳನ್ನು ನಿವಾರಿಸಲಾಗಿದೆ.

•

ಪ್ರೀತಿಯ ತಂದೆಯವರಿಗೆ............

ನಾನು ಮಾಡುವ ನಮಸ್ಕಾರಗಳು. ಈಗ ನಾನು ಪತ್ರ ಬರೆಯಲು ಕಾರಣವೇನೆಂದರೆ ಪರೀಕ್ಷೆಯಲ್ಲಿ ನಿಮಗೆ ಪತ್ರ ಬರೆಯಲು ಕೇಳಿರುವುದರಿಂದ ಬರೆಯುತ್ತಿದ್ದೇನೆ. ಇದೇನು ಹಗಲೆಲ್ಲ ಪತ್ರ ಬರೆಯುತ್ತಾನೆ, ದುಡ್ಡಿಗಾಗಿ ತಾನೆ ಎಂದು ಬೇಸರಸಬೇಡಿ. ನಿಮ್ಮ ಮಗನ ಮೇಲೆ ಕ್ಷಮೆಯಿರಲಿ.

ಅಪ್ಪಾಜಿ, ಪರೀಕ್ಷೆಗೆ ಚೆನ್ನಾಗಿ ಓದುತ್ತಿದ್ದೇನೆ. ಈಗಾಗಲೇ ಎಲ್ಲ ಸಬ್ಜೆಕ್ಟ್‌ಗಳೂ ಮುಗಿದಿದ್ದು ಕನ್ನಡವೊಂದು ಉಳಿದಿದೆ. ಈಗ ನಡೆಯುತ್ತಿದೆ. ಪರೀಕ್ಷೆಗೆ ಸೀರಿಯಸ್ಸಾಗಿ ಓದುತ್ತಿರುವುದರಿಂದ ಸಿಗರೇಟನ್ನು ಹೆಚ್ಚು ಸೇದುತ್ತಿದ್ದೇನೆ. ಸಿಗರೇಟನ್ನು ಸೇದದಿದ್ದರೆ ನನ್ನ ತಲೆಯೇ ಓಡುವುದಿಲ್ಲ. ನಾನು ಚೆನ್ನಾಗಿ ಓದಬೇಕೆಂದರೆ ಸಿಗರೇಟು ಸೇದಲೇ ಬೇಕಾಗಿದೆ. ಆದುದರಿಂದ ದಯಮಾಡಿ ಸಿಗರೇಟು ಕೊಂಡುಕೊಳ್ಳಲು ದುಡ್ಡನ್ನು ಆದಷ್ಟು ಜಲ್ದಿ ಎಂ. ಓ. ಮಾಡಿ.

ಇಂತಿ ನಿಮ್ಮ ಮಗ.

•

ತೀರ್ಥರೂಪ ಅಯ್ಯನವರಿಗೆ.........

ನನ್ನ ನಮಸ್ಕಾರಗಳು. ನಾನು ಇಲ್ಲಿ ಆರೋಗ್ಯ. ಊರಿನಲ್ಲಿ ಎಲ್ಲರ ಆರೋಗ್ಯಕ್ಕೆ ಪತ್ರ ಬರೆಯಿರಿ. ಪರೀಕ್ಷೆಯಲ್ಲಿ ನಾನು ಚೆನ್ನಾಗಿ ಓದುತ್ತಿದ್ದೇನೆ. ನಾನು ಮತ್ತು ನನ್ನ ಸ್ನೇಹಿತ ಇಬ್ಬರೂ ಕಂಬೈಂಡ್ ಸ್ಟಡಿ ಮಾಡುತ್ತಿದ್ದೇವೆ. ಈ ಸಾರಿ ಹೇಗಾದರೂ ಮಾಡಿ ಫಸ್ಟ್ ಕ್ಲಾಸ್ ಹೊಡೆದು ನೀವು ಖರ್ಚುಮಾಡಿದ ಹಣಕ್ಕೆ ಸರಿಯಾದ ಪ್ರತಿಫಲವನ್ನು ತಂದೇತರುತ್ತೇನೆ.

ಮೊನ್ನೆ ನಾನು "ಕಸ್ಮೆವಾದೆ" ಸಿನಿಮಾಕ್ಕೆ ಹೋಗಿದ್ದೆ. ಅದು ಬಹಳ ಒಳ್ಳೆಯ ಪಿಕ್ಚರು ಎಂದು ನನ್ನ ಹಲವಾರು ಸ್ನೇಹಿತರು ಹೇಳಿದ್ದರು. ಅದರಲ್ಲಿ ಅಮಿತಾಬಚನ್ ಮತ್ತು ರಾಖಿ ಆಕ್ಟ್ ಮಾಡಿದ್ದಾರೆ. ಬಹಳ ಚೆನ್ನಾಗಿ ಮಾಡಿದ್ದಾರೆ. ಅಮಿತಾಬಚನ್‌ನದು ಡಬಲ್ ಆಕ್ಟ್. ಇದೇ ಸಿನಿಮಾದಲ್ಲಿ ರಣಧೀರ್ ಕಪೂರ್ ಹಾಗೂ ನೀತು ಸಿಂಗ್ ಸಹ ಇದ್ದಾರೆ. ರಣಧೀರ್ ಕಪೂರ್ ಚೆನ್ನಾಗಿ ಮಾಡಿಲ್ಲ. ಅವನು ಗುಮ್ಮ ಇದ್ದಂತಿದ್ದಾನೆ. ಅಂತೂ ಸಿನಿಮಾ ಚೆನ್ನಾಗಿತ್ತು. ಅವತ್ತು ಒಟ್ಟು ೫ ರೂಪಾಯಿ ೫೦ ಪೈಸೆ ಖರ್ಚಾಯಿತು. (ವ್ಯಾಲ್ಯುಯೇಶನ್ ಮಹಾಶಯರಿಗೆ) ನೀವೂ ಸಿನಿಮಾಕ್ಕೆ ಬರುತ್ತೀರಿ ಎಂದು ಒಂದು ಟಿಕೆಟ್

ಕೊಂಡುಕೊಂಡಿದ್ದೆ. ನೀವು ಬಾರದ್ದರಿಂದ ಬಲು ಬೇಜಾರಾಯಿತು. ನೀವೊಮ್ಮೆ ಆ ಪಿಕ್ಚರ್‌ನ್ನು ನೋಡಲೇಬೇಕು.

ಅಮ್ಮ, ಅಣ್ಣ, ಅಕ್ಕ, ತಮ್ಮ, ತಂಗಿ ಎಲ್ಲರಿಗೂ ನನ್ನ ನಮಸ್ಕಾರಗಳನ್ನು ತಿಳಿಸಿರಿ.

ಇಂತಿ ನಿಮ್ಮ ಮುದ್ದಿನ ಮಗ.

•

ಮುಂಡೆಮಗ ಅಪ್ಪನಿಗೆ.........

ನಾನು ಮಾಡುವ ಆಶೀರ್ವಾದಗಳು. ನಾನು ಇಲ್ಲಿ ಆರೋಗ್ಯ. ನಿಮ್ಮೆಲ್ಲರ ಆರೋಗ್ಯಕ್ಕೆ ಪತ್ರ ಬರೆಯಿರಿ.

ಉ. ಕು. ಸಾಂಪ್ರತ. ನಾನು ಪರೀಕ್ಷೆಗಾಗಿ ಚೆನ್ನಾಗಿ ಓದುತ್ತಿದ್ದೇನೆ. ಪಾಸಾಗುತ್ತೇನೆಂಬ ಭರವಸೆಯನ್ನು ನಿಮಗೆ ಕೊಡುತ್ತೇನೆ. ಪರೀಕ್ಷೆ ಮುಗಿದ ತಕ್ಷಣ ಊರಿಗೆ ಬರುತ್ತೇನೆ.

ಇಂತು ನಿಮ್ಮ ಮಗ.
ಮುಂಡೆಗಂಡ.

ತೀರ್ಥರೂಪ ಅಪ್ಪಾಜಿಯವರಿಗೆ......

ನಿಮ್ಮ ಮಗಳು ಮಾಡುವ ನಮಸ್ಕಾರಗಳು. ಪರೀಕ್ಷಾ ವ್ಯಾಸಂಗವನ್ನು ಕುರಿತು ನಿಮಗೊಂದು ಪತ್ರ ಬರೆಯುತ್ತಿದ್ದೇನೆ.

ನಾನು ಪರೀಕ್ಷೆಗಾಗಿ ಕಷ್ಟಪಟ್ಟು ಓದುತ್ತಿದ್ದೇನೆ. ಹಗಲಿರುಳು ಶ್ರಮಿಸಿ ಓದುತ್ತಿದ್ದೇನೆ. ಯಾವ ತರಗತಿಯನ್ನೂ ತಪ್ಪಿಸಿಕೊಳ್ಳದೆ ಮುಂದಿನ ಬೆಂಚಿನಲ್ಲಿಯೇ ಕುಳಿತು ಮೇಷ್ಟ್ರುಗಳು ಹೇಳುವುದನ್ನು ಆಸಕ್ತಿಯಿಂದ ಕೇಳುತ್ತ ಒಳ್ಳೊಳ್ಳೆಯ ಮಾತುಗಳನ್ನು ಪುಸ್ತಕದಲ್ಲಿ ಬರೆದಿಟ್ಟುಕೊಳ್ಳುತ್ತಿದ್ದೇನೆ.

ಎಲ್ಲ ಮೇಷ್ಟರೂ ನನ್ನನ್ನು ಒಳ್ಳೆಯ ಹುಡುಗಿ ಎಂದು ಹೊಗಳುತ್ತಿದ್ದಾರೆ. ಯಾವ ಕೆಲಸವನ್ನೇ ಆಗಲಿ ಮೇಷ್ಟರನ್ನು ಕೇಳಿ ಮಾಡುತ್ತೇನೆ. ಯಾವ ಮೇಷ್ಟ್ರನ್ನೂ ಎದುರು ಹಾಕಿಕೊಂಡಿಲ್ಲ. ಎಲ್ಲರನ್ನೂ ಸರಿಯಾಗಿ ಇಟ್ಟುಕೊಂಡಿದ್ದೇನೆ. ಆದರಿಂದಾಗಿ ನನ್ನ ಕೆಲವು ಸ್ನೇಹಿತೆಯರು ಹೊಟ್ಟೆಕಿಚ್ಚುಪಟ್ಟು



ಕೊಳ್ಳುತ್ತಿದ್ದಾರೆ. ಪರೀಕ್ಷೆ ಆದ ಕೂಡಲೇ ನಿಮ್ಮನ್ನು, ಅಮ್ಮನನ್ನು ನೋಡಲು ಕಾತರಳಾಗಿದ್ದೇನೆ.

ಇಂತಿ ನಿಮ್ಮ
ಪ್ರೀತಿಯ ಮಗಳು.

*

ಶ್ರೀಕೋಸಂಬರಿರಾಯರು
ಜಾಮೂನು ಊರು
ಜಹಾಂಗೀರ್ ತಾಲ್ಲೂಕು
ಮೈಸೂರಪಾಕ್ ಸ್ಟೇಟ್

ತೀರ್ಥರೂಪ ತಂದೆಯವರಿಗೆ ನಾನು ಮಾಡುವ ನಮಸ್ಕಾರಗಳು. ನಾನು ಇಲ್ಲಿ ಆರೋಗ್ಯವಾಗಿದ್ದೇನೆ. ನಿಮ್ಮೆಲ್ಲರ ಆರೋಗ್ಯಕ್ಕೆ ಪತ್ರ ಬರೆಯಿರಿ.

ಹಾಸ್ಟಲ್‌ನಲ್ಲಿ ಅಡಿಗೆಯನ್ನು ಚೆನ್ನಾಗಿ ಮಾಡುತ್ತಾರೆ. ಕಾಫಿ ಒಂದು ಚೆನ್ನಾಗಿರುವುದಿಲ್ಲ. ಆದರಿಂದಾಗಿ ನಾನು ಕುಡಿಯುವುದೇ ಇಲ್ಲ. ಪರೀಕ್ಷೆ ಹತ್ತಿರ ಬಂದಿರುವುದರಿಂದ ಬಹಳ ಚೆನ್ನಾಗಿ ಓದುತ್ತಿದ್ದೇನೆ.

ಇಂತಿ ನಿಮ್ಮ
ಮಸಾಲೆ ಮಗ
ಇಡ್ಲಿ ಊರು.
ಮದ್ದೂರ್ ಒಡೆ ತಾಲ್ಲೂಕು
ಸೆಟ್‌ದೋಸೆ ಸ್ಟೇಟ್

●

ಪೂಜ್ಯ ತಂದೆಯವರಿಗೆ.........

ತಂದೆಯವರೆ, ಪರೀಕ್ಷೆಯಲ್ಲಿ ಚೆನ್ನಾಗಿ ಬರೆದು ರ್‍ಯಾಂಕ್ ಬರಬೇಕು ಎಂದು ಹೇಳಿರುವದರಿಂದ ಚೆನ್ನಾಗಿ ಓದುತ್ತಿದ್ದೇನೆ. ಪ್ರತಿದಿನ ೪ ಗಂಟೆಗೆ ಎದ್ದು ೬ ಗಂಟೆತನಕ ಓದಿ ಅರ್ಧಗಂಟೆ ವ್ಯಾಯಾಮ ಮಾಡಿ, ಸ್ನಾನ ಮಾಡಿ, ತಿಂಡಿ ತಿನ್ನುತ್ತೇನೆ. ಈಗ ಕಾಲೇಜು ನಡೆಯುತ್ತಿಲ್ಲವಾದ್ದರಿಂದ ಎಲ್ಲಿಗೂ ಹೋಗದೆ ಸುಮ್ಮನೆ ಓದುತ್ತಿರುವುದೇ ಆಗಿದೆ. ಮಧ್ಯಾಹ್ನ ಊಟ ಹಾಗೂ ರೆಸ್ಟ್ ಬಿಟ್ಟರೆ ಬರೀ ಓದುವದೇ ಆಗಿದೆ. ಸಂಜೆ ಹೊತ್ತು ವಾಕಿಂಗ್ ಸಹ ಹೋಗುತ್ತಿಲ್ಲ. ರಾತ್ರಿ ೧೨ ಗಂಟೆಗೆ ಮಲಗುತ್ತೇನೆ. ಯಾವ ಸ್ನೇಹಿತರನ್ನೂ ರೂಮಿನಲ್ಲಿ ಹೆಚ್ಚಾಗಿ ಮಾತನಾಡಿಸುತ್ತ ಕೂಡುವುದಿಲ್ಲ.

ಈಗ ಕನ್ನಡ ಪೇಪರನ್ನು ಬರೆಯುತ್ತಿದ್ದೇನೆ. ಎಲ್ಲ ಸಬ್ಜೆಕ್ಟ್‌ಗಳಲ್ಲೂ ಚೆನ್ನಾಗಿ ಬರೆದಿದ್ದೇನೆ. ನೀವು ಹೇಳಿದಂತೆ ರ್‍ಯಾಂಕ್ ಬರದಿದ್ದರೂ ಫಸ್ಟ್ ಕ್ಲಾಸಿನಲ್ಲಿ ಅಂತೂ ಬಂದೇ ಬರುತ್ತೇನೆ. ಕನ್ನಡದಲ್ಲೂ ಚೆನ್ನಾಗಿ ಬರೆಯುತ್ತಿದ್ದೇನೆ. ನೋಡಬೇಕು. ಕನ್ನಡದ ಪ್ರಾಧ್ಯಾಪಕರು ಎಷ್ಟು ಮಾರ್ಕ್ಸ್ ಕೊಡುತ್ತಾರೋ ಅಂತ. ನಿಮ್ಮ ಆರೋಗ್ಯಕ್ಕೆ ಪತ್ರ ಬರೆಯಿರಿ.

ನಿಮ್ಮ ಮಗ

**ಟಿಪ್ಪಣಿ :** ಪತ್ರಗಳನ್ನು ಗಮನಿಸಿದಾಗ ಮೊಟ್ಟ ಮೊದಲು ಅಲ್ಲಿ ಕಾಣುವ ಗುಣ ಬರವಣಿಗೆಯ ಬಗೆಗಿನ ಅಲಕ್ಷ್ಯತನ, ಎರಡನೆಯದು ಹೇಗೆ ಬರೆದರೆ ಯಾವ ಯಾವ ಅರ್ಥವನ್ನು ಕೊಟ್ಟು ಅಪಹಾಸ್ಯಕ್ಕೀಡುಮಾಡಬಹುದು ಎನ್ನುವ ಪರಿಜ್ಞಾನದ ಶೂನ್ಯತೆ. ಕೆಲವು ಪತ್ರಗಳಲ್ಲಿ ಮುಗ್ಧತೆ, [illegible]. ತಿಳಿಸುವಿಕೆ ಕಂಡರೆ. ಕೆಲವು ಪತ್ರಗಳಲ್ಲಂತೂ ಕಿಲಾಡಿತನ, ಬೇಜವಾಬ್ದಾರಿತನ, ಉದ್ಧಟತನ ಕಂಡುಬರುತ್ತದೆ. ಈ ತೆರನಾದ ಬರವಣಿಗೆಗಳನ್ನು ವಾಚಕರು ಕೇವಲ ಗೇಲಿಗಾಗಿ ಮಾತ್ರ ತೆಗೆದುಕೊಳ್ಳದೆ ಹೆತ್ತವರು, ಕಲಿಸುವವರು ಜೊತೆಗೆ ವಿದ್ಯಾರ್ಥಿಗಳು ಸಹ ಬರವಣಿಗೆಯ ಬಗೆಗಿನ ಸಾಮಾಜಿಕ ಹೊಣೆಗಾರಿಕೆಯಿಂದ ಕಳಕಳಿಯಿಂದ ಚಿಂತಿಸಬೇಕಾಗಿದೆ. ✡

---

## ಬಲ್ಲವರ–ನುಡಿ

ಉಂಟಾದ ಕಾಲಕ್ಕೆ ನೆಂಟರು ಇಷ್ಟರು
ಭಟರಂತೆ ಬಾಗಿಲ ಕಾಯ್ವರು. –ಶ್ರೀಪಾದರಾಜರು

ಅಧಿಕೋತ್ಪಾದನೆ ಮಾಡಲು ಅನೇಕಾನೇಕ ಯೋಜನೆಗಳಿವೆ; ಮಾನವ ಸ್ವಭಾವವನ್ನು ಉತ್ತಮಗೊಳಿಸುವ ಯೋಜನೆ ಮಾತ್ರ ಇಲ್ಲ. –ಜೆ. ಸಿ. ಕುಮಾರಪ್ಪ

–ಸಂಗ್ರಹ: ವಾಸಂತಿ ಎಸ್. ರಾವ್

ರಹಸ್ಯವನ್ನು ಭೇದಿಸಲು ಸಾಧ್ಯವಾಗಿದೆಯೇ ?
ಉತ್ತರ: ಹೌದು - ಇಲ್ಲ

# ಐನ್‌ಸ್ಟೈನ್ ಮಿದುಳಿನ ರಹಸ್ಯ

**ಎಂ. ಆರ್. ಎಸ್. ರಾವ್**

ಬೌದ್ಧಿಕ ವ್ಯಾಪಾರಗಳಿಗೆ ಅತ್ಯಗತ್ಯವಾದ ಮಿದುಳು ನಮ್ಮೆಲ್ಲರಿಗೂ ಉಂಟು. ಮತ್ತು 'ನಮ್ಮೆಲ್ಲರಿಗೂ' ಅಂದಾಗ ಅದರ ವ್ಯಾಪ್ತಿಯಲ್ಲಿ ನಾನೂ ಬರುತ್ತೇನೆ, ನೀವೂ ಬರುತ್ತೀರಿ, ಹಾಗೆಯೇ ಗೆಲಿಲಿಯೊ, ನ್ಯೂಟನ್, ಐನ್‌ಸ್ಟೈನ್‌ರಂತಹ ಪ್ರಭೃತಿಗಳೂ ಬರುತ್ತಾರೆ. ಆದರೆ ನಾವೆಲ್ಲರೂ ಐನ್‌ಸ್ಟೈನ್ ಏಕೆ ಆಗುವುದಿಲ್ಲ? ನ್ಯೂಟನ್ ಏಕೆ ಆಗುವುದಿಲ್ಲ? ಅಥವಾ ಸಿ. ವಿ. ರಾಮನ್ನರಾಗಲಿ, ವಿಶ್ವೇಶ್ವರಯ್ಯನವರಾಗಲಿ, ರವೀಂದ್ರನಾಥ ಠಾಕೂರರಾಗಲಿ ಏಕೆ ಆಗುವುದಿಲ್ಲ? ನಮ್ಮ ಮಿದುಳಿನ ರಚನೆಗಿಂತ ಅವರ ಮಿದುಳಿನ ರಚನೆಯಲ್ಲೇನಾದರೂ ಮೂಲಭೂತವಾದ ವ್ಯತ್ಯಾಸವಿದೆಯೆ? ಇದ್ದರೆ ಅದು ಯಾವುದು? ಎಂಬ ಪ್ರಶ್ನೆ ಜನಸಾಮಾನ್ಯರನ್ನಷ್ಟೇ ಅಲ್ಲದೆ ವೈಜ್ಞಾನಿಕರನ್ನೂ ಬಹುಕಾಲದಿಂದ ಕಾಡುತ್ತಿದೆ.

೧೯೫೫ ರ ಏಪ್ರಿಲ್ ೧೮ ರಂದು ಪ್ರಿನ್ಸ್‌ಟನ್ನಿನ ಆಸ್ಪತ್ರೆಯೊಂದರಲ್ಲಿ ಆಲ್ಬರ್ಟ್ ಐನ್‌ಸ್ಟೈನ್ ತೀರಿಕೊಂಡಾಗ ಈ ಪ್ರಶ್ನೆಗೆ ಉತ್ತರವನ್ನು ಕಂಡು ಹಿಡಿಯುವ ಸದವಕಾಶ ತನಗೆ ಒದಗಿದುದಾಗಿ ಡಾ. ಥಾಮಸ್ ಹಾರ್ವೆ ಎಂಬೊಬ್ಬ ಅಲ್ಲಿನ ಪೆಥಾಲಜಿಸ್ಟ್ ಭಾವಿಸಿ ಮರಣೋತ್ತರ ಪರೀಕ್ಷೆಯ ಸಮಯದಲ್ಲಿ ಐನ್‌ಸ್ಟೈನರ ಮಿದುಳನ್ನು ತೆಗೆದುಕೊಂಡ. ಹೀಗೆ ಮಾಡುವುದಕ್ಕೆ ಐನ್‌ಸ್ಟೈನ್ ಮೊದಲೆ ಅನುಮತಿಯಿತ್ತಿದ್ದಾಗಿ ಹಾರ್ವೆ ಹೇಳುತ್ತಾನೆ.

ಆದರೆ ಐನ್‌ಸ್ಟೈನರ ಸ್ನೇಹಿತನೂ ಅವರ ಆಸ್ತಿಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿರುವವನೂ ಆದ ಡಾ. ನಾಥನ್ ಹಾರ್ವೆಯ ಹೇಳಿಕೆಯನ್ನು ಒಪ್ಪುವುದಿಲ್ಲ. ಆತ ಹೇಳುವ ಪ್ರಕಾರ ಐನ್‌ಸ್ಟೈನರು ತೀರಿಕೊಂಡ ದಿನ ಮಧ್ಯಾಹ್ನದ ಸಮಯದಲ್ಲಿ ಹಾರ್ವೆಯು ಬಂದು, ತಾನು ಐನ್‌ಸ್ಟೈನರ ಮಿದುಳನ್ನು ವೈಜ್ಞಾನಿಕ ಪರೀಕ್ಷೆಗೊಳಪಡಿಸಬಹುದೆ? ಎಂದು ಐನ್‌ಸ್ಟೈನರ ಕುಟುಂಬದ ಸದಸ್ಯರನ್ನು ಕೇಳಿದಾಗ ಅವರು, "ಆದರೆ ಈಗಾಗಲೆ ಅವರ ಅಂತ್ಯವಿಧಿಗಳನ್ನು ಪೂರೈಸಿ ಆಗಿದೆಯಲ್ಲಾ?" ಎಂದು ಕೇಳಿದರು. ಆಗ ಹಾರ್ವೆ "ಹೌದು ಅದು ನನಗೆ ಗೊತ್ತು, ಆದರೆ ಮರಣೋತ್ತರ ಪರೀಕ್ಷೆಯ ಸಮಯ

ದಲ್ಲಿ ಆಸ್ಪತ್ರೆಯವರು ಅವರ ಮಿದುಳನ್ನು ತೆಗೆದುಕೊಂಡರು. ನೀವು ಒಪ್ಪುವುದಾದರೆ ನಾನು ಆ ಮಿದುಳನ್ನು ಇಸಿದುಕೊಂಡು ಸಂಶೋಧನೆ ನಡೆಸುತ್ತೇನೆ," ಎಂದು ಹೇಳಿದ. ಉಪಾಯವಿಲ್ಲದೆ ಅವರು ಆತ ಸಂಶೋಧನೆಯನ್ನು ನಡೆಸಲು ಒಪ್ಪಿಕೊಂಡರು.

ಅನಂತರ ಡಾ. ಹಾರ್ವೆ ಪ್ರಿನ್ಸ್‌ಟನ್ ಬಿಟ್ಟು ನ್ಯೂಜರ್ಸಿಗೆ ಹೋದ. ಅಲ್ಲಿಂದ ಮಿಸ್ಸೂರಿಗೆ ಹೋಗಿ ಕೊನೆಗೆ ಕನ್ಸಾಸ್‌ನಲ್ಲಿ ನೆಲೆಸಿದ. ಹೋಗುವಲ್ಲೆಲ್ಲ ತನ್ನೊಂದಿಗೆ ಐನ್‌ಸ್ಟೈನರ ಮಿದುಳನ್ನು ತೆಗೆದುಕೊಂಡು ಹೋದ. ಆಕಸ್ಮಾತ್ತಾಗಿ ಈ ವಿಷಯ ಸುದ್ದಿಗಾರನೊಬ್ಬನ ಲಕ್ಷ್ಯಕ್ಕೆ ಬಂದಾಗ ಆತ ಡಾ. ಹಾರ್ವೆಯನ್ನು ಸಂಪರ್ಕಿಸಿ, "ಇಪ್ಪತ್ತು ಮೂರು ವರ್ಷಗಳಿಂದ ಐನ್‌ಸ್ಟೈನರ ಮಿದುಳಿನ ಮೇಲೆ ಸಂಶೋಧನೆಯನ್ನು ನಡೆಸುತ್ತ ಬಂದಿದ್ದೀರಾ, ಹೊಸ ವಿಷಯವೇನಾದರೂ ಬೆಳಕಿಗೆ ಬಂದಿದೆಯೆ?" ಎಂದು ಕೇಳಿದಾಗ ಹಾರ್ವೆ, "ಹೌದು, ಸಾಕಷ್ಟು ವಿಷಯಗಳು ಬೆಳಕಿಗೆ ಬಂದಿವೆ. ಆದರೆ ಪ್ರತಿಷ್ಠಿತ ವೈಜ್ಞಾನಿಕ ಪತ್ರಿಕೆಗಳಲ್ಲಿ ಸಂಶೋಧನೆಯನ್ನು ಪ್ರಕಟಿಸುವವರೆಗೆ ಈ ಬಗ್ಗೆ ಏನನ್ನೂ ಹೇಳಬಯಸುವುದಿಲ್ಲ" ಅಂದ. ಅಲ್ಲದೆ ತಾನು ಈ ಸಂಶೋಧನೆಯನ್ನು ಐನ್‌ಸ್ಟೈನರ ಮಗನಾದ ಹ್ಯಾನ್ಸ್ ಐನ್‌ಸ್ಟೈನರ ವಿನಂತಿಯ ಮೇರೆಗೆ ಮಾತ್ರ ಮಾಡುತ್ತಿರುವುದಾಗಿಯೂ ಹೇಳಿಕೊಂಡ. ಆದರೆ ಹಾರ್ವೆಯ ಮಾತನ್ನು ನಾಥನ್ ಒಪ್ಪುವುದಿಲ್ಲ. ಈ ಮಧ್ಯೆ ಹ್ಯಾನ್ಸ್ ಐನ್‌ಸ್ಟೈನ್ ತೀರಿಕೊಂಡಿದ್ದರಿಂದ ಯಾರ ಹೇಳಿಕೆ ಸರಿಯೆಂಬುದನ್ನು ಪರೀಕ್ಷಿಸಲೂ ಬರುವಂತಿಲ್ಲ.

ಐನ್‌ಸ್ಟೈನರ ಮಿದುಳಿನ ಮೇಲೆ ಸಂಶೋಧನೆ ನಡೆಸುವವರಲ್ಲಿ ಡಾ. ಹಾರ್ವೆ ಪ್ರಮುಖನಾದರೂ ಅವನೊಟ್ಟಿಗೆ ಹಲವಾರು ಮಂದಿ ವಿಜ್ಞಾನಿಗಳೂ ಕೆಲಸ ಮಾಡಿದ್ದಾರೆ. ಆದರೆ ಹಾರ್ವೆ ಅವರ ಹೆಸರನ್ನು ಬಿಟ್ಟುಕೊಡುವುದಿಲ್ಲ. ಅತಿಯಾಗಿ ಒತ್ತಾಯಿಸಿದಾಗ, "ಎಷ್ಟೋ ಜನ ಬಂದರು, ಎಷ್ಟೋ ಜನ ಹೋದರು. ನಾನೊಬ್ಬನೆ ಸಂಶೋಧನೆಯನ್ನು ಮುಂದುವರಿಸುತ್ತಾ ಇದ್ದವನು" ಎಂದು ಮಾತ್ರ ಹೇಳುತ್ತಾನೆ. ಆದರೆ ಅಮೇರಿಕದಲ್ಲಿ ಕುತೂಹಲಿಗಳಿಗೆ ಕಡಿಮೆಯಿಲ್ಲ. ಅವರು ಈ ಬಗ್ಗೆ ಬಹುವಾಗಿ ಪ್ರಯತ್ನಿಸಿ, ಡಾ. ರಾಬರ್ಟ್ ಜಿಮರ್‌ಮನ್, ಡಾ. ಸಿಡ್ನೆ ಶೂಲ್‌ಮನ್ ಹಾಗೂ ಡಾ. ಹಾರ್ಟವಿಗ್ ಕುಲ್ಲನ್‌ಬೆಕ್‌ರಂತಹ ಕೆಲವು ವಿಜ್ಞಾನಿಗಳು ಆ ತಂಡದಲ್ಲಿದ್ದುದನ್ನು ಕಂಡುಹಿಡಿದರಾದರೂ ಇವರಾರೂ ತಮ್ಮ ಸಂಶೋಧನೆಯ ಬಗ್ಗೆ ಬಾಯಿಯನ್ನೆ ಬಿಡುವುದಿಲ್ಲ.

ಹಾಗಾದರೆ ಅವರ ಸಂಶೋಧನೆಗಳಿಂದ ಹೊಸದೇನನ್ನೂ ಕಂಡುಹಿಡಿಯಲು ಸಾಧ್ಯವಾಗಿಲ್ಲವೆಂದು ಭಾವಿಸಬಹುದೆ? ಸಾಮಾನ್ಯ ಮನುಷ್ಯನೊಬ್ಬನ ಮಿದುಳಿಗೂ ಐನ್‌ಸ್ಟೈನರ ಮಿದುಳಿಗೂ ವ್ಯತ್ಯಾಸವಿಲ್ಲವೆಂದರೂ ಅದೊಂದು ಹೊಸ ವಿಷಯವೇ ಆದೀತು. ಮತ್ತು ಈ ವಿಷಯ ಸಂಶೋಧಕರಿಗೆ ಹೊಸ ಜಾಡನ್ನು

"ನಿನ್ನ ಮೇಲೆ ಇರುವ ಪ್ರೀತಿ ನನ್ನ ಹೃದಯದಲ್ಲಿ......ಎಷ್ಟು ತುಂಬಿ......ತುಳುಕುತ್ತಿದೆ.....ಗೊತ್ತೆ...?"

ಹಿಡಿಯುವಂತೆ ಪ್ರೇರೇಪಿಸೀತು. ಆದರೆ ದುರ್ದೈವದಿಂದ ವಿಜ್ಞಾನಿಗಳೂ ನಕಾರಾತ್ಮಕ ಉತ್ತರವನ್ನೂ ಕೊಡುತ್ತಿಲ್ಲ.

೧೯೭೮ರಲ್ಲಿ ಹಾರ್ವೆ ವಿಚಿಟಾದಲ್ಲಿನ ಸ್ಟ್ಯಾಟ್ ಲ್ಯಾಬ್ ಪ್ರಯೋಗಾಲಯದಲ್ಲಿ ಕೆಲಸ ಮಾಡುತ್ತಿದ್ದ. ಆಗ ಆತ ಪ್ರಯೋಗಾಲಯದಲ್ಲಿ ಐನ್‌ಸ್ಟೈನರ ಮಿದುಳಿನ ಮೇಲೆ ಸಂಶೋಧನೆಯನ್ನೇನೂ ನಡೆಸಲಿಲ್ಲವೆಂದು ಪ್ರಯೋಗಾಲಯದ ಮುಖ್ಯಸ್ಥನಾದ ಜಾನ್ ವೈಬರ್ ಹೇಳುತ್ತಾನೆ.

ಹಾರ್ವೆಯು ಈಗ ಮಿಸ್ಸೌರಿಯ ವೆಸ್ಟನ್ನಲ್ಲಿ ಪ್ರೈವೇಟ್ ಪ್ರಾಕ್ಟೀಸು ಮಾಡುತ್ತಿದ್ದಾನೆ. ಐನ್‌ಸ್ಟೈನರ ಮಿದುಳು ಇನ್ನೂ ಆತನ ಬಳಿಯೇ ಇದೆ. ತಾನು ಸಂಶೋಧನೆಯನ್ನು ನಡೆಸಿ ಹೊಸ ತತ್ವಗಳನ್ನು ಕಂಡುಹಿಡಿಯುವದಾಗಿಯೂ ಆದರೆ ಪ್ರಯೋಗದ ವಿವರಗಳನ್ನು ಬಹಿರಂಗ ಪಡಿಸಲು ಈಗ ಕಾಲ ಪಕ್ವವಾಗಿಲ್ಲವೆಂದೂ ಅವನು ಹೇಳುತ್ತಾನೆ.

ಈಗ ಐನ್‌ಸ್ಟೈನರ ಮಿದುಳಿನ ಬಗ್ಗೆ ಉಳಿದುಕೊಂಡಿರುವ ಪ್ರಶ್ನೆಗಳು ಇಷ್ಟು: ಐನ್‌ಸ್ಟೈನ್ ತೀರಿಕೊಂಡ ದಿನ ನಿಜವಾಗಿ ನಡೆದದ್ದಾದರೂ ಏನು? ಹಾರ್ವೆಯಾಗಲಿ ಅವನ ತಂಡದವರಾಗಲಿ ಐನ್‌ಸ್ಟೈನರ ಮಿದುಳಿನ ಮೇಲೆ ಸಂಶೋಧನೆಯನ್ನಾದರೂ ನಡೆಸಿದ್ದಾರೆಯೆ? ನಡೆಸಿದ್ದರೆ ಹೊಸದೇನನ್ನಾದರೂ ಕಂಡುಹಿಡಿಯಲು ಸಾಧ್ಯವಾಗಿದೆಯೇ? ಐನ್‌ಸ್ಟೈನರ ಪೂರ್ವಾನುಮತಿಯಿಂದಲೇ ಮಿದುಳನ್ನು ಹೊರತೆಗೆದುಕೊಳ್ಳಲಾಯಿತೆ? ಸಂಶೋಧನೆಯ ವಿವರಗಳನ್ನು ಬಹಿರಂಗಪಡಿಸಲು ಕಾಲ ಪಕ್ವವಾಗಿಲ್ಲವೆಂದರೆ ಏನರ್ಥ? ಡಾ. ಹಾರ್ವೆ ಐನ್‌ಸ್ಟೈನ್ ಕುಟುಂಬದ ಪರವಾಗಿ ಸಂಶೋಧನೆ ಕೈಕೊಂಡಿದ್ದಾಗಿ ಅನೇಕ ಸಲ ಹೇಳಿಕೊಂಡಿದ್ದಾನೆ. ಐನ್‌ಸ್ಟೈನ್ ಕುಟುಂಬದ ಸದಸ್ಯರಾರೂ ಅವನ ಹೇಳಿಕೆಯನ್ನು ನಿರಾಕರಿಸಿಲ್ಲ. ಆ ಮನೆತನದ ಎಲ್ಲ ಉಸ್ತುವಾರಿಯನ್ನು ನೋಡಿಕೊಳ್ಳುವವ ಡಾ. ನಾಥನ್. ಹೀಗಿದ್ದರೂ ಐನ್‌ಸ್ಟೈನರ ಮಿದುಳನ್ನು ಸಂಶೋಧಿಸಿದ ವಿಜ್ಞಾನಿಗಳ ಹೆಸರೇ ಗೊತ್ತಿಲ್ಲವೆಂದು ಆತ ಹೇಳುವುದೇಕೆ? ಬೇಕೆಂದೇ ಆತ ವಿಷಯವನ್ನು ಮುಚ್ಚಿಡುತ್ತಿದ್ದಾನೆಯೆ ? ಮುಚ್ಚಿಡುತ್ತಿದ್ದರೆ ಏಕೆ ?

ಇದಕ್ಕೆಲ್ಲ ಉತ್ತರವಿರುವುದು ಒಬ್ಬನಲ್ಲಿಯೇ; ಆತನ ಹೆಸರೇ ಡಾ. ಹಾರ್ವೆ. ಆದರೆ ಆತ ಈ ಬಗ್ಗೆ ಮೌನವನ್ನು ಧರಿಸುವುದೇ ಶ್ರೇಯಸ್ಕರವೆಂದು ಭಾವಿಸಿದ್ದಾನೆ. ಹೀಗೆ ಪ್ರಚಂಡನಾದ ಬುದ್ಧಿಶಾಲಿಯೊಬ್ಬನ ಮಿದುಳು ೨೩ ವರ್ಷಗಳಿಂದಲೂ ಪ್ರಯೋಗಾಲಯದ ರಹಸ್ಯ ಗರ್ಭದಲ್ಲಿಯೇ ಇದೆ. ✡



ರಾಜ್ಯ ಬಂದರೇನು, ರಾಜ್ಯ ಹೋದರೇನು? ಎಲ್ಲ ಒಂದೆ.
ಪರಕೀಯರ ದಬ್ಬಾಳಿಕೆ,
ನಮ್ಮವರೆದೆಯುಬ್ಬಾಳಿಕೆ,
ಮಬ್ಬಾಳಿಕೆ, ಗಬ್ಬಾಳಿಕೆ-
ಎಲ್ಲ ಒಂದೆ, ಒಂದೆ!

ಅವರ ರಾಜ್ಯ, ಇವರ ರಾಜ್ಯ, ನಮ್ಮ ರಾಜ್ಯ, ನಿಮ್ಮ ರಾಜ್ಯ-
ಎಂಥದೋ ಕುಚೋದ್ಯ!
ಉರಿವ ಬೆಂಕಿ ಉರಿಯುತಿದೆ
ಹಾಕು ಹಾಕು ಆಜ್ಯ,
ಬಂತು ಹೊಸತು ರಾಜ್ಯ.

— ಎಂ. ಗೋಪಾಲಕೃಷ್ಣ ಅಡಿಗ
('ನಡೆದು ಬಂದ ದಾರಿ'ಯಲ್ಲಿ)

## ಅದೇ ಸರಿ!

ಸಾಕ್ಷಿಯೊಬ್ಬನಿಗೆ ಕೋರ್ಟಿನಲ್ಲಿ ಪ್ರಶ್ನೆಗೆ ಸರಿಯಾದ ಉತ್ತರವನ್ನು ಮಾತ್ರ ಸಂಕ್ಷೇಪವಾಗಿ ಹೇಳತಕ್ಕದ್ದೆಂದು ಅವನ ವಕೀಲ ಹೇಳಿಕೊಟ್ಟಿದ್ದ. ಕೋರ್ಟಿನಲ್ಲಿ ಆದ್ದರಿಂದ ಅವನ ಪ್ರಶ್ನೋತ್ತರ ಈ ಕೆಳಗಿನಂತೆ ನಡೆಯಿತು.

"ನೀನು ಟಾಂಗಾ ನಡೆಯಿಸುತ್ತೀ?"

"ಇಲ್ಲ ಸ್ವಾಮೀ."

"ಅರೆ! ಈಗ ತಾನೇ ನಿನ್ನ ವಕೀಲರು ಕೇಳಿದಾಗ ಹಾಗೆ ಹೇಳಲಿಲ್ಲವೇ ನೀನು?"

"ಇಲ್ಲ ಸ್ವಾಮೀ, ಹಾಗೆ ಹೇಳಿಲ್ಲ"

"ಈಗ ಇನ್ನೊಮ್ಮೆ ಪ್ರಮಾಣ ಮಾಡಿ ಹೇಳು, ನೀನು ಟಾಂಗಾ ಹೊಡೆಯುವುದಿಲ್ಲವೇ?"

"ಸತ್ಯವಾಗಿಯೂ ಇಲ್ಲ ಸ್ವಾಮೀ."

"ಹಾಗಾದರೆ ನಿನ್ನ ಧಂಧೆ ಏನು?"

"ನಾನು ಟಾಂಗಾ ಕುದುರೆಯನ್ನು ನಡೆಸುತ್ತೇನೆ."

*

## ಕುಡಿದಿರಲು ಸಾಧ್ಯ!

ಆರೋಪಿಯ ವಕೀಲ ಶತ ಪ್ರಯತ್ನ ಮಾಡಿ ತನ್ನ ಕಕ್ಷಿಗಾರನನ್ನು ಉಳಿಸುವ ಯತ್ನದಲ್ಲಿದ್ದ.

"ಒಬ್ಬ ಮನುಷ್ಯ ರಸ್ತೆಯ ಮೇಲೆ ಅಂಬೆಗಾಲಿಕ್ಕಿ ನಡೆಯುತ್ತಿದ್ದ ಮಾತ್ರಕ್ಕೆ ಅವನು ಕುಡಿದ ಅಮಲಿನಲ್ಲಿದ್ದನೆಂದು ಹೇಳಲಿಕ್ಕೆ ಬರಲಾರದು...!" ಎಂಬ ತರ್ಕಬದ್ಧ ವಾದ ಹೂಡಿದ.

ಅಷ್ಟಕ್ಕೇ ಆ ಪೋಲೀಸ ಸಾಕ್ಷಿ ಅಡ್ಡ ಬಾಯಿ ಹಾಕಿ ಹೇಳಿದ.

"ಅಂಬೆಗಾಲಿಕ್ಕಿ ನಡೆಯುವದಷ್ಟೇ ಅಲ್ಲ, ಈ ಆರೋಪಿ ರಸ್ತೆಯನ್ನೇ ಕಂಬಳಿಯೆಂದು ತಿಳಿದು ಅದನ್ನು ಮಡಿಚಿ ಸುರುಳಿ ಸುತ್ತುವ ಪ್ರಯತ್ನದಲ್ಲಿದ್ದ!"

*

## ನನಗೇ ಬೇಕು!

ಕುರುಬನೊಬ್ಬ ಕೋಳಿಗಳನ್ನು ಕದ್ದಿರುವ ಬಗ್ಗೆ ಆರೋಪಿಯಾಗಿ ನಿಂತಿದ್ದ.

"ಎಲ್ಲಯ್ಯಾ ನಿನ್ನ ವಕೀಲರು?" ಜಜ್ಜ ಕೇಳಿದರು.

"ನನಗೆ ಯಾರೂ ಇಲ್ಲ ಮಹಾಸ್ವಾಮೀ"

"ನಿನಗೊಬ್ಬ ವಕೀಲರ ಅವಶ್ಯಕತೆ ಇದೆ. ನಿನ್ನ ರಕ್ಷಣೆಯ ಬಗ್ಗೆ ನಾನೇ ಯಾರನ್ನಾದರೂ ನೇಮಿಸಿಕೊಡುತ್ತೇನೆ" ಜಡ್ಜ ಹೇಳಿದರು.

"ಬೇಡ ಬೇಡ ಮಹಾಸ್ವಾಮೀ. ಹಾಗೆ ಮಾತ್ರ ದಯವಿಟ್ಟು ಮಾಡಬೇಡಿ." ಅಂಗಲಾಚಿದ ಕುರುಬ.

"ಯಾಕಪ್ಪಾ?" ಜಡ್ಜರಿಗೆ ಅಚ್ಚರಿ. "ನಿನಗೇನೂ ಖರ್ಚಾಗುವುದಿಲ್ಲ, ನಿನಗೇಕೆ ಬೇಡ ವಕೀಲರು?"

"ನಿಮಗೆ ನಿಜ ಹೇಳಬೇಕೆಂದರೆ, ಆ ಕೋಳಿಗಳನ್ನು ನಾನೇ ಇಟ್ಟುಕೊಳ್ಳಬೇಕೆಂದಿದ್ದೇನೆ."

ಪಿಸುಗುಟ್ಟಿದ ಕುರುಬ!

- ಜೆಸ್‌ಕ್ವೀನ್

# ಸ್ಟೆತೋಸ್ಕೋಪ್ ಜನಕ ಡಾ. ಥಿಯೋಫಿಲ್ ಲೆನೆಕ್

ಡಾ. ಕೆ. ಎನ್. ಪೈ

ಇದು ಸುಮಾರು ಒಂದೂವರೆ ಶತಮಾನದ ಹಿಂದಿನ ಮಾತು. ಆಗ ವೈದ್ಯರು ರೋಗಿಗಳ ಎದೆಗೇ ತಮ್ಮ ಕಿವಿಯನ್ನಾಲಿಸಿ ಹೃದಯ, ಶ್ವಾಸಕೋಶಗಳ ಕಾಯಿಲೆಗಳ ಬಗ್ಗೆ ಮಾಹಿತಿಯನ್ನು ಪಡೆಯಬೇಕಾಗಿತ್ತು. ಇದು ಅನೇಕ ಸಲ ವೈದ್ಯರಿಗೂ ರೋಗಿಗಳಿಗೂ ಸಂಕೋಚಕ್ಕೆ ಕಾರಣವಾಗುತ್ತಿತ್ತು. ಕ್ರಿ.ಶ. ೧೮೧೬ರಲ್ಲಿ ಇಂತಹ ಒಂದು ಸಂದಿಗ್ಧ ಪರಿಸ್ಥಿತಿ, ಫ್ರಾನ್ಸ್ ದೇಶದ ತರುಣ ವೈದ್ಯ ಡಾ. ಲೆನೆಕ್‌ರವರಿಗೆ ಒದಗಿ ಬಂತು. ತರುಣಿ ಹೃದ್ರೋಗಿ ಒಬ್ಬಳು ಅವರ ಹತ್ತಿರ ಚಿಕಿತ್ಸೆಗಾಗಿ ಬಂದಿದ್ದಳು. ಸೂಕ್ತ ಚಿಕಿತ್ಸೆಗೆ ರೋಗದ ಪೂರ್ಣ ಮಾಹಿತಿಯನ್ನು ಪಡೆಯುವುದು ಅನಿವಾರ್ಯವಾಗಿತ್ತು. ಆದರೆ ಅವಳ ಎದೆಗೆ ತನ್ನ ಕಿವಿಯನ್ನು ಕೊಟ್ಟು ಕೇಳುವುದು ಅವರಿಗೆ ಹಿಡಿಸಲಿಲ್ಲ. ತಕ್ಷಣ ಅವರಿಗೆ ಕೆಲ ದಿನಗಳ ಹಿಂದಿನ ಘಟನೆ ನೆನಪಿಗೆ ಬಂತು. ಮಕ್ಕಳು ಆಡುತ್ತಿರುವಾಗ ಡಾ. ಲೆನೆಕ್‌ರಿಗೆ ಒಂದು ವಿಚಿತ್ರ ಕಾಣಿಸಿತು. ತನ್ಮಯರಾಗಿ ಅದನ್ನೇ ನೋಡುತ್ತ ನಿಂತುಬಿಟ್ಟರು. ಆ ಮಕ್ಕಳು ಪೊಳ್ಳು ಕಟ್ಟಿಗೆಯನ್ನು ಹಿಡಿದು ಒಬ್ಬರೊಬ್ಬರು ಕಿವಿಗೆ ಆಲಿಸಿ ಉಸಿರು ಬಿಡುತ್ತಿರುತ್ತಿವುದನ್ನು ನೋಡಿದ ಡಾ. ಲೆನೆಕ್‌ರಿಗೆ ಸ್ಟೆತೊಸ್ಕೋಪ್ ವಿಚಾರ ಹೊಳೆಯಿತು. ತಕ್ಷಣ ಹತ್ತಿರವಿದ್ದ ಒಂದು ಕಾಗದದಿಂದ ಒಂದು ಸುರುಳಿಯನ್ನು ಮಾಡಿದರು.

ಮತ್ತು ಅದರ ಒಂದು ತುದಿಯನ್ನು ರೋಗಿಯ ಎದೆಗೂ, ಮತ್ತೊಂದು ತುದಿಯನ್ನು ತನ್ನ ಕಿವಿಗೂ ಕೊಟ್ಟು, ಅವಳ ಹೃದಯದ ಬಡಿತದ ಶಬ್ದಗಳನ್ನು ಚೆನ್ನಾಗಿ ಕೇಳುವುದರಲ್ಲಿ ಆಶ್ಚರ್ಯಚಕಿತರಾದರು. ಅದು ನೇರವಾಗಿ ಎದೆಗೆ ಕಿವಿ ಕೊಟ್ಟು ಕೇಳುವುದಕ್ಕಿಂತ ಸ್ಪಷ್ಟವಾಗಿತ್ತು!

'ಸ್ಟೆತೋಸ್ಕೋಪ್' ಶಬ್ದದ ಮೂಲ ಎರಡು ಗ್ರೀಕ್ ಶಬ್ದಗಳು. ಆ ಎರಡೂ ಶಬ್ದಗಳ ಅರ್ಥ "ಹೃದಯ ಬಡಿತದ ಪರೀಕ್ಷಕ" ಎಂದಾಗುತ್ತದೆ.

ಬ್ರಿಟಾನಿ ಪ್ರಾಂತದ ಕ್ವಿಂಪರ್‌ನಲ್ಲಿ ಜನಿಸಿದ (ಫೆ. ೧೭, ೧೭೮೧) ಡಾ. ರೆನೆ ಥಿಯೋಫಿಲ್ ಹ್ಯಾಸಿಂಥೆ ಲೆನೆಕ್ ಹದಿನೆಂಟರ ಹರಯದಲ್ಲಿ ಸೇನೆಯ ಸೇವೆಗೆ ವೈದ್ಯರಾಗಿ ಹೋದರು. ಎರಡು ವರ್ಷಗಳ ನಂತರ ಪ್ಯಾರಿಸ್ಸಿಗೆ ಹೋಗಿ ವೈದ್ಯಕೀಯ ಶಿಕ್ಷಣ ಮುಂದುವರೆಸಿ ೧೮೦೪ ರಲ್ಲಿ ಪದವೀಧರರಾದರು. ಹನ್ನೆರಡು ವರ್ಷಗಳವರೆಗೆ ಹತ್ತಾರು ಕಡೆ ಕೆಲಸ ಮಾಡಿದ ಡಾ. ಲೆನೆಕ್ ಹಾಸ್ಪಿಟಲ್ ನೆಕರ್‌ನಲ್ಲಿ ಫಿಜಿಸಿಯನ್ ಆದರು. ಕಾಲೇಜ್ ಡಿ ಫ್ರಾನ್ಸ್‌ದಲ್ಲಿ ಅವರು ಪ್ರಾಧ್ಯಾಪಕರಾಗಿ ಸೇರಿದ್ದು ೧೮೧೬ ರಲ್ಲಿ. ಈ ಅವಧಿಯಲ್ಲೇ ಡಾ. ಲೆನೆಕ್ 'Traitede causcultation mediate' ಎಂಬ ವೈದ್ಯಕೀಯ ಪುಸ್ತಕ ಬರೆದದ್ದು.

ಇಂದು ಇದೆಲ್ಲವೂ, ಒಂದು ಪುಟ್ಟ ವಿಷಯವಾಗಿ ನಮಗೆ ಕಾಣಿಸಬಹುದು. ಆದರೆ ಅದು ಆಧುನಿಕ ಸ್ಟೆತೋಸ್ಕೋಪಿಗೆ ಕಾರಣವಾಗಿರುತ್ತದೆ, ಸ್ಟೆತೋಸ್ಕೋಪ್ ಸರಳವಾಗಿದ್ದರೂ, ಪ್ರತಿಯೊಬ್ಬ ವೈದ್ಯನಿಗೂ ಬಹಳ ಉಪಯುಕ್ತವಾದ, ಜೊತೆಗೆ ಹೆಮ್ಮೆಯ ಸಾಧನವೂ ಆಗಿರುತ್ತದೆ. ಅನೇಕ ಕಾಯಿಲೆಗಳನ್ನು–ಮುಖ್ಯವಾಗಿ ಶ್ವಾಸಕೋಶಗಳ ಕ್ಷಯ ಕಾಯಿಲೆಯನ್ನು–ಗುರುತಿಸುವಲ್ಲಿ ಇದು ಬಹು ಸಹಕಾರಿ. ಇದೇ ಕಾಯಿಲೆಯು ಡಾ.ಲೆನೆಕ್‌ರವರನ್ನು, ಅವರ ೪೫ನೇ ವರ್ಷದ ಸಣ್ಣ ಪ್ರಾಯದಲ್ಲಿಯೇ ಬಲಿ ತೆಗೆದುಕೊಂಡುದು (೧೩, ಆಗಸ್ಟ್ ೧೮೨೬) ವಿಧಿಯ ವಿಪರ್ಯಾಸವಲ್ಲವೇ? ಆದರೆ ಅಷ್ಟರೊಳಗೇ ಅವರು ವೈದ್ಯಕೀಯ ವೃತ್ತಿಗೆ ತಮ್ಮ ಅತ್ಯಮೂಲ್ಯವಾದ ಕೊಡುಗೆಯನ್ನಿತ್ತು ಅಮರರಾಗಿದ್ದರು!

✡

ನಾವು ಹರಟುತ್ತ ಕುಳಿತಾಗ ನನ್ನ ಗೆಳೆಯನ ಪ್ರಸ್ತಾಪ ಬಂತು. ಆತ ಕೆ. ಇ. ಬಿ. ಯಲ್ಲಿ ಕೆಲಸ ಮಾಡುತ್ತಾನೆ ಎಂದು ಹೇಳಿದೆ.

ಆಗ ನನ್ನ ತಂದೆಯವರು ನನ್ನ ತಮ್ಮನಿಗೆ ಕೆ. ಇ. ಬಿ. ಅಂದರೇನೆಂದು ಪ್ರಶ್ನಿಸಿದರು.

ಪ್ರತಿ ವರ್ಷ ಕೆ. ಇ. ಸಿ. ಯ ಕೆಲೆಂಡರನ್ನು ನಮ್ಮ ಪಕ್ಕದ ಮನೆಯವರು ನಮಗೆ ಕೊಡುತ್ತ ಬಂದಿದ್ದಾರೆ. ಕೆ. ಇ. ಸಿ. ಅಂದರೆ ಕಿರ್ಲೋಸ್ಕರ ಇಲೆಕ್ಟ್ರಿಕ್ ಕಂಪನಿಯೆಂದು ಗೊತ್ತಿದ್ದ ನನ್ನ ತಮ್ಮ ಅದೇ ಧಾಟಿಯಲ್ಲಿ ಕೆ. ಇ. ಬಿ. ಅಂದರೆ 'ಕಿರ್ಲೋಸ್ಕರ ಇಲೆಕ್ಟ್ರಿಕ್' ಎಂದು ಪ್ರಾರಂಭಿಸಿ 'ಬಿ' ಎಂದರೇನೆಂದು ತಿಳಿಯದೆ ಅರ್ಧಕ್ಷಣ ಯೋಚಿಸಿ 'ಬಸ್‌ಸ್ಟ್ಯಾಂಡ್' ಎಂದು ಹೇಳಿಬಿಟ್ಟ. ನಾವೆಲ್ಲ ನಕ್ಕುಬಿಟ್ಟೆವು; ಆದರೆ ಯಾಕೆ ನಗುತ್ತಿದ್ದೇವೆಂದು ಹೊಳೆಯದೇ ತಾನೂ ನಕ್ಕುಬಿಟ್ಟ.

–ಗುರುಮೂರ್ತಿ ಪುರಾಣಿಕ

# ಘಾಘ - ಭಡ್ಡರಿ

ಸುದರ್ಶನ ದೇಸಾಯಿ

"ಮಹಾಪ್ರಭು, ಇಂದು ಎಂಟು ಪ್ರಹರ ಕಳೆಯುವಷ್ಟರಲ್ಲಿಯೇ ಭಾರೀ ಮಳೆ ಬೀಳುವ ಯೋಗವಿದೆಯೆಂದು ನನ್ನ ಜ್ಯೋತಿಷ್ಯ ಶಾಸ್ತ್ರ ಹೇಳುತ್ತಿದೆ."

ಘಾಘನ ಮಾತು ಕೇಳುತ್ತಿದ್ದಂತೆಯೇ ಧಾರಾನಗರಿಯ ರಾಜ ಬೆಚ್ಚಿಬಿದ್ದ. ಅವನಷ್ಟೇ ಏಕೆ, ಸಭೆಯಲ್ಲಿದ್ದ ವಿದ್ವಾಂಸರೂ ಪಂಡಿತರೂ ಆಸ್ಥಾನ ಜ್ಯೋತಿಷಿಗಳೂ ಅಮಾತ್ಯ, ಮಂತ್ರಿ ಮೊದಲಾದ ಸಕಲರೂ ಬೆರಗಾಗಿ ಅವನ ಕಡೆಗೆ ನೋಡತೊಡಗಿದರು. ಅವರೆಲ್ಲರ ತಿಳುವಳಿಕೆಯಂತೆ, ಇದು ಐದು ವರ್ಷಗಳ ಅವಧಿಯ ಬರಗಾಲವಾಗಿದ್ದು, ಕಳೆದ ಮೂರು ವರ್ಷಗಳನ್ನು ಬಿಟ್ಟರೆ, ಮುಂದಿನ ಎರಡೂ ವರ್ಷಗಳಲ್ಲಿ ಮಳೆಯಾಗುವ ಯೋಗವಿರಲಿಲ್ಲ. ರಾಜ ಎಲ್ಲ ದೃಷ್ಟಿಯಿಂದಲೂ ನಿರಾಶನಾಗಿ ತಲೆಗೆ ಕೈ ಹೊತ್ತು ಕುಳಿತಿದ್ದ. ಮೂರು ವರ್ಷಗಳಿಂದ ಹನಿ ನೀರಿನ ಸ್ಪರ್ಶಕ್ಕಾಗಿ ಕಾಯ್ದು ಕುಳಿತಿದ್ದ ಭೂಮಿ ಬಿರುಕು ಬಿಟ್ಟಿತ್ತು. ಕೆರೆ ಬಾವಿಗಳಲ್ಲಿಯ ನೀರು ಪಾತಾಳ ಕಂಡಿದ್ದವು. ತೊರೆ–ಹಳ್ಳಗಳೆಲ್ಲ ಬತ್ತಿ ಎಲ್ಲಿಯೋ ಒಂದು ಕಡೆ ಸ್ವಲ್ಪ ಮಾತ್ರ ನೀರು ಹರಿಯುತ್ತಿದ್ದು ಅದೇ ಜನರಿಗೆ ಬದುಕಿರಲು ಆಸರೆಯಾಗಿತ್ತು. ಚಿಂತಾಕ್ರಾಂತನಾದ ರಾಜ ತನ್ನ ಆಸ್ಥಾನ ಜ್ಯೋತಿಷಿಗಳಿಂದ ಇನ್ನೂ ಎರಡು ವರ್ಷ ಕಾಲ ಮಳೆಯಾಗುವ ಲಕ್ಷಣವಿಲ್ಲವೆಂದು ಕೇಳಿ, ತಿಳಿದು ಭೂಮಿಗಿಳಿದು ಹೋಗುತ್ತಿದ್ದಂತೆಯೇ ಘಾಘ ಅವನ ಆಸ್ಥಾನವನ್ನು ಪ್ರವೇಶಿಸಿ ತನ್ನ ಪರಿಚಯ ಮಾಡಿಕೊಟ್ಟಿದ್ದ. ಮುಳುಗುತ್ತಿದ್ದವನಿಗೆ ಹುಲ್ಲುಕಡ್ಡಿಯ ಆಶ್ರಯವೇ ಸಾಕಲ್ಲವೇ? ಅವನೊಬ್ಬ ಜ್ಯೋತಿಷಿ ಎಂದರಿತ ರಾಜ ಅವನನ್ನು ಸಹ ಮಳೆಯ ಯೋಗದ ಬಗ್ಗೆ ವಿಚಾರಿಸಿದಾಗ, ಘಾಘ ಗುಣಿಸಿ ವಿಚಾರ ಮಾಡಿ ಮೇಲಿನಂತೆ ನುಡಿದಿದ್ದ.

೧೬೯೬ರಲ್ಲಿ ಬಾಳಿ ಬದುಕಿದ ಕನೋಜ ಹಾಗೂ ಉತ್ತರ ಪ್ರದೇಶದ ವಾಸಿ ಘಾಘ ದುಬೆ ಬ್ರಾಹ್ಮಣ ಜಾತಿಗೆ ಸೇರಿದವನಾಗಿದ್ದ. ಅವನ ಜನ್ಮಸ್ಥಳ ಮಾತ್ರ ಸಂತರ ಮೂಲದ ಹಾಗೆಯೇ ವಿವಾದಗ್ರಸ್ತವಾಗಿತ್ತು. ಕೆಲವರು ಘಾಘ ರಾಜಸ್ಥಾನದ 'ಅಸವು' ಪ್ರಾಂತದವನೆಂದರೆ, ಇನ್ನು

ಕೆಲವರು 'ಉಡಿಸು'ವವನೆಂದರು. ಶ್ರೀ ರಾಮ ನರೇಶ ತ್ರಿಪಾಠಿಯವರು ೧೯೩೧ರಲ್ಲಿ ಹಿಂದುಸ್ತಾನೀ ಅಕೆಡೆಮಿ ವತಿಯಿಂದ "ಘಾಘ ಭಡ್ಡರಿ ಸಂವಾದ" ಕವಿತಾಸಂಕಲನ ಪ್ರಕಟಿಸಿದರು. ಅವರ ಪ್ರಕಾರ ಘಾಘನ ಹೆಸರಿನ ಜೊತೆಗೆ "ಅಕಬರಾಬಾದ ಸರಾಯ" ಎಂದಿದೆ. ಅದರಂತೆ, "ಸರಾಯಘಾಘ" ಎಂಬ ಹೆಸರಿನ ಆ ಊರು ಇಂದಿಗೂ ಇದೆ. ಜ್ಯೋತಿಷ್ಯಶಾಸ್ತ್ರದಲ್ಲಿ ಅಗಾಧ ಪಾಂಡಿತ್ಯ ಸಂಪಾದಿಸಿದ ಘಾಘನಿಗೆ ರಾಜನಿಂದ ಯೋಗ್ಯ ಮರ್ಯಾದೆ ಸಿಗದಿರಲು ಅವನನ್ನು ತ್ಯಜಿಸಿ ಧಾರಾನಗರದ ಅರಸನ ಆಸ್ಥಾನಕ್ಕೆ ಬಂದಾಗ ಮೇಲಿನ ಪ್ರಸಂಗ ನಡೆಯಿತು.

ರಾಜನ ಪ್ರಶ್ನೆಯನ್ನು ಕೇಳಿ ಘಾಘ ತನ್ನ ಶಾಸ್ತ್ರದ ಪ್ರಕಾರ ವಿಚಾರಿಸಲು ಅಂದೇ ಮಳೆಯಾಗುವ ಶುಭಯೋಗ ಅವನಿಗೆ ಕಂಡು ಬಂದಿತು. ಮಹಾ ಮಹಾ ಪಂಡಿತರೇ ಇನ್ನೂ ಎರಡು ವರ್ಷ ಮಳೆಯಾಗುವದಿಲ್ಲವೆಂದು ಖಂಡತುಂಡಾಗಿ ಹೇಳಿರುವಾಗ "ಇಂದೇ ಮಳೆಯಾಗುತ್ತದೆ" ಎಂದು ಹೇಳಲು ಧೈರ್ಯ ಸಾಲದೇ ಘಾಘ, ರಾಜನಿಂದ ಸ್ವಲ್ಪ ಕಾಲಾವಕಾಶ ಪಡೆದು, ಪಶು, ಪಕ್ಷಿ ಹಾಗೂ ಸೃಷ್ಟಿಯನ್ನು ಅಭ್ಯಸಿಸಿ ರಾಜನಿಗೆ ಉತ್ತರ ಕೊಡಲು ನಿರ್ಧರಿಸಿ, ಅಡವಿಯ ಕಡೆಗೆ ನಡೆದ. ಯಾಕೆಂದರೆ ಪಶು–ಪಕ್ಷಿಗಳು ಸಹ ಮಳೆಯ ಬಗ್ಗೆ ಶಕುನ ನುಡಿಯುವ ಶಕ್ತಿಯನ್ನು ಹೊಂದಿವೆ ಎಂಬುದನ್ನು ಆತ ಅರಿತಿದ್ದ.

ದಾರಿಯಲ್ಲಿ ಒಂದು ಕತ್ತೆ ತನ್ನೆರಡೂ ಕಿವಿಗಳನ್ನು ಪೂರ್ತಿ ಕೆಳಗೆ ಜೋತು ಬಿಟ್ಟು



ಕೊಂಡಿದ್ದನ್ನು ಕಂಡು ಇದು ಮಳೆ ಬರುವ ಸೂಚನೆ ಎಂದುಕೊಂಡ ಮನದಲ್ಲಿ. ಅವನ ಮಾತಿಗೆ ಪುಷ್ಟಿ ದೊರೆತಂತಾಗಿ ಹಾಗೆಯೇ ಮುಂದುವರೆದ. ಇರುವೆಗಳ ಗುಂಪು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಆಹಾರ ಸಾಗಿಸುವ ದೃಶ್ಯ ಅವನನ್ನೂ ಆಕರ್ಷಿಸಿತು. ಗುಬ್ಬಿಗಳು ಧೂಳಿ ಸ್ನಾನ ಮಾಡುವದನ್ನೂ ಹದ್ದುಗಳು ಆಕಾಶದಲ್ಲಿ ಚಕ್ರಾಕಾರವಾಗಿ ಸುತ್ತುತ್ತ ಎತ್ತರದಲ್ಲಿ ಹಾರುವದನ್ನು ಕಂಡಾಗಲಂತೂ ಅವನ ಮನದಲ್ಲಿ ಸಂಶಯವೇ ಉಳಿಯಲಿಲ್ಲ.

ಆದರೂ ಅವನಿಗೆ ಮಳೆಯ ಯೋಗವಿದೆ ಎಂದು ರಾಜನೆದುರು ಘೋಷಿಸಲು ಧೈರ್ಯವಾಗದೇ, ಸ್ವಲ್ಪ ಬಾಯಾರಿಕೆ ಎನಿಸಿ, ನೀರು ಕುಡಿಯಲು ಸ್ವಲ್ಪ ದೂರದಲ್ಲಿದ್ದ ಹಳ್ಳದ ಕಡೆಗೆ ನಡೆದ.

ಅದೇ ವೇಳೆಗೆ ಕುರಿ ಕಾಯುವ ಒಬ್ಬ ತರುಣಿ, ಹಳ್ಳದ ಇನ್ನೊಂದು ದಡದಲ್ಲಿ ಕುರಿ ಕಾಯುತ್ತಿದ್ದ ತನ್ನ ತಂದೆಯನ್ನು ಕರೆದದ್ದು ಅವನಿಗೆ ಕೇಳಿಸಿತು.

"ಅಪ್ಪಾ ಬೇಗ ಬೇಗ ಕುರಿಗಳನ್ನು ಹೊಡೆದು ಕೊಂಡು ಬಾ. ಇಂದು ರಾತ್ರಿ ಭಾರೀ ಮಳೆ ಬೀಳಲಿದೆ. ಹಳ್ಳ ತುಂಬಿ ಬಂದಿತೆಂದರೆ ಕುರಿಗಳು ಆ ದಡದಲ್ಲಿಯೇ ಉಳಿದಾವು."

ಮಗಳ ಮಾತು ಕೇಳಿ ಚಕಿತನಾದ ಅವಳ ತಂದೆ ಕೇಳಿದ:

"ಇಂದು ಮಳೆ ಬರುವದೆಂದು ನಿನಗೆ ಹೇಗೆ ತಿಳಿಯಿತು?"

"ನಿನ್ನೆ ಹಳ್ಳದ ದಂಡೆಯಲ್ಲಿ ಒಂದು ಕಪ್ಪೆ ತತ್ತಿಗಳನ್ನಿಟ್ಟಿತ್ತು. ಆ ತತ್ತಿಗಳನ್ನು ಇಂದು ಬೇರೆ ಕಡೆಗೆ ಸಾಗಿಸುತ್ತಿದೆ. ಅದಕ್ಕಾಗಿಯೇ ಇಂದು

ಮಳೆ ಬರುವದೆಂದು ಊಹಿಸಿದೆ."

ತಂದೆ ಮಗಳ ಮಾತು ಕೇಳುತ್ತಿದ್ದಂತೆ, ಘಾಘ ಅವಳ ಸೃಷ್ಟಿಜ್ಞಾನಕ್ಕೆ ಬೆರಗಾದ. ಅವರೊಂದಿಗೆ ತನ್ನ ಮಾತಿಗೆ ಮತ್ತಿಷ್ಟು ಪುಷ್ಟಿ ದೊರೆತಂತಾಗಿ, ಸಂತೋಷದಿಂದ ಆಸ್ಥಾನಕ್ಕೆ ತೆರಳಿ ರಾಜನೆದುರು ಘೋಷಿಸಿದ.

"ಹೌದು ಪ್ರಭು, ಇಂದು ಎಂಟು ಪ್ರಹರ ಕಳೆಯುವದರೊಳಗಾಗಿಯೇ ಭಾರೀ ಮಳೆಯಾಗುವ ಯೋಗವಿದೆ."

ಅವನ ಮಾತನ್ನು ಕೇಳುತ್ತಿದ್ದಂತೆ, ಬೆಚ್ಚಿದ ಆಸ್ಥಾನಿಕರೆಲ್ಲ ಬಹುಶಃ ಅವನ ಬುದ್ಧಿ ಸರಿ ಇರಲಿಕ್ಕಿಲ್ಲವೆಂದು ಭಾಸಿಸಿದರು. ರಾಜ ಮಾತ್ರ ಶಾಂತನಾಗಿಯೇ ಅವನ ಮಾತಿಗೆ ಪುಷ್ಟಿ ಏನು ಎಂದು ಕೇಳಿದಾಗ ಘಾಘ ಉತ್ತರಿಸಿದ:

"ಮಹಾಭಾರತ ಕಾಲದಲ್ಲಿ ಒಮ್ಮೆ ಯುಧಿಷ್ಠಿರನ ವಚನದ ಮೇಲೆ ಸಂಶಯಗೊಂಡ ಜನರು ಅವನಿಗೆ ಪ್ರಮಾಣ ನೀಡಲು ಕೇಳಿದರು. ಆಗ ಯುಧಿಷ್ಠಿರ 'ಯುಧಿಷ್ಠಿರಸ್ಯ ವಚನಂ ಪ್ರಮಾಣಂ' ಎಂದ. ಅದೇ ರೀತಿ ನಾನು ಸಹ ಇಂದು ನನ್ನ ಮಾತನ್ನೇ ಪ್ರಮಾಣವೆಂದು ಸಾರಿ ಹೇಳುತ್ತೇನೆ."

ಘಾಘನ ಆತ್ಮವಿಶ್ವಾಸಕ್ಕೆ ಮಾರು ಹೋದ ರಾಜ.

"ಸರಿ. ಸರಿ. ಎಂಟು ಪ್ರಹರ ಕಳೆದ ಮೇಲೆ ಏನಿದ್ದರೂ ಬೆಳಕಿಗೆ ಬಂದೇ ಬರುತ್ತದೆ." ಎಂದು ಹೇಳುತ್ತ ಸಭೆ ವಿಸರ್ಜಿಸಿದ.

ಅಂದು ರಾತ್ರಿ ನಿದ್ರೆ ಘಾಘನ ಬಳಿ ಸುಳಿಯಲಿಲ್ಲ. ತನ್ನ ಜ್ಯೋತಿಷ್ಯಜ್ಞಾನದ ಬಗ್ಗೆ ವಿಶ್ವಾಸವಿದ್ದರೂ, ಆಕಸ್ಮಾತ್ ಏನಾದರೂ ಹೆಚ್ಚು ಕಡಿಮೆಯಾದರೆ, ಬರುವ ಲೋಕಾಪವಾದಕ್ಕೆ ಹೆದರಿ ಭೂಮಿಗಿಳಿದು ಹೋಗಿದ್ದ. ರಾತ್ರಿ ಹನ್ನೆರಡು ಹೊಡೆದು ಒಂದೊಂದೇ ತಾಸುಗಳೊಂದಿಗೆ ಏಳನೆಯ ಪ್ರಹರ ಕಳೆದು ಎಂಟನೆಯ ಪ್ರಹರವೂ ಕಾಲಿಟ್ಟಿತು. ಅದರೊಂದಿಗೆ ಆಕಸ್ಮಿಕವಾಗಿ ಸೃಷ್ಟಿಯಲ್ಲಿ ಬದಲಾವಣೆಗಳಾಗಲಾರಂಭಿಸಿದವು. ಸಮಯ ಸರಿಯುತ್ತಿದ್ದಂತೆ ಆಕಾಶದ ತುಂಬೆಲ್ಲ ಮದೋನ್ಮತ್ತ ಗಜಗಳಂಥ ಕಪ್ಪು ಮೋಡಗಳು ತುಂಬಿ ಭಯಾನಕ ವಾತಾವರಣವನ್ನುಂಟುಮಾಡಿದವು. ಮರುಕ್ಷಣವೇ ಭಯಂಕರ ಗುಡುಗು, ಸಿಡಿಲು, ಮಿಂಚಿನೊಡಗೂಡಿ ಭಾರೀ ಮಳೆ ಬೀಳಲಾರಂಭಿಸಿತು. ಆಕಾಶ ಹರಿದು ಬೀಳುವದೋ ಅಥವಾ ಮಹಾ ಪ್ರವಾಹದಿಂದ ಭೂಮಂಡಲವೇ ತೇಲಿ ಹೋಗುವದೋ ಎಂಬಂತೆ ಸುರಿಯುತ್ತಿರುವ ಗಂಗಾಪ್ರವಾಹವನ್ನು ಕಂಡ ಜನ ಹುಚ್ಚೆದ್ದು ಕುಣಿಯುತ್ತ ಘಾಘನ ಜಯಕಾರ ಮಾಡತೊಡಗಿದರು. ಘಾಘನ ಮನಸ್ಸು ಸಂತಸ ಹಾಗು ಉದ್ವೇಗದಿಂದ ತುಂಬಿ ನಿಂತಿರುವಂತೆಯೇ ಅವನ ಕಣ್ಣೆದುರು ಕುರಿ ಕಾಯುವ ತರುಣಿ, ಅವಳ ಮಾತು ಹಾಗೂ ಅವಳ ಚಂಚಲ ತಾರುಣ್ಯ ತೇಲಿ ಬಂದಿತು.

ಅವಳ ಹೆಸರು ಭಡ್ಡರಿ. ಜಾತಿಯಿಂದ ಹೊಲೆಯರು. ವೃತ್ತಿ ಕುರಿ ಕಾಯುವದು. ಅವಳ ತಂದೆ ಅವಳನ್ನು ಪ್ರೀತಿಯಿಂದ ಭಡರ ಎಂದು ಕರೆಯುತ್ತಿದ್ದ. ಅವಳ ಸೃಷ್ಟಿಜ್ಞಾನ, ಜ್ಯೋತಿಷ್ಯದ ಪಾಂಡಿತ್ಯ ಅರಿತ ಘಾಘ ಅವಳನ್ನೇ ತನ್ನ ಪತ್ನಿಯನ್ನಾಗಿ ಮಾಡಿಕೊಳ್ಳಬೇಕೆಂದು ಆಗಲೇ ನಿರ್ಧರಿಸಿಬಿಟ್ಟ.

ಸತತವಾಗಿ ಇಪ್ಪತ್ತು ತಾಸುಗಳ ವರೆಗೆ ಸುರಿದ ಮಳೆ ಒಮ್ಮೆಲೆ ನಿಂತು, ಮಳುಗುತ್ತಿರುವ ಸೂರ್ಯನ ಹೊಂಬಣ್ಣದ ಕಿರಣಗಳು ಪೃಥ್ವಿಗೆ ಅಪೂರ್ವ ಶೋಭೆ ನೀಡುತ್ತಿರುವಂತೆಯೇ ದೂತರಿಬ್ಬರು ಬಂದು ಘಾಘನನ್ನು ಮಹಾರಾಜರು ಕರೆಯುತ್ತಿರುವದಾಗಿ ಸಂದೇಶ ನೀಡಿದರು. ಅವನ ಅಗಾಧ ಪಾಂಡಿತ್ಯಕ್ಕೆ ಮೆಚ್ಚಿದ ಧಾರಾನಗರಿಯ ರಾಜ ಅವನನ್ನು ಆಸ್ಥಾನ ಜ್ಯೋತಿಷಿಯನ್ನಾಗಿ ನಿಯಮಿಸಿದ್ದ. ರಾಜನ ದರ್ಶನ ಪಡೆದು, ಆಸ್ಥಾನ ಜ್ಯೋತಿಷಿಯ ಸ್ಥಾನವನ್ನು ಸ್ವೀಕರಿಸಿದ ನಂತರ ಘಾಘ ಪಲ್ಲಕ್ಕಿಯಲ್ಲಿ ಕುಳಿತುಕೊಂಡೇ ಭಡ್ಡರಿಯ ಗುಡಿಸಲಿಗೆ ಬಂದ. ಅವಳ ತಂದೆಯನ್ನು ಭೆಟ್ಟಿಯಾಗಿ ತನ್ನ ಮನದಾಸೆ ತಿಳಿಸಿದ.

"ಸ್ವಾಮಿ ತಾವು ಬ್ರಾಹ್ಮಣರು; ನಾವೋ ಶೂದ್ರರು. ಈ ವಿವಾಹದಿಂದ ಕುಪಿತರಾದ ನಿಮ್ಮವರು, ನಿಮ್ಮನ್ನು ಸಮಾಜದಿಂದ ಹೊರ ಹಾಕಿ ಬಹಿಷ್ಕರಿಸಬಹುದು."

ಭಡ್ಡರಿಯ ತಂದೆಯ ಮಾತು ಕೇಳಿ ನಕ್ಕು ಘಾಘ ನುಡಿದ.

"ನಾನು ಎಲ್ಲವನ್ನೂ ಸಹಿಸಬಲ್ಲೆ. ಪ್ರಸಂಗ ಬಿದ್ದರೆ ಭಡ್ಡರಿಗಾಗಿ ಆಸ್ಥಾನ ಪದವಿಯನ್ನೇ ಬಿಡಬಲ್ಲೆ. ನೀನು ಎಳ್ಳಷ್ಟೂ ಚಿಂತಿಸದೇ ನಿನ್ನ ಮಗಳನ್ನು ನನಗೆ ಧಾರೆಯೆರೆದು ಕೊಡು."

ಅದೇ ಕ್ಷಣ ಪಂಚರ ಸಮಕ್ಷಮ ದೈವದ ಒಡೆತನದಲ್ಲಿ ಘಾಘ ಭಡ್ಡರಿಯರ ವಿವಾಹ ನೆರವೇರಿತು. ಈ ಸುದ್ದಿ ಕಾಳ್ಗಿಚ್ಚಿನಂತೆ ಊರತುಂಬೆಲ್ಲ ಹರಡಿ ಎಲ್ಲೆಡೆಯೂ ಭಯಾನಕ ವಾತಾವರಣ ನಿರ್ಮಾಣವಾಯಿತು. ಘಾಘ ಮಾತ್ರ ಸ್ವಲ್ಪವೂ ವಿಚಲಿತವಾಗದೇ ನುಡಿದ:

"ಸಮಾಜದ ಠೇಕೇದಾರರೇ, ನಾನು ಭಡ್ಡರಿಯನ್ನು ವಿವಾಹವಾದದ್ದು ಅವಳ ಸೌಂದರ್ಯ ಅಥವಾ ಅವಳ ಜಾತಿ ನೋಡಿ ಅಲ್ಲ. ನಾನು ನೋಡಿದ್ದು ಅವಳಲ್ಲಿಯ ಅಗಾಧ ಪಾಂಡಿತ್ಯ ಅಪ್ರತಿಮ ಜ್ಯೋತಿಷ್ಯಜ್ಞಾನ. ಅವಳು ಜಾತಿಯಲ್ಲಿ ಶೂದ್ರಳಾದರೂ, ಜ್ಞಾನದಲ್ಲಿ ಬ್ರಾಹ್ಮಣನನ್ನೂ ಮೀರಿಸಬಲ್ಲಳು. ಬೇಕಾದವರು ಪರೀಕ್ಷಿಸಬಹುದು."

ಘಾಘನ ಆಹ್ವಾನಕ್ಕೆ ಮಣಿದ ಜನರು ಒಂದು ದಿನ ಘಾಘ ಹಾಗೂ ಭಡ್ಡರಿಯರ ನಡುವೆ ವಾದ ವಿವಾದ, ಚರ್ಚೆ ಏರ್ಪಡಿಸಿದರು. ಸೃಷ್ಟಿ ಋತು, ಪಶುಪಕ್ಷಿಶಕುನ, ಮಳೆ ಮುಂತಾದವುಗಳ ಬಗ್ಗೆ ಅವಳಿಗಿದ್ದ ಜ್ಞಾನ ಕಂಡು ಬೆರಳು ಕಚ್ಚಿ ಸಮಾಜ ಅವರಿಬ್ಬರ ವಿವಾಹವನ್ನು ಮಾನ್ಯ ಮಾಡಿತು.

ಹಿಂದೀ ಸಾಹಿತ್ಯದಲ್ಲಿ ಬೇಸಾಯ, ಜ್ಯೋತಿಷ್ಯ, ಮಳೆ, ಪಶುಪಕ್ಷಿಶಕುನ, ವ್ಯಾವಹಾರಿಕ ಜ್ಞಾನ, ಮುಂತಾದವುಗಳನ್ನು ಬಿಚ್ಚಿ ಲೋಕಪ್ರಿಯ ಮಾಡಲು ಘಾಘನ ಸಹಯೋಗ ಅಮೋಘವಾಗಿದೆ ಎಂದು ಹೇಳಿದರೆ ತಪ್ಪಾಗಲಾರದು. ಭಾರತದ ಧರ್ಮಪರಾಯಣ ಜನರ ಮನದಲ್ಲಿ ಎಲ್ಲಿಯವರೆಗೆ ಮಹಾಕವಿ ಕಾಳಿದಾಸ, ಸಂತ ಕಬೀರ, ಹಾಗೂ ತುಲಸಿದಾಸರು ನೆನಪಿನಲ್ಲುಳಿಯುವರೋ ಅಲ್ಲಿಯವರೆಗೂ ಘಾಘ ಅವರಿಂದ ಮರೆಯಾಗಲಾರ. ಅವರ ಜ್ಞಾನ ಹಾಗೂ ಭಕ್ತಿ ಹೇಗೆ ಜಗತ್ತಿಗೆ ದಾರಿದೀಪವಾಗಿವೆಯೋ ಅದೇ ರೀತಿ ಘಾಘನ ಜ್ಞಾನವು ಸಹ ಬಾಳಿಗೆ ಬೆಳಕಾಗಿದೆ. ✿

(ಸಾಧಾರ)



**ಮನುಷ್ಯರಲ್ಲಿನ ಕಾಮದ ಪ್ರಮಾಣ, ವಿಷಯಸುಖವನ್ನು ಎಷ್ಟು ಸಾರಿ ಅನುಭವಿಸಿದರೆ ಸರಿ, ಎಂಬುದು ಅವನ ದೇಹಧಾರ್ಢ್ಯವನ್ನು ಅವಲಂಬಿಸಿದ್ದರೆ, ಕಾಮದ ಭಾವನೆಗಳ ವಿಕಾರ ಅವನು ಬೆಳೆದು ಹೊಂದಿಕೊಂಡ ಸಮಾಜದ ಸ್ಥಿತಿಗತಿಯನ್ನು ಅವಲಂಬಿಸಿರುತ್ತದೆ. ಒಂದು ಕಾಲದಲ್ಲಿ ಗಂಡಸರು ಹೆಂಗಸರ ನಡಿಗೆಯ ಸದ್ದು ಕೇಳಿದರೆ ಸಾಕು, ಪ್ರಚೋದನೆಗೊಳಗಾಗುತ್ತಿದ್ದರು. ಆದರೆ ಇಂದಿನ ಕಾಲದ ಮನುಷ್ಯ ಯುವತಿಯರ ತೊಡೆಗಳನ್ನು ಕಂಡರೂ ವಿಚಲಿತನಾಗದೇ ಇರಬಲ್ಲ. ಬೆತ್ತಲೇ ಇರುವುದೇ ಫ್ಯಾಶನ್ ಆದರೆ ಕೆರಳುವ ಪ್ರಶ್ನೆಯೇ ಉದ್ಭವಿಸದೇ ಲೈಂಗಿಕ ಆಕರ್ಷಣೆಯನ್ನು ಹೆಚ್ಚಿಸಲು ಹೆಣ್ಣುಗಳು ಬಟ್ಟೆ ತೊಡುವ ಕಾಲವೂ ಬರಬಹುದು.**

—ಬರ್ಟ್ರ್ಯಾಂಡ್ ರಸೆಲ್

(ಸಂಗ್ರಹ: ಸುಚೇತನ ಸ್ವರೂಪ)

ಸಮಸ್ಯೆಯ ಪರಿಹಾರ
ಗಣಿತದ ಹೊಸ ವಿಭಾಗವನ್ನೇ ನಿರ್ಮಿಸಿತು

# ಕಾನಿಗ್ಸ್‌ಬರ್ಗ್ ಸೇತುವೆಯ ಸಮಸ್ಯೆ

**ಜಿ. ರೇವಣ್ಣ**

ಸುಮಾರು ಕ್ರಿ. ಶ. ೧೭೦೦ರ ಮಾತು. ಕಾನಿಗ್ಸ್‌ಬರ್ಗ್ ಜರ್ಮನ್ ಸಾಮ್ರಾಜ್ಯದ ಒಂದು ಸುಂದರ ಪಟ್ಟಣ. ಈ ಸಾಮ್ರಾಜ್ಯದ ಈಶಾನ್ಯ ಮೂಲೆಯಲ್ಲಿದ್ದ ಈ ನಗರವನ್ನು ಪಾಟ್ಸ್‌ಡ್ಯಾಮ್ ಒಪ್ಪಂದದನ್ವಯ ರಶಿಯಕ್ಕೆ ಕೊಡಲಾಯಿತು. ಈ ಪಟ್ಟಣದ ಮೂಲಕ ಪ್ರೆಗಲ್ ನದಿಯು ಹರಿದುಹೋಗಿದೆ. ಇದು ಸೃಷ್ಟಿಯು ಆ ಪಟ್ಟಣಕ್ಕೆ ಕೊಟ್ಟ ಒಂದು ವಿಶೇಷ ಕೊಡುಗೆ. ಇದಕ್ಕಿಂತ ಹೆಚ್ಚಾಗಿ ಈ ನದಿ ಕವಲಾಗಿ ಒಡೆದು ಈ ಪಟ್ಟಣವನ್ನು ಎರಡು ದ್ವೀಪಗಳಾಗಿ ವಿಭಾಗಿಸಿದೆ (ಕಾವೇರಿಯು ಶ್ರೀರಂಗ ಪಟ್ಟಣವನ್ನು ದ್ವೀಪವಾಗಿಸಿರುವಂತೆ). ಪಟ್ಟಣ ನದಿಯ ಎರಡು ದಡಗಳ ಮೇಲೆ ಬೆಳೆದಿರುವುದರ ಜೊತೆಗೆ ಅದು ಸೃಷ್ಟಿಸಿದ ದ್ವೀಪ ಭಾಗಗಳಲ್ಲೂ ಬೆಳೆದಿದೆ. ಇದರ ಪೂರ್ಣ ಚಿತ್ರಣವನ್ನು ಈ ಕೆಳಗೆ ಕೊಟ್ಟಿರುವ ಚಿತ್ರದಿಂದ ಪಡೆಯಬಹುದು.

## ಏಳು ಸೇತುವೆಗಳು:

A ಮತ್ತು B ಗಳು ನದಿಯು ಸೃಷ್ಟಿಸಿರುವ ಎರಡು ದ್ವೀಪಗಳೆಂದೂ, C ಮತ್ತು D ಗಳು ಆ ನದಿಯ ವಿಶಾಲವಾದ ಇಕ್ಕೆಲಗಳೆಂದೂ ಭಾವಿಸಿರಿ. ಈ A, B, C, ಮತ್ತು D ಭೂ ಭಾಗಗಳ ಮೇಲೆಯೇ ಆ ಪಟ್ಟಣ ಬೆಳೆದಿದೆ. ಈ ಭೂ ಭಾಗಗಳಿಗೆ ಪರಸ್ಪರ ಸಂಪರ್ಕ ಕಲ್ಪಿಸಲು ೭ ಸೇತುವೆಗಳನ್ನು ಕಟ್ಟಲಾಗಿದೆ. ಈ ಸೇತುವೆಗಳನ್ನು ಚಿತ್ರ ೧ ರಲ್ಲಿ A, B, C, D, E, F ಮತ್ತು G ಎಂದು ಸೂಚಿಸೋಣ. ಈ ಸೇತುವೆಗಳಿಂದಲೇ ಬಹುಶಃ ಈ ಪಟ್ಟಣ ಜಗತ್‌ಪ್ರಸಿದ್ಧವಾದದ್ದು. ಅಲ್ಲದೆ, ಗಣಿತಶಾಸ್ತ್ರದ ಕೆಲವು ಮೂಲ ಕಲ್ಪನೆಗಳಿಗೆ, ತತ್ವಗಳ ಸೃಷ್ಟಿಗೆ, ಹಳೆಯ ಕಲ್ಪನೆಗಳಿಗೆ ಹೊಸ ತಿರುವು ಕೊಡುವುದಕ್ಕೆ ನಾಂದಿಯಾಯಿತೆನ್ನಬಹುದು. ಈ ಪಟ್ಟಣ ರಶಿಯಕ್ಕೆ ಸೇರಿದ್ದು. ಎರಡನೇ ಮಹಾಯುದ್ಧದ ನಂತರ ಇದನ್ನು ರಶಿಯನ್ನರು ಕ್ಯಾಲಿನಿನ್‌ಗ್ರ್ಯಾಡ್ ಎಂದು ಕರೆದಿದ್ದಾರೆ.

ಗೌರಿ ಹಬ್ಬಕ್ಕೂ ಇಮಾಮ್‌ಸಾಬಿಗೂ ಏನು ಸಂಬಂಧ ಎನ್ನುವಂತೆ, ಈ ಸೇತುವೆಗಳಿಗೂ ಗಣಿತಕ್ಕೂ ಏನು ಸಂಬಂಧ ಎಂದು ನೀವು ಕೇಳ–




ಬಹುದು. ಅದಕ್ಕೆ ಉತ್ತರವಿಷ್ಟು:

ಕ್ರಿ.ಶ.೧೭೦೦ರ ಆರಂಭ ವರ್ಷಗಳಲ್ಲಿ ಈ ಪಟ್ಟಣದ ನಿವಾಸಿಗಳಲ್ಲಿ ಒಂದು ಸಮಸ್ಯೆ ಉದ್ಭವವಾಯಿತು. ಅದು ಆ ಪಟ್ಟಣದ ನಿವಾಸಿಗಳಿಗೆ ಬಿಡಿಸಲಾಗದ ಒಗಟಾಗಿದ್ದರೆ, ಇಡೀ ಪ್ರಪಂಚಕ್ಕೆ ಸಾಧಿಸಲು ಕೊಟ್ಟ ಒಂದು ಸವಾಲಾಗಿತ್ತು. ಸುಮಾರು ಎರಡು ಶತಮಾನಗಳ ಕಾಲ ಉತ್ತರ ಕಂಡುಹಿಡಿಯಲಾಗದ ಈ ಸವಾಲಿಗೆ ಉತ್ತರವನ್ನು ಕಂಡುಹಿಡಿದ ಮಹನೀಯ ಗಣಿತ ಶಾಸ್ತ್ರದ ಹೊಸ ವಿಭಾಗವೊಂದರ ಹೊಸ ತತ್ವಗಳ ಜನಕನಾದ. ಈ ಸಮಸ್ಯೆಯೇ ಆ ಗಣಿತಜ್ಞನ ಫಲವತ್ತಾದ ಬುದ್ಧಿಭೂಮಿಯಲ್ಲಿ ಹುಲುಸಾದ ಬೆಳೆ ಬೆಳೆಯಲು ಆರಂಭಕ್ಕೆ ಬಿತ್ತಿದ ಬೀಜವಾಯಿತು.

## ಸಮಸ್ಯೆ

ನಿವಾಸಿಗಳ ಮನಸ್ಸಿನಲ್ಲಿ ಆರಂಭವಾದ ಸಮಸ್ಯೆ ಇದು: 'ಇಡೀ ಕಾನಿಗ್ಸ್‌ಬರ್ಗ್ ಪಟ್ಟಣವನ್ನು ನೋಡಹೊರಟ ಒಬ್ಬ ಪ್ರವಾಸಿ ಎಲ್ಲಾ ಭೂಭಾಗವನ್ನು ಆ ಎಲ್ಲಾ ಏಳು ಸೇತುವೆಗಳನ್ನು ಒಂದೇ ಒಂದು ಬಾರಿ ದಾಟುವುದರಿಂದ ನೋಡಲು ಸಾಧ್ಯವೆ?' ಎನ್ನುವುದು. ಹೇಗೆ ಪ್ರಯತ್ನಿಸಿದರೂ ಯಾವುದಾದರೊಂದು ಸೇತುವೆಯನ್ನು ಎರಡು ಬಾರಿ ದಾಟದೆ ಇದನ್ನು ಪೂರ್ಣಗೊಳಿಸಲಾಗುತ್ತಿರಲಿಲ್ಲ. ಅನೇಕ ಯುವಕರು ಪಂದ್ಯ ಕಟ್ಟಿಕೊಂಡು ವಿವಿಧ ಭಾಗಗಳಿಂದ ಆರಂಭಿಸಿ ಪ್ರಯತ್ನಿಸಿದಾಗಲೂ ಯಾವುದಾದರೊಂದು ಸೇತುವೆ ಮೇಲೆ ಎರಡು ಬಾರಿ ಹಾದು ಹೋಗಬೇಕಾಗುತ್ತಿತ್ತು. ಉದಾಹರಣೆಗೆ ಚಿತ್ರ



ನಲ್ಲಿ ಸೂಚಿಸಿರುವ $x$ ಎಂಬ ಒಬ್ಬ ಪ್ರವಾಸಿ ಯು ಅನುಸರಿಸಿದ ಮಾರ್ಗ ನೋಡಿ.

ಸ್ಥಾನ '*B*'ಯಿಂದ ಹೊರಟ ನಿವಾಸಿ ಸೇತುವೆ ಯನ್ನು ದಾಟಿ, '*A*' ಯನ್ನು ತಲುಪಿ, ಸೇತುವೆ '*d*' ಮೂಲಕ '*D*'' ದಡವನ್ನು ತಲುಪಿ, ಸೇತುವೆ ಮುಖಾಂತರ ಪುನಃ '*A*'ಯನ್ನು ತಲುಪಿ, ಸೇತುವೆ '*b*' ಮೂಲಕ ದಡ '*C*' ತಲುಪಿ, ಅನಂತರ *f* ಮುಖಾಂತರ ದ್ವೀಪ '*B*' ತಲುಪಿ ನಂತರ 'g' ಮೂಲಕ '*D*' ದಡಕ್ಕೆ ಬಂದರೆ ಸೇತುವೆ '*a*' ತಪ್ಪಿ ಹೋಗುತ್ತದೆ. ಅದನ್ನು ದಾಟಬೇಕಾದರೆ ಸೇತುವೆ '*d*' ಮುಖಾಂತರ ಪುನಃ (ಎರಡನೇ ಬಾರಿಗೆ) ಪ್ರಯಾಣ ಬೆಳೆಸ ಬೇಕು.

ಇನ್ನೊಂದು ಉದಾಹರಣೆ, ಚಿತ್ರ 2*b* ನಲ್ಲಿ ಇನ್ನೊಬ್ಬ '*y*' ಎಂಬ ಪ್ರವಾಸಿ '*x*' ಗಿಂತ ತಾನು ಬುದ್ಧಿವಂತನೆಂದುಕೊಂಡು ಅನುಸರಿಸಿದ ಮಾರ್ಗ ಗಮನಿಸಿ:

ದಡಕ್ಕೆ ಬಂದು ಸೇರುತ್ತಾನೆ. ಇವನು ಈಗ '*g*' ಸೇತುವೆಯನ್ನು ಬಿಟ್ಟುಬಿಟ್ಟ. ಅದನ್ನು ನೋಡಬೇಕಾದರೆ ಪುನಃ (ಎರಡನೇ ಬಾರಿಗೆ) '*f*' ಸೇತುವೆ ದಾಟಿ '*B*' ದ್ವೀಪಕ್ಕೆ ಬಂದು '*g*' ದಾಟಿದರೆ '*D*' ದಡದಲ್ಲಿ ಬಂದು ನಿಲ್ಲುತ್ತಾನೆ.

ಈ ಸಮಸ್ಯೆ ಹೊರ ದೇಶಗಳಿಗೆ ತಿಳಿದ ಮೇಲೆ ಅನೇಕ ವಿದೇಶಿ ಪ್ರವಾಸಿಗರೂ ಇಲ್ಲಿಗೆ ದರ್ಶನ ಕೊಟ್ಟುದರ ಜೊತೆಗೆ ಉತ್ತರ ಕಂಡು ಹಿಡಿಯಲು ಪ್ರಯತ್ನಿಸಿದ ನಿದರ್ಶನಗಳೂ ಇವೆ. ಆದರೆ ಯಾರಿಗೂ ಇದು ಸಾಧ್ಯವಾಗಿರಲಿಲ್ಲ. ಆದರೂ ಯಾವುದೋ ಒಂದು ರಹಸ್ಯ ವಿಧಾನ ಇರಲೇಬೇಕೆಂಬ ನಂಬಿಕೆ ಜನರಿಗೆ ಇತ್ತು. ಇದರಿಂದಲೇನೋ ಭಾನುವಾರ ರಜಾ ದಿನ ಬಂತೆಂದರೆ ಯುವಕರ ಅನೇಕ ತಂಡಗಳು ಪಂದ್ಯ ಕಟ್ಟಿಕೊಂಡು ಈ ರಹಸ್ಯವನ್ನು ತಿಳಿಯಲು ರಸ್ತೆಗಿಳಿಯುತ್ತಿದ್ದವು. ಅನೇಕ ತಂಡಗಳು ರಸ್ತೆಗಿಳಿದು ಸೇತುವೆಗಳನ್ನು ದಾಟಲು ಪ್ರಯತ್ನಿ



ಚಿತ್ರ: 2b

ಸ್ಥಾನ '*A*' ನಿಂದ ಹೊರಟು ಸೇತುವೆ '*C*' ಮುಖಾಂತರ '*D*' ದಡ ತಲುಪಿ, ಸೇತುವೆ '*d*' ಮೂಲಕ ಪುನಃ '*A*'ಗೆ ಬಂದು, ಅನಂತರ ಸೇತುವೆ '*e*' ಮೂಲಕ '*B*' ದ್ವೀಪಕ್ಕೆ ಬರುತ್ತಾನೆ. ಅಲ್ಲಿಂದ ಹೊರಟು ಸೇತುವೆ '*f*' ಮುಖಾಂತರ '*C*' ದಡಕ್ಕೆ ಬಂದು, ಸೇತುವೆ, '*a*' ಮೂಲಕ ದ್ವೀಪ '*A*'ಗೆ ಬರುತ್ತಾನೆ. ಅಲ್ಲಿಂದ ಸೇತುವೆ '*b*' ಮೂಲಕ ಪುನಃ '*C*'

ಸಿದರೆ ಗಣಿತಜ್ಞನೊಬ್ಬ ತನ್ನ ಕೋಣೆಯ ಒಳಗೆ ಕುಳಿತೇ ಸೇತುವೆ ದಾಟುತ್ತಿದ್ದ. ಬಿಸಿಲಿನಲ್ಲಿ ನಡೆದು ಗುಟ್ಟನ್ನು ತಿಳಿಯಲು ಯುವಕರ ಕಾಲುಗಳು ಕಾರ್ಯೋನ್ಮುಖವಾಗಿದ್ದರೆ, ಈತನ ಲೇಖನಿ ಸೇತುವೆ ದಾಟುವುದರಲ್ಲಿ ಕಾರ್ಯೋನ್ಮುಖವಾಗಿತ್ತು. ಈ ಸಮಸ್ಯೆಯೇ ಆಗ ಇಡೀ ಜಗತ್ತಿಗೆ ಕಾನಿಗ್ಸ್‌ಬರ್ಗ್ ಸೇತುವೆಗಳ ಸಮಸ್ಯೆ ಎಂದು ಹೆಸರಾಯಿತು.

ಸೇತುವೆಗಳನ್ನು ದಾಟುವ ಈ ಸಮಸ್ಯೆಯ ಸಾಧ್ಯಾಸಾಧ್ಯತೆಗಳ ಪ್ರಶ್ನೆಗೆ ಅಂತಿಮ ಗೆರೆ ಎಳೆದವನು ಆ ಗಣಿತಜ್ಞ ಲಿಯೋನಾರ್ಡ್ ಆಯಿಲರ್. ಅಷ್ಟು ವರ್ಷಗಳ ಕಾಲ ತೆರೆದಿದ್ದ ಈ ಸಮಸ್ಯೆಯನ್ನು ತನ್ನದೇ ಆದ ರೀತಿಯಲ್ಲಿ ಕ್ರಿ.ಶ. ೧೭೩೬ರಲ್ಲಿ ಬಗೆಹರಿಸಿ ಮನೆಯಲ್ಲಿ ಕುಳಿತೇ ಸೇತುವೆ ದಾಟಿದ್ದ.

ಚಿತ್ರ ೩*b* ರೂಪಿತವಾಯಿತು. ಇದನ್ನೇ ಅವನು ಕೊನಿಗ್ಸ್‌ಬರ್ಗ್ ಸೇತುವೆಗಳ ಜಾಲಾಕೃತಿ ಎಂದು ಕರೆದ. ಈ ಆಕೃತಿಯಲ್ಲಿ ತಾನು ಭಾವಿಸಿಕೊಂಡ ಒಂದು ಭೂಪ್ರದೇಶದಿಂದ ಇನ್ನೊಂದು ಭೂಪ್ರದೇಶಕ್ಕೆ ಸೇತುವೆ ಮೇಲೆ ತನ್ನ ಲೇಖನಿಯನ್ನು ಓಡಾಡಿಸಿದ. ಜನರು ರಸ್ತೆಯಲ್ಲಿ ಓಡಾಡಿ ಮಾಡಿದ ಕೆಲಸವನ್ನೇ ಇಲ್ಲಿ ಇವನ ಲೇಖನಿ ಮಾಡುತ್ತಿತ್ತು.



ಚಿತ್ರ. 3a

## ವಿಧಾನ:

ಹಾಗಾದರೆ ಆಯಿಲರ್ ಇದನ್ನು ಸಾಧಿಸಿದ ಬಗೆ ಹೇಗೆ? ಅನುಸರಿಸಿದ ವಿಧಾನ ಯಾವುದು?

ಇದನ್ನು ತಿಳಿಯಲು ಚಿತ್ರ *3a* ಮತ್ತು *3b* ಗಳ ಸಹಾಯ ಪಡೆಯಬಹುದು.

ಆಯಿಲರ್ ಕೊನಿಗ್ಸ್‌ಬರ್ಗ್‌ನಲ್ಲಿ ಪ್ರಗಲ್ ನದಿಗೆ ಕಟ್ಟಿದ ಆ ಏಳು ಸೇತುವೆಗಳ ಪೂರ್ಣ ಚಿತ್ರಣವನ್ನು ತನ್ನ ಪುಸ್ತಕದ ಒಂದು ಹಾಳೆಯ ಮೇಲೆ ಒಂದು ಜಾಲಾಕೃತಿಯನ್ನು (net work) ರೂಪಕ್ಕಿಳಿಸಿದ. ಚಿತ್ರ *3a* ನಿಂದ ಇದು ಸ್ಪಷ್ಟವಾಗುತ್ತದೆ. ಚಿತ್ರ *3a* ನಲ್ಲಿ ಸೂಚಿಸಿರುವ ದ್ವೀಪಗಳಾದ '*A*' ಮತ್ತು '*B*' ಗಳನ್ನೂ '*C*' ಮತ್ತು '*D*'ಗಳನ್ನೂ ಶೃಂಗಗಳು ಅಥವಾ ಗಂಟುಗಳು ಎಂದೂ, ಇವುಗಳಿಗೆ ಸಂಪರ್ಕ ಕಲ್ಪಿಸುವ ಸೇತುವೆಗಳಾದ *a*, *b*, *c*, *d*, *e*, *f* ಮತ್ತು *g* ಗಳನ್ನು ರೇಖೆಗಳು ಅಥವಾ ಕಂಸಗಳು ಎಂದು ಭಾವಿಸಿದ್ದರಿಂದ ಅವನ ಪುಸ್ತಕದ ಹಾಳೆಯ ಮೇಲೆ



ಚಿತ್ರ. 3b

ಒಂದು ಭೂಪ್ರದೇಶದಿಂದ ಹೊರಟು ಎಲ್ಲಾ ಸೇತುವೆಗಳನ್ನು ಒಂದೇ ಸಾರಿ ದಾಟುವುದರ ಮೂಲಕ ಬರಬೇಕಾದ ಈ ಸಮಸ್ಯೆಯು ಯಾವುದಾದರೊಂದು ಶೃಂಗದಲ್ಲಿ ಇಟ್ಟ ಲೇಖನಿಯನ್ನು ಎಲ್ಲಿಯೂ ಎತ್ತದೆ ಮತ್ತು ಯಾವ ಗೆರೆಯ ಮೇಲೂ ಎರಡು ಸಾರಿ ಬಾರದೆ, ಒಂದೇ ಗೆರೆಯಿಂದ ಈ ಜಾಲಾಕೃತಿಯನ್ನು ಎಳೆಯುವ ಸಮಸ್ಯೆಗೆ ಸಮವಾಯಿತು. ಈ ರೀತಿ ಒಂದೇ ಗೆರೆಯಿಂದ ಈ ಜಾಲಾಕೃತಿಯನ್ನು ಎಳೆಯಲು ಸಾಧ್ಯವಾದರೆ ಆ ಏಳು ಸೇತುವೆಗಳನ್ನು ದಾಟಲು ಸಾಧ್ಯ ಎನ್ನುವ ರೂಪಕ್ಕೆ ಈ ಸಮಸ್ಯೆಯನ್ನು ಇಳಿಸಿದ ಆಯಿಲರ್. ಈ ಸಮಸ್ಯೆಯ ಹಿನ್ನೆಲೆಯಲ್ಲಿ ಅಡಗಿದ್ದ ಶ್ರೇಷ್ಠವಾದ ಗಣಿತ ತತ್ವವನ್ನು ಹೊರಗೆಡಹಿ ಇದು ಅಸಾಧ್ಯವೆಂದು ತೋರಿಸಿ ಕೊಟ್ಟು ತೆರೆದಿದ್ದ ಈ ಸಮಸ್ಯೆಗೆ ಅಂತಿಮ ಗೆರೆ ಎಳೆದ.

### ಸೂತ್ರ:

ಸೇಂಟ್ ಪೀಟರ್ಸ್‌ಬರ್ಗ್‌ನಲ್ಲಿ ೧೭೩೬ರಲ್ಲಿ ರಶಿಯನ್ ಅಕಾಡೆಮಿಯ ಮುಂದೆ ಈ ಸಮಸ್ಯೆಗೆ ತನ್ನ ಕಲ್ಪನಾಚಾತುರ್ಯದಿಂದ ಕಂಡುಹಿಡಿದಿದ್ದ ಸರಳವಾದ ಸೂತ್ರವನ್ನು ಆಯಿಲರ್ ಮಂಡಿಸಿದ.

ಈ ಸೂತ್ರ ಆ ಜಾಲಾಕೃತಿಗೆ ಮಾತ್ರವಲ್ಲದೆ, ಅಂತಹ ಯಾವುದೆ ಜಾಲಾಕೃತಿಗೆ ಅನ್ವಯವಾಗುವುದೆಂದು ತೋರಿಸಿ ಕೊಟ್ಟ. ಅವನು ಅಂತಿಮವಾಗಿ ಕೊಟ್ಟ ಸೂತ್ರವಿದು:



ಚಿತ್ರ. 4

(೧) ಒಂದು ಜಾಲಾಕೃತಿಯಲ್ಲಿ ಬರೀ ಸರಿ ಶೃಂಗ * ( even vertices )ಗಳು ($A$, $B$, $C$ ಮತ್ತು $D$ ಚಿತ್ರ 4) ಇದ್ದಾಗ ಮಾತ್ರ, ಇಟ್ಟ ಲೇಖನಿ ಮೇಲೆತ್ತದೆ ಒಂದು ಗೆರೆಯ ಮೇಲೆ ಎರಡು ಸಾರಿ ಎಳೆಯದೆ ಒಂದು ಜಾಲಾಕೃತಿ ರಚಿಸಲು ಸಾಧ್ಯ.



ಚಿತ್ರ. 5

(೨) ಒಂದು ಜಾಲಾಕೃತಿಯಲ್ಲಿ ಎರಡು ಅಥವಾ ಎರಡಕ್ಕಿಂತ ಕಡಿಮೆ ಬೆಸ ಶೃಂಗ (odd vertex) ಗಳಿದ್ದರೆ $A$ ಮತ್ತು $C$ (ಚಿತ್ರ 5) ಇಂತಹ ಜಾಲಾಕೃತಿಯನ್ನು ಮೇಲಿನ ನಿಬಂಧನೆಯಂತೆ ರಚಿಸಲು ಸಾಧ್ಯ, ಆದರೆ ಆರಂಭ ಸ್ಥಾನಕ್ಕೆ ಬರಲು ಸಾಧ್ಯವಿಲ್ಲ.

(೩) ಇದನ್ನೆ ಸಾಮಾನ್ಯ ರೂಪದಲ್ಲಿ ಹೇಳುವುದಾದರೆ ಒಂದು ಜಾಲಾಕೃತಿಯು '$2n$' ಬೆಸ ಶೃಂಗಗಳನ್ನು ಹೊಂದಿದ್ದು, '$n$'— ಯಾವು-

* ಸರಿ ಶೃಂಗ (even vertex):— ಒಂದು ಬಿಂದುವಿನಿಂದ ಹೊರಟ ರೇಖೆಗಳು ಸರಿ ಸಂಖ್ಯೆಯಲ್ಲಿದ್ದರೆ, ಅಂದರೆ, ೨, ೪, ೬... ಅಂತಹ ಶೃಂಗವನ್ನು ಸರಿ ಶೃಂಗವೆನ್ನುವರು. ಉದಾಹರಣೆಗೆ ಎರಡು ರೇಖೆಗಳಿದ್ದರೆ ಎರಡು ಶೃಂಗ. ಬೆಸ ಶೃಂಗ (odd vertex):— ಬಿಂದುವಿನಿಂದ ಹೊರಟ ರೇಖೆಗಳು ಬೆಸ ಸಂಖ್ಯೆಯಲ್ಲಿದ್ದರೆ, ಅಂದರೆ ೧, ೩, ೫... ಅದನ್ನು ಬೆಸ ಶೃಂಗ. ಉದಾಹರಣೆಗೆ ಮೂರು ರೇಖೆಗಳಿಗೆ ಬೆಸ ಶೃಂಗ ಎನ್ನುವರು .

ದಾದರೂ ಪೂರ್ಣ ಸಂಖ್ಯೆಯಾಗಿದ್ದಾಗ ಅದನ್ನು ಪೂರ್ಣಗೊಳಿಸಲು '$n$'— ಪರ್ಯಟನ ಬೇಕಾಗುತ್ತದೆ.

ಕಾನಿಗ್ಸ್‌ಬರ್ಗ್ ಸೇತುವೆಗಳ ಸಂಖ್ಯೆಯಲ್ಲಿ ಎರಡಕ್ಕಿಂತ ಹೆಚ್ಚು ಬೆಸ ಶೃಂಗ [ಚಿತ್ರ 3$a$ಸಲ್ಲಿ, ಮೂರು–ಶೃಂಗಗಳು, ($B$, $C$, $D$) ಮೂರು, ಐದು 5–ಶೃಂಗ ($A$) ] ಗಳಿರುವುದರಿಂದ ಇದು ಅಸಾಧ್ಯವೆಂದು ತೋರಿಸಿಕೊಟ್ಟ.

## ಎಂಟು ಸೇತುವೆಗಳು

ಇದರಲ್ಲಿ ಯಾವುದಾದರೂ ಎರಡು ಶೃಂಗಗಳನ್ನು ಸರಿ ಶೃಂಗಗಳಾಗಿ ಮಾಡಿದರೆ ಇದು ಸಾಧ್ಯ ಎಂಬ ತನ್ನ ಸೂತ್ರವನ್ನು ಮುಂದಿಟ್ಟ. ಆದ್ದರಿಂದ ರಶಿಯನ್ ಸರಕಾರವು ಆಯಿಲರ್ ಸಲಹೆಯಂತೆ '$E$' ಎಂಬ ಸ್ಥಳದಲ್ಲಿ '$C$' ಮತ್ತು '$D$' ದಡಗಳನ್ನು ಸೇರಿಸುವಂತೆ '$h$' ಎಂಟನೇ ಸೇತುವೆಯನ್ನು ನಿರ್ಮಿಸಿತು. (ಚಿತ್ರ 6)

ಚಿತ್ರ 7$a$ ಯಲ್ಲಿ ಆ ಪ್ರವಾಸಿಯು ($x$) ಅನುಸರಿಸಿದ ಮಾರ್ಗದ ಜಾಲಾಕೃತಿಯನ್ನು ಪರಿಶೀಲಿಸಬಹುದು. '$B$' ಯಿಂದ ಹೊರಟ ಪ್ರವಾಸಿ '$C$' ಸೇತುವೆ ಮೂಲಕ '$A$' ತಲುಪುತ್ತಾನೆ. ಅಲ್ಲಿಂದ ಹೊರಟವನು '$d$' ಸೇತುವೆ ಮುಖಾಂತರ '$D$' ತಲುಪಿ, ಸೇತುವೆ '$C$' ಮುಖಾಂತರ '$A$'ಗೆ ಬರುವನು. ಅಲ್ಲಿಂದ '$b$' ಸೇತುವೆ ಮೂಲಕ '$C$' ದಡಕ್ಕೆ ಬಂದು '$f$' ಸೇತುವೆ ಮೂಲಕ ದ್ವೀಪ '$B$'ಗೆ ಬರುತ್ತಾನೆ. ಸೇತುವೆ '$g$' ಮೂಲಕ ದಡ '$D$'ಗೆ ಬಂದು ಹೊಸ ಸೇತುವೆ $h$ ಮೂಲಕ ದಡ $C$ ತಲುಪುವನು. ಅನಂತರ ಸೇತುವೆ '$a$' ಮೂಲಕ ದ್ವೀಪ '$A$' ತಲುಪುತ್ತಾನೆ. ಅಂದರೆ, ಮೇಲೆ ಅನುಸರಿಸಿದ ಮಾರ್ಗದಲ್ಲಿ '$B$' ನಲ್ಲಿ ಇಟ್ಟ ಲೇಖನಿಯನ್ನು ಮೇಲೆತ್ತದೆ ಈ ಜಾಲಾಕೃತಿಯನ್ನು ಬರೆಯಬಹುದೆಂದಾಯಿತು. ಇದೇ ರೀತಿ 2$b$ನಲ್ಲಿ ಕೊಟ್ಟಿರುವ ಮಾರ್ಗದ ಜಾಲಾಕೃತಿಯನ್ನು ಹೊಸ ಸೇತುವೆಯನ್ನು ಬಳಸಿ



ಚಿತ್ರ 6

ಈಗ '$C$' ಮತ್ತು '$D$'ಗಳು ಸರಿಶೃಂಗಗಳಾದವು. '$A$' ಮತ್ತು '$B$' ಶೃಂಗಗಳು ಮಾತ್ರ ಬೆಸ ಶೃಂಗಗಳಾಗಿ ಉಳಿದವು.

ಈಗ ಚಿತ್ರ 2$a$, 2$b$ಗಳಲ್ಲಿ ಸೂಚಿಸಿರುವ ಒಬ್ಬೊಬ್ಬ ಪ್ರವಾಸಿಯು ಪ್ರಯತ್ನಿಸಿದ ಮಾರ್ಗ–ವನ್ನು ಜಾಲಾಕೃತಿಯನ್ನಾಗಿ ನಿರ್ಮಿಸಿ, ಆ ಪ್ರವಾಸಿಗಳಿಗೆ ಹೊಸ ಸೇತುವೆ '$h$'ಅನ್ನು ನಿರ್ಮಿಸಿ ಕೊಟ್ಟಾಗ ಮೇಲೆ ಸೂಚಿಸಿದ ನಿಬಂಧನೆಯಂತೆ ಅವುಗಳನ್ನು ದಾಟಲು ಸಾಧ್ಯವೇ ಎಂಬುದನ್ನು ನೋಡೋಣ.

ಕೊಂಡು ಈ ರೀತಿ ಬರೆಯಲು ಸಾಧ್ಯವೇ ಎನ್ನುವುದನ್ನು ನೀವು ಪ್ರಯತ್ನಿಸಬಹುದು. (ಚಿತ್ರ–7$b$.)

ಈ ಎರಡು ಸಂದರ್ಭಗಳಲ್ಲಿಯೂ ನಾವು ಬೆಸ ಶೃಂಗಗಳಿಂದ ಆರಂಭಿಸಿದ್ದೇವೆ ಎಂಬುದು ನಿಮಗೆ ಈಗಾಗಲೇ ಗೊತ್ತಿರಬಹುದು. ಮತ್ತು ಹೊರಟ ಸ್ಥಾನದಿಂದ ಆರಂಭ ಸ್ಥಾನಕ್ಕೆ ಬಂದು ಸೇರಲಾಗುವುದಿಲ್ಲ ಎಂಬ ತತ್ವವೂ ಗಮನಕ್ಕೆ ಬಂದಿರಬೇಕು.

ಅಂದರೆ, ಒಂದು ಜಾಲಾಕೃತಿಯಲ್ಲಿ ಎರಡು ಬೆಸ ಶೃಂಗಗಳಿದ್ದರೆ, ಆ ಎರಡರಲ್ಲಿ ಯಾವುದಾದ




ಚಿತ್ರ. 7a




ಚಿತ್ರ. 7b

ರೊಂದರಿಂದ ಆರಂಭಿಸಿ ಇಟ್ಟ ಲೇಖನಿಯನ್ನು ಮೇಲೆತ್ತದೆ ಆ ಜಾಲಾಕೃತಿಯನ್ನು ಬರೆಯಲು ಸಾಧ್ಯವಿದೆ. ಆದರೆ ಹೊರಟ ಸ್ಥಾನಕ್ಕೆ ಬರಲು ಸಾಧ್ಯವಿಲ್ಲ. ಅವನ ಈ ತತ್ವ ಮತ್ತು ಮೇಲಿನ ಸೂತ್ರದಲ್ಲಿ ಸೂಚಿಸಿದ ಒಂದನೇ ಸೂತ್ರವನ್ನು ಟ್ರಾವರ್ಸಬಿಲಿಟಿ ಎಂದು ಕರೆದ. ಚಿತ್ರ 4. 5. 6 ಮತ್ತು 7 ರಲ್ಲಿ ಕಾಣುವ ಜಾಲಾಕೃತಿಗಳು ಈ ತತ್ವವನ್ನು ಅನುಸರಿಸುತ್ತವೆ.

ಈ ಸಮಸ್ಯೆಯು ಸೂತ್ರ ಅನ್ವೇಷಣೆ ಗಣಿತದ ಹೊಸ ವಿಭಾಗ ಟೊಪಾಲಜಿಯ ಬೆಳವಣಿಗೆಗೆ ಕಾರಣವಾಯಿತು. ಆದ್ದರಿಂದ ಆಯಿಲರ್‌ನನ್ನು ಟೊಪಾಲಜಿಯ ಜನಕ ಎಂದು ಕರೆಯಲಾಗುತ್ತಿದೆ.

## ನಿಮಗೇನು ಉಪಯೋಗ?

ಗಣಿತದ ಈ ವಿಭಾಗವು ಭರದಿಂದ ಬೆಳೆಯುತ್ತಿರುವ ವಿಭಾಗ. ವಿದ್ಯಾಭ್ಯಾಸದ ಉನ್ನತ ಮಟ್ಟದಲ್ಲಿ ಈ ವಿಭಾಗ ಮೊದಲು ಪ್ರಚಲಿತವಲ್ಲಿದ್ದು ಈಗ ಎಂಟು, ಒಂಭತ್ತು ಮತ್ತು ಹತ್ತನೇ ತರಗತಿಗಳಿಗೆ ಹೊಸದಾಗಿ ಬಂದಿರುವ ಪಠ್ಯಗಳಲ್ಲಿ ಸೇರಿಕೊಂಡಿದೆ. ಆದ್ದರಿಂದ ವಿದ್ಯಾರ್ಥಿಗಳಿಗೆ ಅಧ್ಯಾಪಕರಿಗೆ ಈ ಪ್ರಬಂಧವು ಒಂದು ಪೀಠಿಕೆಯಾಗಬಹುದು.

ಬೆಂಗಳೂರು ನಗರ ರಸ್ತೆ ಸಾರಿಗೆಯ ಅವ್ಯವಸ್ಥೆ ನಗರಕ್ಕೆ ಭೆಟ್ಟಿ ಕೊಟ್ಟ ಮತ್ತು ಕೊಡದವರಿಗೂ ಕೂಡ ಪರಿಚಿತವಾದ ಸಮಸ್ಯೆ. ದಿನನಿತ್ಯದ ನಗರ ಪ್ರಯಾಣಿಕರು, ನಗರ ನೋಡಲು ಬಂದ ಪ್ರೇಕ್ಷಕರು ಬಸ್ ಸ್ಟಾಪುಗಳಲ್ಲಿ ಕಾದು ಕಾದು ಸಾಕಾಗಿ, ಈ ಹಾಳು ಸರಕಾರ ಇನ್ನೂ ನೂರು ಬಸ್ಸುಗಳನ್ನು ಏಕೆ ಹಾಕಬಾರದೆಂದು ಗೊಣಗುವದು ಸಾಮಾನ್ಯ. ಆದರೆ ಒಬ್ಬ ಟೋಪಾಲಜಿಸ್ಟನ ಪ್ರಕಾರ ಇದು ಸಮಸ್ಯೆಗೆ ಪರಿಹಾರವಲ್ಲ. ಏಕೆಂದರೆ ಒಬ್ಬ ಪ್ರಯಾಣಿಕ ಈಗಿರುವ ವ್ಯವಸ್ಥೆಯಲ್ಲಿ ಆರು ಗಂಟೆಗೆ ಹೊರಟು ಬಸ್ಸು ಸಿಗದೆ ಹೇಗೋ ನೂಕುನುಗ್ಗಲಿನಲ್ಲಿ ಬಸ್ಸು ಹತ್ತಿ ಎಂಟು ಗಂಟೆಗೆ ಮನೆ ಸೇರಿದನೆಂದು ಇಟ್ಟುಕೊಂಡರೆ, ನೂರು ಬಸ್ಸುಗಳನ್ನು ಹಾಕಿದ ಸಂದರ್ಭಗಳಲ್ಲಿಯೂ ೬ ಗಂಟೆಗೆ ಬಸ್ಸು ಸಿಕ್ಕರೂ ಅವನು ಮನೆ ಸೇರುವುದು ೮ ಗಂಟೆಗೇ ಎನ್ನುತ್ತಾನೆ! ಈ ಎರಡಕ್ಕೂ ಇರುವ ವ್ಯತ್ಯಾಸವೆಂದರೆ ಮೊದಲ ಸಂದರ್ಭದಲ್ಲಿ ಪ್ರಯಾಣಿಕ ಬಸ್ ಸ್ಟಾಪಿನಲ್ಲಿ ನಿಂತಿದ್ದಾನೆ; ಎರಡನೆ ಸಂದರ್ಭದಲ್ಲಿ ಆತನು ಬಸ್ಸಿನಲ್ಲಿ ಕುಳಿತಿರುತ್ತಾನೆ ಅಷ್ಟೆ. ಆದರೆ ಮನೆ ಸೇರುವುದು ಒಂದೇ ಕಾಲಕ್ಕೆ. ಇದಕ್ಕೆ ಕಾರಣ ನಗರದ ಈಗಿರುವ ರಸ್ತೆಗಳ ಜಾಲ. ಈ ರಸ್ತೆಗಳ ಜಾಲದ ಕೆಲವು ಶೃಂಗಗಳಲ್ಲಿ ಬಸ್ಸುಗಳು ತಡೆಗೆ ಒಳಗಾಗುತ್ತವೆ. ಆದ್ದರಿಂದ ನಗರದ ಸಾರಿಗೆ ಸಮಸ್ಯೆಗೆ ಪರಿಹಾರ ಹೆಚ್ಚು ಬಸ್ಸುಗಳನ್ನು ಸೇರಿಸುವುದಲ್ಲ; ಬದಲು ರಸ್ತೆಗಳ ಹೊಸ ಜಾಲಗಳನ್ನು ಸೃಷ್ಟಿಸುವುದು. ✡



ದಿನದಿಂದ ದಿನಕ್ಕೆ ಹೊಸ ತಿರುವು ಪಡೆದ ಪ್ರಕರಣ

# ನಿಂಗವ್ವನ ಗಂಡನ ಕೊಲೆಯ ರಹಸ್ಯ

ಗುರುಪುತ್ರ ಪಸಾರದ

೧೯೭೭ರ ಅಕ್ಟೋಬರ್ ೩೦ರ ಬೆಳಗು. ಎಲ್ಲೆಲ್ಲೂ ಅದೇ ಹಕ್ಕಿಗಳ ಚಿಲಿಪಿಲಿ, ಕೋಳಿಗಳ ಕೂಗು. ಮೇಲೇರಿ ಬರಲು ಹವಣಿಸುತ್ತ ಮೂಡಣದಲ್ಲಿ ಸೂರ್ಯ ಏರುತ್ತಿದ್ದ. ಒಟ್ಟಿನಲ್ಲಿ ಹೇಳುವುದಾದರೆ ನಿಸರ್ಗದ ಚಟುವಟಿಕೆಗಳಲ್ಲಿ ಯಾವ ವ್ಯತ್ಯಾಸವೂ ತೋರುತ್ತಿರಲಿಲ್ಲ. ಆದರೆ ರಾಮದುರ್ಗ ತಾಲೂಕಿನ ಪೂರ್ವ ಗಡಿಯ ಚಿಕ್ಕೊಪ್ಪದಲ್ಲಿ ಬಿಕೊ ಬಿಕೋ ಎನ್ನುತ್ತಿತ್ತು ವಾತಾವರಣ.

ಆ ಹಳ್ಳಿಯಲ್ಲಿಯೇ ಸುಂದರ ಯುವತಿ ಎನಿಸಿಕೊಂಡ ನಿಂಗವ್ವನನ್ನು ಆಕೆಯ ತಾಯಿ–ತಂದೆಯರು ಪಕ್ಕದ ಬದಾಮಿ ತಾಲೂಕಿನ ಹಳ್ಳಿಯೊಂದರ ಸುಮಾರು ೨೪ ವರ್ಷದ ಶಂಕರಗೌಡನಿಗೆ ಒಂದೆರಡು ವರ್ಷಗಳ ಹಿಂದೆ ಮದುವೆ ಮಾಡಿಕೊಟ್ಟಿದ್ದರು. ಗಂಡನ ಊರಲ್ಲಿ ಬದುಕಿಗೆ ಸಾಲುವಷ್ಟು ಆದಾಯವಿಲ್ಲವೆಂತಲೂ ಅತ್ತೆಯ ಕಾಟ ತಾಳೆನೆಂತಲೂ ನಿಂಗವ್ವ ಗಂಡನನ್ನು ಕಟ್ಟಿಕೊಂಡೇ ತವರು ಮನೆಗೆ ಬಂದು ಒಂದೆರಡು ತಿಂಗಳುಗಳಿಂದ ವಾಸವಾಗಿದ್ದಳು. ಅವಳ ತಂದೆ, ಮಗಳು–ಅಳಿಯಂದಿರಿಗೆ ಪ್ರತ್ಯೇಕ ವಾಸದ ಮನೆಯೊಂದನ್ನು ಬಾಡಿಗೆಯಿಂದ ಕೊಡಿಸಿದ.

ಭುಜಂಗಪ್ಪ ಮೋಹಿತೆಗೆ ಆ ಹಳ್ಳಿಯಲ್ಲಿ ಸ್ವಲ್ಪ ವಿಶಾಲವಾದ ಅಂಗಣವಿದ್ದ ಒಂದು ದೊಡ್ಡ ಮನೆಯಿತ್ತು. ಆ ಮನೆಯ ಒಂದು ಭಾಗದಲ್ಲಿಯೇ ನಿಂಗವ್ವ ತನ್ನ ಗಂಡ ಶಂಕರಗೌಡನೊಂದಿಗೆ _ ವಾಸವಾಗಿದ್ದಳು. ಮಕ್ಕಳು ಮರಿಗಳೇನೂ ಆಗಿರಲಿಲ್ಲ.

## ರಕ್ತ!

ಅಕ್ಟೋಬರ್ ೩೦ರ ನಸುಕಿನಲ್ಲಿ ಬೇಗನೆ ಎದ್ದು ಮನೆಯ ಮುಂಬಾಗಿಲಿಗೆ ಬಂದವಳೆಂದರೆ ಭುಜಂಗಪ್ಪನ ಸೋದರ ಸಂಬಂಧಿ ಶಕುಂತಲಾ. ಆ ದೊಡ್ಡ ಮನೆಯ ಮುಂಬಾಗಿಲ ಎದುರಿಗೆ ಅಂಗಳದಲ್ಲಿ ಯಾರೋ ಕೌದಿಯ ಮೇಲೆ ಕಂಬಳಿಯನ್ನು ಪೂರ್ತಿ ಹೊದ್ದುಕೊಂಡು ಮಲಗಿದ್ದು ಶಕುಂತಲಾಳಿಗೆ ಸ್ವಲ್ಪ ಅಸಹಜವಾಗಿ ಕಂಡಿತು. ಯಾರೆಂದು ಯೋಚಿಸುವ ಮೊದಲೇ ನಿಂಗವ್ವ ತಾನಿದ್ದ ಮನೆಯ ಕೋಣೆಯಿಂದ ಆಕಳಿಸುತ್ತ ಹೊರಬಂದಳು. ಮಲಗಿದಾತ ತನ್ನ ಗಂಡನೆಂದು ಹೇಳಿ, ಅಷ್ಟು ಜಾಗೆಯನ್ನು ಬಿಟ್ಟು ಕಸ ಗುಡಿಸಿಕೊಳ್ಳಬಹುದೆಂದು ನಿಂಗವ್ವ ಶಕುಂತಲಾಳಿಗೆ ಹೇಳಿದಳು. ಆದರೆ ಶಕುಂತಲಾ, 'ಹೊತ್ತೇರತೊಡಗಿದೆ. ಗಂಡನನ್ನು ಎಬ್ಬಿಸು' ಎಂದಾಗ, ನಿಂಗವ್ವ ಗಂಡನ ಕಂಬಳಿಯ ಮುಸುಕು ತೆಗೆದಳು. ಆಕೆಯ ಎದೆ ಧಸಕ್ಕೆಂದಿತು! ಶಂಕರಗೌಡನ ಮುಖಕ್ಕೆ, ಕುತ್ತಿಗೆಗೆ ನಾಲ್ಕೈದು ಕೊಡಲಿಯ ಕಚ್ಚು ಬಿದ್ದಿವೆ. ಆತ ಮಲಗಿದ ಕೌದಿ ರಕ್ತದಿಂದ ತೋಯ್ದು ಮುದ್ದೆಯಾಗಿ ಬಿಟ್ಟಿದೆ. ಶಂಕರಗೌಡನ ಶರೀರದಲ್ಲಿ ಪ್ರಾಣವಿರುವ ಯಾವ ಲಕ್ಷಣವೂ ಇರಲಿಲ್ಲ. ಈ ಅಮಾನುಷ ಕೊಲೆಯನ್ನು ಮೊಟ್ಟ ಮೊದಲು ನೋಡಿದ ಇಬ್ಬರೂ ಎದೆ ಬಡಿದುಕೊಂಡು ಅಳತೊಡಗಿದರು. ಅಕ್ಕ–ಪಕ್ಕದ ಜನ, ತಕ್ಷಣವೇ ಕೂಡಿದರು. ಬಾಳಿನ

ತರುಣವಲ್ಲಿಯೇ ಗಂಡನನ್ನು ಕಳೆದುಕೊಂಡ ನಿಂಗವ್ವನಿಗಾಗಿ ಎಲ್ಲರೂ ಮರುಕಪಡುವವರೇ. ಅಷ್ಟರಲ್ಲಿ ಆ ಹಳ್ಳಿಯ ಪೋಲೀಸ್ ಪಟೇಲರು ದಯಮಾಡಿಸಿದರು. ಜನರೆಲ್ಲಾ ಆಚೆ-ಈಚೆ ಸರಿದು ಪಟೇಲರಿಗೆ ದಾರಿ ಮಾಡಿಕೊಟ್ಟರು. ಆತ ಶವವಿದ್ದ ಸ್ಥಳವನ್ನೂ ಶಂಕರಗೌಡನು ಹೆಂಡತಿಯೊಂದಿಗೆ ವಾಸವಾಗಿದ್ದ ಮನೆ ಮತ್ತು ಅದರ ಸುತ್ತಲಿನ ಅಂಗಣವನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದನು. ಹೊಸ್ತಿಲಿಗೆ ರಕ್ತ ಸಿಡಿದದ್ದು ಗೋಚರಿಸಿತು. ಗೋಡೆಗೂ ಅಲ್ಲಲ್ಲಿ ರಕ್ತ ಸಿಡಿದದ್ದು ಕಂಡಿತು. ವಿಸ್ಮಯಗೊಂಡ ಪಟೇಲ ಆ ಮನೆಯಲ್ಲಿ ಯಾರೂ ಆ ಕ್ಷಣದಿಂದ ಒಳಗೆ ಹೋಗದಂತೆ ವ್ಯವಸ್ಥೆ ಮಾಡಿ ನಿಂಗವ್ವನನ್ನೂ ಅವಳ ತಂದೆ ಯನ್ನೂ ತನ್ನ ಮನೆಗೆ ಕರೆದೊಯ್ದ. ತನ್ನ ಮನೆಯಲ್ಲಿ ನಿಂಗವ್ವನನ್ನು ನಡೆದದ್ದಾವರೂ ಏನೆಂದು ಪಟೇಲ ವಿಚಾರಿಸಿದ. ನಿಂಗವ್ವ ಹೌ-ಹಾರಿಹೋಗಿದ್ದಳು. ಅತ್ತು ಅತ್ತು ಮುಖ ನಿಸ್ತೇಜವಾಗಿತ್ತು. ತುಂಬ ಗಾಬರಿಗೊಂಡ ಅವಳು ಪಟೇಲನ ಕಾಲಿಗೆ ಬಿದ್ದವಳೇ ತನ್ನನ್ನು ರಕ್ಷಿಸುವ ಭರವಸೆ ಕೊಟ್ಟರೆ ಎಲ್ಲವನ್ನೂ ಹೇಳುವೆನೆಂದು ಹೇಳಿ, ಕೊಲೆಯ ಸವಿಸ್ತರವಾದ ವಿವರಣೆ ನೀಡಿದಳು. ಪಟೇಲ ತಕ್ಷಣ ಅವಳ ಹೇಳಿಕೆ ಬರೆದುಕೊಂಡು ರಾಮದುರ್ಗ ಪೋಲೀಸ್‌ಠಾಣೆಗೆ ವರದಿ ಕಳಿಸಿದ.

## ಎಫ್.ಐ.ಆರ್.

ಸರಿ, ಆ ದಿನ ಮುಂಜಾನೆ ನಿತ್ಯದಂತೆ ನಾನು ಮನೆಯಿಂದ ಕೋರ್ಟಿಗೆ ಹೋಗುವ ತಯಾರಿ ಯಲ್ಲಿದ್ದೆ. ಅಷ್ಟರಲ್ಲಿ ನನ್ನ ಸ್ನೇಹಿತರಾದ ಒಬ್ಬ ಎಂಜಿನೀಯರರು, ಒಬ್ಬ ಡಾಕ್ಟರರು ನನ್ನ ಮನೆಗೆ ಬಂದರು. ನಾವೆಲ್ಲ ಹರಟುತ್ತ ಕುಳಿತಾಗ ಪೋಲಿಸ್ ಕಾನ್‌ಸ್ಟೇಬಲ್‌ನೊಬ್ಬ ಬಂದು, "ಸರ್, ನಿನ್ನೆ ರಾತ್ರಿ ಒಂದು ಮರ್ಡರ್ ಆಗಿದೆ, ಎಫ್. ಐ. ಆರ್. (ಪ್ರಥಮ ವರ್ತಮಾನದ) ವರದಿ ತಂದಿದ್ದೇನೆ," ಎಂದ. ನೂರಾರು ಮರ್ಡರುಗಳ ಎಫ್. ಐ. ಆರ್. ಪಡೆದುಕೊಂಡ ನನಗೇನೂ ಅನಿಸದಿದ್ದರೂ, ನನ್ನ ಸ್ನೇಹಿತರಿಬ್ಬರೂ ಕಾನ್‌ಸ್ಟೇಬಲ್‌ನ ಮಾತು ಕೇಳಿ ಬೆಚ್ಚಿ ಬಿದ್ದರು. "ಏನು ಮ್ಯಾಜಿಸ್ಟ್ರೇಟ್ ಸಾಹೇಬರೆ, ಬೆಳಗ್ಗೆದ್ದವರೇ ನಿಮ್ಮ ಕಡೆ ಬಂದರೆ ಕೊಲೆ ಸುದ್ದಿ ಕೇಳಬೇಕಾಯಿತಲ್ಲ ಸ್ವಾಮಿ," ಎಂದರು. ಅವರಿಬ್ಬರಿಗೂ ಸುದ್ದಿ ಕೇಳಿ ವಿವರ ತಿಳಿದುಕೊಳ್ಳಬೇಕೆಂಬ ಉತ್ಕಟ ಕುತೂಹಲ. ಅವರಿಗಾಗಿ ಫರ್ಸ್ಟ್ ಇನ್ ಫಾರ್ಮೇಶನ್ ರಿಪೋರ್ಟ್ ಓದಿ ಹೇಳಿದೆ. ನಿಂಗವ್ವ ಪೋಲೀಸ ಪಟೇಲರಿಗೆ ಹೇಳಿದ ಕೊಲೆಯ ವಿವರವೇ ಅದರಲ್ಲಿತ್ತು. ಅದರ ಸಾರಾಂಶ ಹೀಗಿದೆ: ನಿಂಗವ್ವ ಮದುವೆಗೆ ಮೊದಲೇ ಆ ಹಳ್ಳಿಯ ಸಿರಿವಂತ ಕುಟುಂಬದ ಮಹೇಶನೆಂಬ ಯುವಕನಲ್ಲಿ ಮೋಹಿತಳಾಗಿ ಅನುರಕ್ತಳಾಗಿದ್ದಳು. ಅವರಿಬ್ಬರೂ ಆಗಾಗ ಏಕಾಂತದಲ್ಲಿ ಭೇಟಿಯಾಗಿ ಸಾಕಷ್ಟು ಸಲ ರತಿಕ್ರೀಡೆಯ ಸೊಗಸನ್ನೂ ಕಂಡುಂಡಿದ್ದರು. ಹೀಗಿರುತ್ತ ನಿಂಗವ್ವನ ಮದುವೆ ಶಂಕರಗೌಡನೊಂದಿಗೆ ಅವಳ ಇಚ್ಛೆಗೆ ವಿರುದ್ಧವಾಗಿ ನಡೆದುಹೋಯಿತು. ಗಂಡನ ಮನೆಗೆ ಹೋದದ್ದೂ ಆಯಿತು. ಅಂದಗಾತಿ ನಿಂಗವ್ವ ಬಹುಶಃ ಸಿರಿವಂತ ಮಹೇಶನ ಸ್ನೇಹದಿಂದಾಗಿ ತನ್ನ ಚೆಲುವನ್ನು ಮೆರೆಸಲು ಸ್ನೋ-ಪೌಡರಿನಂತಹ ಸೌಂದರ್ಯಸಾಧನ ಬಳಸುತ್ತಿದ್ದಳು. ಅದು ಅವಳ ಅತ್ತೆಗೆ ಸರಿಬರದಾಯಿತು. ಅದೇ ಕಾರಣ ಮೂಲವಾಗಿ ಅತ್ತೆ ಸೊಸೆಯರಿಗೆ ಮೇಲಿಂದ ಮೇಲೆ ಮನಸ್ತಾಪವಾಗತೊಡಗಿತು. ಅತ್ತೆಯ ಮನೆಯನ್ನು ಬಿಟ್ಟು ದೀರ್ಘಕಾಲ ನಿಂಗವ್ವ ತವರು ಮನೆಗೆ ಬಂದಾಯಿತು. ಮತ್ತೆ ಮಹೇಶನ ಅಂಗಸಂಗ ಧಾರಾಳವಾಗಿ ದೊರೆಯ ತೊಡಗಿತು. ಹಿರಿಯರ ಮಧ್ಯಸ್ಥಿಕೆಯಿಂದ ನಿಂಗವ್ವ ಗಂಡನ ಮನೆಗೆ ಹೋಗಿ ನಾಲ್ಕಾರು ದಿನವಿದ್ದು ಆತನನ್ನು ಪುಸಲಾಯಿಸಿ ಆ ಊರಿನಲ್ಲಿ ದುಡಿಮೆ ಕಡಿಮೆಯೆಂದು ನೆಪವೊಡ್ಡಿ ಗಂಡನೊಂದಿಗೆಯೇ ತವರು ಮನೆಗೆ ಬಂದು ಭುಜಂಗಪ್ಪನ ಮನೆಯಲ್ಲಿ ವಾಸವಾಗಿರತೊಡಗಿದಳು. ಗಂಡ ಕೆಲಸಕ್ಕೆ ತೋಟ-ಪಟ್ಟಿಗೆ ಹೋದಾಗ ಮತ್ತೆ ಮಹೇಶನ ದರ್ಶನ ಲಾಭ ವಿಪುಲವಾಗಿ ಸಿಗತೊಡಗಿತು. ಆಕಸ್ಮಿಕವಾಗಿ ಇದರ ಸುಳಿವು ಗಂಡನಿಗೆ ಗೊತ್ತಾಗಿ ಆತ ಕೋಪಗೊಂಡು ಮಹೇಶನಿಂದ ದೂರವಾಗಿರಬೇಕೆಂತಲೂ ಇನ್ನೊಂದು ಸಲ ಅಂತಹದೇನಾದರೂ ನಡೆದರೆ ಪರಿಣಾಮ ಕೆಡಬಹುದೆಂದೂ ಹೆಂಡತಿಗೆ ಎಚ್ಚರ

ವಿತ್ತು. ನಿಂಗವ್ವ ಗುಟ್ಟಾಗಿ ಮಹೇಶನಿಗೆ ಸುದ್ದಿ ಮುಟ್ಟಿಸಿದಳು.

ಸರಿ. ಹೀಗೆ ಇರುತ್ತ, ನಿಂಗವ್ವ ಮತ್ತು ಆಕೆಯ ಗಂಡ ನಿತ್ಯದಂತೆ ಅಕ್ಟೋಬರ್ ೧೯ರ ರಾತ್ರಿಯೂ ಊಟಮಾಡಿ ಜೊತೆಯಾಗಿಯೇ ಮಲಗಿದರು. ಮಧ್ಯರಾತ್ರಿಯ ಸಂತರದಲ್ಲಿ ಒಮ್ಮೆಲೇ ಗಂಡ "ಅಪ್ಪಾ" ಎಂದು ಚೀರಿದಾಗ ನಿಂಗವ್ವ ಎಚ್ಚೆತ್ತಳು. ಚಿಕ್ಕ ಲ್ಯಾಂಪಿನ ಮಂದ ಬೆಳಕಿನಲ್ಲಿ ನೋಡನೋಡು ತ್ತಿದ್ದಂತೆಯೇ ದೈತ್ಯಾಕಾರದ ಇಬ್ಬರು ವ್ಯಕ್ತಿಗಳು ಮಸಕುಮಸಕಾಗಿ ನಿಂಗವ್ವನಿಗೆ ಕಂಡರು. ಓರ್ವನ ಕೈಯಲ್ಲಿ ಹರಿತವಾದ ಕೊಡಲಿ, ಇನ್ನೋರ್ವನ ಕೈಯಲ್ಲಿ ಟಾರ್ಚ್ ಇದೆ. ಲಕ್ಷ್ಯಗೊಟ್ಟು ನೋಡಿ ದರೆ ಟಾರ್ಚ್ ಹಿಡಿದವ ಇನ್ನಾರೂ ಅಲ್ಲದೆ ತನ್ನ ಪ್ರಿಯಕರ ಮಹೇಶ. ಕೊಡಲಿ ಹಿಡಿದವ ಮಹೇ ಶನ ಸ್ನೇಹಿತ ಮೇಲಗಿರಿ. ಎವೆ ತೆರೆದಿಕ್ಕುವಷ್ಟ ರಲ್ಲೇ ಮೇಲಗಿರಿ ಕೊಡಲಿಯಿಂದ ನಿಂಗವ್ವನ ಗಂಡನ ಕತ್ತಿಗೆ ಮತ್ತೆರಡು ಏಟು ಹಾಕಿದ. ರಕ್ತ ಚಿಲ್ಲೆಂದು ಮನೆಯ ಗೋಡೆಗೆ, ಹೊಸ್ತಿಲಕ್ಕೆ, ನಿಂಗವ್ವನ ಸೀರೆಗೂ ಸಿಡಿಯಿತು. ಆ ಕ್ಷಣವೇ ಪ್ರಾಣ ಹಾರಿ ಹೋದ ಶಂಕರಗೌಡನ ಶವವನ್ನು ಕೌದಿಯಲ್ಲಿ ಮಹೇಶ ಮತ್ತು ಮೇಲಗಿರಿಯರು ಸುತ್ತಿದರು. ಮಹೇಶನು ನಿಂಗವ್ವನಿಗೆ "ಯಾರಿಗಾದರೂ ಈ ವಿಷಯ ಬಾಯಿ ಬಿಟ್ಟೆಯೋ ನಿನಗೂ ಇದೇ ಗತಿ. ಬೇಗ ಶಗಣಿ ತಂದು ನೆಲ ಬಳಿ" ಅಂತ ಆಣತಿಯಿತ್ತು ಅವಳಿಂದ ರಕ್ತಸಿಂಚಿತ ನೆಲವನ್ನು ಬಳಿಸಿದ. ಶವ ವನ್ನು ಅವರಿಬ್ಬರೂ ಹೊತ್ತುಕೊಂಡು ಹೋಗಿ ಅಂಗಳದಲ್ಲಿ ಮಲಗಿಸಿ ಕಂಬಳಿ ಹೊದಿಸಿ, ನಿಂಗವ್ವನಿಗೆ ಇನ್ನೊಮ್ಮೆ ಎಚ್ಚರಿಕೆ ಕೊಟ್ಟು ಮನೆಗೆ ಹೊರಟು ಹೋದರು.

## ತುಮುಲ

ಮಹೇಶ, ಮೇಲಗಿರಿಯರು ಹೊರಟು ಹೋದ ಮೇಲೆ ನಿಂಗವ್ವ ಏಕಾಂತದಲ್ಲಿ ಭಯದಿಂದ ತತ್ತ ರಿಸಿಹೋದಳು. ಮಧ್ಯರಾತ್ರಿ ಕಳೆದು ಒಂದೆರಡು ಗಂಟೆಯಾಗಿರಬೇಕು. ಭುವಿಯನ್ನೇ ಆವರಿಸಿದ್ದ ಕರಾಳ ರಾತ್ರಿ ನಿಂಗವ್ವನ ಬದುಕಿನಲ್ಲಿಯೂ ಘೋರ ಅಂಧಕಾರವನ್ನು ಚೆಲ್ಲಿಬಿಟ್ಟಿದೆ. ಆಕೆ ಮೂಕಿಯಾಗಿ ಬಿಟ್ಟಳೋ ಎಂಬ ಭಯ ಅವಳನ್ನೇ ಆವರಿಸಿಕೊಂಡು ಬಿಟ್ಟಿದೆ. ಬಾಯಿ ಬಿಟ್ಟರೆ ಅವಳನ್ನೂ ಕಡಿದು ಹಾಕುವುದಾಗಿ ಪ್ರಿಯತಮ ಹೇಳಿ ಹೋಗಿದ್ದಾನೆ. ಇದೇ ತುಮುಲದಲ್ಲಿ ಬೆಳಗಾಯಿತು. ಮುಂದೆ ಪಟೇಲರು ಧೈರ್ಯ ಕೊಟ್ಟಾಗ ನಡೆದುದ್ದೆಲ್ಲ ಹೀಗೆ ಅಂತ ನಿಂಗವ್ವ ತನ್ನ ಫಿರ್ಯಾದಿಯಲ್ಲಿ ವಿವರಿಸಿದ್ದಳು.

## ತಿರುವು

ಇದನ್ನೆಲ್ಲ ಕೇಳಿ ನನ್ನ ಸ್ನೇಹಿತರು ನಿಂಗವ್ವನ ಕುರಿತು ಸಾಂತ್ವನದ ನಾಲ್ಕು ಮಾತುಗಳನ್ನು ಮೌನವ ಸಹಜವಾಗಿ ಹೇಳಿ ಹೊರಟುಹೋದರು. ಕೋರ್ಟಿನ ಸಮಯವಾದ್ದರಿಂದ ನಾನೂ ಹೊರಟು ಬಿಟ್ಟೆ. ಅಂದೇ ಸೌದತ್ತಿಯ ಪೋಲೀಸ್ ಇನ್ ಸ್ಪೆಕ್ಟರ್‌ರು ಆ ಹಳ್ಳಿಗೆ ಹೋಗಿ ಮಹೇಶ ಮತ್ತು ಮೇಲಗಿರಿಯನ್ನು ದಸ್ತಗಿರಿ ಮಾಡಿ ಮರುದಿನವೇ ಅವರನ್ನು ನನ್ನ ಕೋರ್ಟಿನಲ್ಲಿ ಹಾಜರಪಡಿಸಿದರು. ಒಂದು ಕ್ಷಣ ನಾನು ಆಪಾದಿತರಿಬ್ಬರನ್ನೂ ದುರು ಗುಟ್ಟಿ ನೋಡಿದೆ. ಮಹೇಶ, ನನ್ನನ್ನು ನೋಡಿ ಸ್ವಲ್ಪ ಮುಗ್ಧ ನಗೆ ನಕ್ಕನಾದರೂ ಆಪಾದಿತರಿಬ್ಬರೂ ಪೋಲೀಸರ ಸೆರೆಯಲ್ಲಿ ಸಿಕ್ಕಿ ಹಾಕಿಕೊಂಡು ನಿರ್ವೀ ರ್ಯರಾಗಿದ್ದಂತೆ ಕಂಡುಬಂತು. ಮಹೇಶ ಸುಮಾರು ೨೨ ವಯಸ್ಸಿನ ಸುಂದರ ಆಜಾನುಬಾಹು ಯುವಕ. ಆತನ ಸ್ನೇಹಿತ ಮೇಲಗಿರಿ ಅಷ್ಟು ಸ್ಫುರದ್ರೂಪನಲ್ಲದ, ಅದೇ ವಯೋಮಾನದ ತೆಳುವಾದ ಆಳು. ಮಹೇಶ ಬಹುಶಃ ತನ್ನ ಮತ್ತು ತನ್ನ ಪ್ರಿಯತಮೆಯ ಮಧ್ಯೆ ಶಾಶ್ವತವಾಗಿ ಅಡ್ಡಬಂದಿದ್ದ ಪ್ರಿಯತಮೆಯ ಗಂಡನ ಬಗ್ಗೆ ಕ್ರುದ್ಧನಾಗಿ ಆ ಅಡೆತಡೆಯನ್ನು ಪೂರ್ತಿಯಾಗಿ ಕಿತ್ತೊಗೆಯಲು ನಿಂಗವ್ವನ ಗಂಡನ ಕೊಲೆಮಾಡಿರಬೇಕೆಂದು ನಾನು ಸಹಜವಾಗಿ ಭಾವಿ ಸಿದೆ. ಅವರಿಬ್ಬರನ್ನೂ ಜೇಲಿಗೆ ಅಟ್ಟಿ, ಪೋಲೀ ಸರಿಗೆ ಮುಂದಿನ ತನಿಖೆಗೆ ಅನುವು ಮಾಡಿಕೊಟ್ಟೆ.

ಪೋಲೀಸರು ತನಿಖೆ ಮುಂದುವರಿಸಿದಾಗ ನಿಂಗವ್ವನ ಅತ್ತೆಯನ್ನು (ಶಂಕರಗೌಡನ ತಾಯಿ) ಕರೆಸಿಕೊಂಡು ಅವಳನ್ನು ವಿಚಾರಿಸಿದಾಗ ಇನ್ನೊಂದು ವಿಷಯ ಹೊರಬಿದ್ದು ಈ ಕೊಲೆಯ ಮೊಕದ್ದಮೆ ಯನ್ನು ಅನಾಮತ್ತಾಗಿ ಒಂದು ದಿಕ್ಕಿನಿಂದ ಇನ್ನೊಂದು ದಿಕ್ಕಿಗೆ ಎಸೆಯಿತು. ಶಂಕರಗೌಡನ ತಾಯಿ ಎಲ್ಲವ್ವ ಪೋಲೀಸರಿಗೆ ಹೇಳಿದ್ದು ಇಷ್ಟು:

ಸುಮಾರು ೧೫ ದಿನಗಳ ಹಿಂದೆ ತನ್ನೂರಿ

ನಿಂದ ಮಗ–ಸೊಸೆಯರ ಊರಿಗೆ ಬರುತ್ತಿದ್ದಳು. ಈ ಊರ ಅಗಸೆಯಲ್ಲಿ ಬರುವಾಗ್ಗೆ ಸಂಜೆಯು ಮಬ್ಬುಗತ್ತಲು ಆವರಿಸತೊಡಗಿತ್ತು. ಅಗಸೆಯಲ್ಲಿ ಬಡ ಜನರಿಗಾಗಿ ಸರ್ಕಾರ ಕಟ್ಟುತ್ತಿದ್ದ ಜನತಾ ಮನೆಗಳ ಅರೆಬರೆ ಕಟ್ಟಡಗಳ ನಿವೇಶನದ ಒಂದು ಗೋಡೆ ಬದಿಗೆ, ಒಂದು ಹೆಣ್ಣು–ಗಂಡು ಜೋಡಿ ತಳಿಕೆ ಹಾಕಿಕೊಂಡು ಅಸಹ್ಯವಾಗಿ ಬಿದ್ದಿದ್ದಿತು. ಯಾರು ಇರಬೇಕೆಂದು ಮುದುಕಿ ಸೋಜಿಗದಿಂದ ನೋಡುವಾಗ ಆ ಜೋಡಿ ತಳಿಕೆ ಬಿಟ್ಟು ಎದ್ದಿತು. ಕಣ್ಣು ನಿಚ್ಚಳ ಮಾಡಿಕೊಂಡು ನೋಡಿದರೆ, ಆ ಹೆಣ್ಣು ಖಾಸ ತನ್ನ ಸೊಸೆ ಎಂದು ತಿಳಿದು ಮುದುಕಿ ಹೌಹಾರಿಬಿಟ್ಟಿತು. ಗಂಡು ಯಾರೆಂದು ನೋಡು ವಲ್ಲಿ ಆತ ಆ ಊರಿನ ಪೋಲಿ ಮತ್ತು ಅಲೆ ಮಾರಿ ರಹಿಮಾನನೆಂದು ಕಂಡುಬಂತು. ಮುದು ಕಿಗೆ ಭಾರಿ ಆಘಾತವಾಯಿತು. ಮನೆಗೆ ಹೋಗಿ ಸೊಸೆಗೆ ಛೀಮಾರಿ ಹಾಕಿ ಮಗನಿಗೆ ಸೂಕ್ಷ್ಮದಲ್ಲಿ ವಿಷಯ ತಿಳಿಸಿ, ತನ್ನ ಮಗನಿಗೆ ಎರಡನೆಯ ಮದುವೆ ಮಾಡಿದರೆ ಹೇಗೆ ಎಂಬ ವಿಚಾರದಲ್ಲಿ ಮಗ್ನಳಾಗಿ, ಸಮಾಜದ ಕಟ್ಟಳೆ, ಕಾನೂನಿನ ಅಡೆತಡೆ, ಎಲ್ಲಕ್ಕೂ ಮಿಗಿಲಾಗಿ ಬಡತನದ ಭೂತ ಅಡ್ಡ ಬಂದಂತೆ ಮುದುಕಿಗೆ ತೋರಿತು. ನಾಲ್ಕೈದು ದಿನ ಬಿಟ್ಟು ಕೊಂಡು ಮುದುಕಿ ತನ್ನ ಊರಿಗೆ ನಡೆದುಬಿಟ್ಟಳು.

ಪೋಲೀಸ್ ಇನ್‌ಸ್ಪೆಕ್ಟರ್ ಶ್ರೀ ಬಿರಾದಾರ, ನಿಂಗವ್ವನಿಗೆ ಇನ್ನೊಬ್ಬ ಪ್ರಿಯತಮನಿದ್ದಾನೆಂದು ತಿಳಿದು ದಿಗಿಲುಗೊಂಡರು. ಮೇಲಾಗಿ ಆತ ಓರ್ವ ಪೋಲಿ ಹುಡುಗನೆಂದು ತಿಳಿದ ಮೇಲಂತೂ ಅವರು ಗೊಂದಲಕ್ಕೊಳಗಾದರು. ಸರಿ ನಿಂಗವ್ವನನ್ನು ಕಂಡು ಮೆತ್ತಗೆ ರಹಿಮಾನನ ಸುದ್ದಿ ತೆಗೆದಾಗ ಅವಳು ಬೆಚ್ಚಿದಳು. ತಾಸುಗಟ್ಟಲೆ ನಿಂಗವ್ವನಿಗೆ ಪ್ರಶ್ನೆ ಗಳ ಸುರಿಮಳೆಯನ್ನು ಹಾಕಿದಾಗ ಅವಳು ತೀರ ಇತ್ತೀಚೆಗೆ ಮಹೇಶ ಪಕೋೕ ತನ್ನನ್ನು ನಿರ್ಲಕ್ಷಿಸು ತ್ತಿದ್ದುದ್ದಾಗಿಯೂ ಹೇಗೋ ತನಗೂ ರಹಿಮಾನ ನಿಗೂ ದೋಸ್ತಿಯಾಗಿದ್ದುದು ನಿಜವೆಂತಲೂ ಒಪ್ಪಿ ಕೊಂಡಳು. ಆದರೆ ಈ ಕೊಲೆಯಲ್ಲಿ ಮಾತ್ರ ರಹಿಮಾನನ ಕೈವಾಡವೇನೂ ಇಲ್ಲವೆಂದು ಹೇಳಿ ದಳು. ಸಂದಿಗ್ಧಕ್ಕೊಳಗಾದ ಪೋಲೀಸ್ ಇನ್–ಸ್ಪೆಕ್ಟರ್‌ರು, ಮಹೇಶನಿಗೆ ನಿಜಕ್ಕೂ ನಿಂಗವ್ವನ ಮೇಲೆ ತಾತ್ಸಾರ ಭಾವನೆ ಮೂಡಿದ್ದಾದರೆ ಆತನು ಆಕೆಯ ಗಂಡನ ಕೊಲೆಯನ್ನು ಹೇಗೆ ಮಾಡಿಯಾನು ಎಂಬ ಸಂಶಯ ಅವರನ್ನು ಕಾಡತೊಡಗಿತು. ಏನಿದ್ದರೂ ಇನ್‌ಸ್ಪೆಕ್ಟರ್ ಮಾಡಿದ ಒಂದು ಜಾಣತನವೆಂದರೆ, ತಕ್ಷಣ ನಿಂಗವ್ವನನ್ನು ಬಂಧಿಸಿ ರಹಿಮಾನನ ಬೇಟೆಗೆ ಹೊರಟರು. ಆತನು ಮೊದಲೇ ಅಲೆಮಾರಿ. ಇತ್ತ ಆತನನ್ನು ಪತ್ತೆ ಹಚ್ಚಲು ಪೋಲೀಸ್ ಸಿಬ್ಬಂದಿಯನ್ನು ಬಿಟ್ಟು, ನಿಂಗವ್ವನನ್ನು ಕೋರ್ಟಿ ನೆದುರು ಹಾಜರುಪಡಿಸಿ ನಾಲ್ಕು ದಿನಗಳ ಪೋಲೀಸ್ ಕಸ್ಟಡಿ ಬೇಕೆಂದು ಮನವಿ ಮಾಡಿ ಕೊಂಡರು.

ಕೋರ್ಟಿನಲ್ಲಿ ನಿಂಗವ್ವನನ್ನು ಮೊಟ್ಟ ಮೊದಲ ಬಾರಿಗೆ ನೋಡಿದ ನಾನು ಒಂದು ಕ್ಷಣ ದಿಗ್ಭ್ರಾಂತ ನಾದೆ. ಸುಮಾರು ಐದೂವರೆ ಅಡಿ ಎತ್ತರದ ನಿಲುವಿನ, ೨೨ ವಯಸ್ಸಿನ ಚೆಲುವಿನ ಹೆಣ್ಣು ಆಕೆ. ಅವಳ ಅಂಗಸೌಷ್ಠವವನ್ನು ಬಿಗಿದು ಹಿಡಿದ ನಿರಾಡಂಬರ ಬಟ್ಟೆಯಲ್ಲಿಯೂ ಅವಳ ಅಂಗಾಂಗ ವೆಲ್ಲಾ ಇಡೀ ಪುರುಷತ್ವಕ್ಕೆ ಸವಾಲು ಹಾಕುವಂತೆ ಕಂಡಿತು. ಸೊಗಸುಗಾತಿಯಾದ ಈ ಹೆಣ್ಣಿಗಾಗಿ ಒಂದು ಕೊಲೆಯಾದದ್ದರಲ್ಲಿ ನನಗೇನೂ ಅಚ್ಚರಿ ಯೆನಿಸಲಿಲ್ಲ. ಆಕೆಯನ್ನು ನಾಲ್ಕು ದಿನ ಪೋಲೀಸ್ ಕಸ್ಟಡಿಗೆ ಕೊಟ್ಟಿದ್ದೂ ಆಯಿತು.

## ಅವರಲ್ಲ....

ಐದನೆಯ ದಿನ ಅಂದರೆ ೨೫–೧೦–೭೬ರಂದು ಪೋಲೀಸರು ರಹಿಮಾನನನ್ನು ರಾಮದುರ್ಗ ಬಳಿ ತೊರಗಲ್ಲ ಗುಡ್ಡಗಾಡಿನಲ್ಲಿ ಅವಿತುಕೊಂಡ ತಾಣ ದಲ್ಲಿ ಸೆರೆಹಿಡಿದರು. ಪೋಲೀಸರ ವಿಚಾರಣೆಯಲ್ಲಿ ರಹಿಮಾನನು ಈ ಕೊಲೆಗೆ ಸಂಬಂಧಿಸಿದ ಯಾವುದೇ ಸುಳಿವನ್ನೂ ಕೊಡಲಿಲ್ಲ. ಪೋಲೀಸ್ ಕಸ್ಟಡಿ ಯಲ್ಲಿದ್ದ ಆತನ ಪ್ರೇಯಸಿಯನ್ನು ರಹಿಮಾನ ನಿಗೆ ತೋರಿಸಿ ಪೋಲೀಸ್ ಇನ್‌ಸ್ಪೆಕ್ಟರರು ಪ್ರಶ್ನೆ ಗಳ ಸುರಿಮಳೆಗರೆದರು. ಕಟ್ಟಕಡೆಗೆ ರಹಿಮಾನ ತನ್ನ ಮನಸ್ಸಿನ ಸ್ಥೈರ್ಯ ಕಳೆದುಕೊಳ್ಳಬಹು ದೆಂಬ ಆಶೆ ಪೋಲೀಸರಿಗೆ ಕಂಡುಬಂತು. "ನಿಂಗವ್ವ ಎಲ್ಲವನ್ನೂ ಹೇಳಿದ್ದಾಳೆ; ನೀನು ಏನೂ ಹೇಳದಿದ್ದರೆ ನಿನ್ನ ಗತಿ ನೆಟ್ಟಗಾಗುವುದಿಲ್ಲ" ಎಂದಾಗ ಆತ, "ನಾನೇನೂ ಮಾಡಿಲ್ಲ, ಶಂಕರಗೌಡನ ಕೊಲೆ

ಯಾದ ನಂತರ ಆತನ ಶವವನ್ನು ನಿಂಗವ್ವನ ಇಚ್ಛೆಯಂತೆ ಮನೆಯ ಹೊರಗೆ ತಂದು ಮಲಗಿಸಿದೆ"ನೆಂದು ಪೋಲೀಸರಿಗೆ ಹೇಳಿದನಂತೆ. ಸರಿ ಈಗ ನಿಂಗವ್ವನ ಸರತಿ. ಅವಳು ಸಹ ಕೊನೆಗೆ ಈ ಕೊಲೆಯನ್ನು ಮಹೇಶ, ಮೇಲಗಿರಿಯರು ಮಾಡಿಲ್ಲ, ತನ್ನ ಸಹಾಯದಿಂದ ರಹಿಮಾನನೇ ಮಾಡಿದ್ದಾನೆಂದು ಇನ್ನೊಂದು ಹೇಳಿಕೆ ನೀಡಿದಳು. ಪೋಲೀಸರು ತಕ್ಷಣ ನಿಂಗವ್ವ ಮತ್ತು ರಹಿಮಾನರನ್ನು ಕೋರ್ಟಿಗೆ ಹಾಜರ ಪಡಿಸಿ ಅವರಿಬ್ಬರನ್ನೂ ನ್ಯಾಯಾಂಗ ಕಸ್ಟಡಿಯಲ್ಲಿಟ್ಟುಕೊಳ್ಳಬೇಕೆಂದೂ ಮತ್ತು ಕೋರ್ಟಿನವರು ನಿಂಗವ್ವನ ತಪ್ಪೊಪ್ಪಿಗೆ ಹೇಳಿಕೆಯನ್ನು ಬರೆದುಕೊಳ್ಳಬೇಕೆಂದೂ ಪೋಲೀಸ್ ಇನ್‌ಸ್ಪೆಕ್ಟರ್‌ರು ಮನವಿಮಾಡಿಕೊಂಡರು. ನಾನು ಪೋಲೀಸ್ ಅಧಿಕಾರಿಗಳನ್ನೆಲ್ಲಾ ಕೋರ್ಟ್ ಹಾಲಿನಿಂದ ಹೊರಕಳಿಸಿ ನಿಂಗವ್ವನನ್ನು ಪ್ರಶ್ನಿಸಿ, ಆಕೆ ಸ್ವಸಂತೋಷದಿಂದ ತಪ್ಪೊಪ್ಪಿಗೆ ಹೇಳಿಕೆ ಕೊಡುವದಾದರೆ ಅವಳನ್ನು ಸೌದತ್ತಿಯ ಮ್ಯಾಜಿಸ್ಟ್ರೇಟರ ಸಮಕ್ಷಮಕ್ಕೆ ಕಳಿಸಿಕೊಡುತ್ತೇನೆಂದು ಹೇಳಿದೆ. ಅವಳು ನಿಜಕ್ಕೂ ತಪ್ಪೊಪ್ಪಿಗೆ ಹೇಳಿಕೆ ನೀಡುವಳೋ ಎಂಬುದನ್ನು ನಾನು ನಿಶ್ಚಿತಪಡಿಸಿಕೊಳ್ಳಬೇಕಾಗಿತ್ತು. ಕಿಂಚಿತ್ತೂ ಪಶ್ಚಾತ್ತಾಪವಿಲ್ಲದೆ, ಎಳ್ಳಷ್ಟೂ ಅಂಜದೆ, ಅಳುಕದೆ, ಅವಳು ತಾನು ತಪ್ಪೊಪ್ಪಿಗೆ ಹೇಳಿಕೆ ನೀಡುವುದು ಖಂಡಿತವೆಂದು ಹೇಳಿ, ತನ್ನ ಇಚ್ಛೆಯ ಮೇರೆಗೆ ತಾನು ರಹಿಮಾನನಿಂದ ಗಂಡನ ಕೊಲೆ ಮಾಡಿಸಿದ್ದು ನಿಜವೆಂದು ಸಾರಿದಳು. ನಾನು ತಬ್ಬಿಬ್ಬಾಗಿ ಕುಳಿತು ಬಿಟ್ಟೆ. ಮೊದಲು ಮಹೇಶ, ಮೇಲಗಿರಿ ತನ್ನ ಗಂಡನ ಕೊಲೆಮಾಡಿದರು, ಅದನ್ನು ತಾನು ಪ್ರತ್ಯಕ್ಷ ಕಂಡೆ ಎಂದು ಹೇಳಿದ್ದ ಈ ಭಾರೀ ಹೆಣ್ಣು ಈಗ ಖಂಡತುಂಡವಾಗಿ ತಾನೇ ಗಂಡನ ಕೊಲೆ ಮಾಡಿಸಿದ್ದಾಗಿ ಹೇಳುತ್ತಿದ್ದಾಳೆ. ಈ ಎರಡೂ ಹೇಳಿಕೆಗಳಲ್ಲಿ ಯಾವುದು ನಿಜವಿರಬಹುದೆಂದು ನಾನೂ ಒಂದು ಕ್ಷಣ ಗೊಂದಲಕ್ಕೊಳಗಾದೆ. ಅವಳ ತಪ್ಪೊಪ್ಪಿಗೆ ಹೇಳಿಕೆಯನ್ನು ಹೊಸ ದಂಡ ಪ್ರಕ್ರಿಯಾ ಸಂಹಿತೆಯ ೧೬೪ನೆಯ ಪ್ರಕರಣದಡಿ ಅಧಿಕಾರಯುಕ್ತ ಮ್ಯಾಜಿಸ್ಟ್ರೇಟನಾದ ನಾನೇ ಬರೆದುಕೊಳ್ಳಬಹುದಿತ್ತು. ಆದರೆ ಕೊಲೆ ಮೊಕದ್ದಮೆಯ ವಿಚಾರಣೆಯ ಪೂರ್ವದಲ್ಲಿ ನಾನೇ ಈ ಮೊಕದ್ದಮೆಯನ್ನು ಸೆಶನ್ಸ್ ಕೋರ್ಟಿಗೆ ಕಮಿಟ್ (Commit) ಮಾಡಬೇಕಾಗಿದ್ದರಿಂದ ಮತ್ತು ನಮ್ಮ ಹೈಕೋರ್ಟಿನ ಕ್ರಿಮಿನಲ್ ರೂಲ್ಸ್ ಆಫ್ ಪ್ರಾಕ್ಟೀಸ್ ನಿಯಮಾವಳಿಯ ಪ್ರಕಾರ ಅಧಿಕಾರಸ್ಥ ಮ್ಯಾಜಿಸ್ಟ್ರೇಟರ ಬದಲು ಇನ್ನೊಬ್ಬ ಮ್ಯಾಜಿಸ್ಟ್ರೇಟರು ತಪ್ಪೊಪ್ಪಿಗೆ ಹೇಳಿಕೆ ಬರೆದುಕೊಳ್ಳುವುದು ಸೂಕ್ತವೂ ಸಮಂಜಸವೂ ಎಂದು ಹೇಳಿದ್ದಕ್ಕೆ ನಾನು ನಿಂಗವ್ವನನ್ನು ಸೌದತ್ತಿಯ ಕೋರ್ಟಿಗೆ ಕಳಿಸಿಕೊಡಲು ಆಜ್ಞೆಮಾಡಿದೆ.

## ತಪ್ಪೊಪ್ಪಿಗೆ

ದಿನಾಂಕ ೨೭-೧೦-೭೬ರಂದು ಮಧ್ಯಾಹ್ನ ಒಂದು ಗಂಟೆಗೆ ನಿಂಗವ್ವನನ್ನು ಸೌದತ್ತಿಯ ನ್ಯಾಯಾಧೀಶರ ಸಮ್ಮುಖದಲ್ಲಿ ಹಾಜರುಪಡಿಸಲಾಯಿತು. ನ್ಯಾಯಾಧೀಶರು ಅವಳನ್ನು ಪ್ರಶ್ನಿಸಿ ಸ್ವಸಂತೋಷದಿಂದಲೂ ಯಾರದೂ ಒತ್ತಾಯವಿಲ್ಲದೆಯೂ ತಪ್ಪೊಪ್ಪಿಗೆ ಹೇಳಿಕೆ ಕೊಡುವಳೊ ಎಂದು ಖಾತ್ರಿ ಮಾಡಿಕೊಂಡು ಮರುದಿನ ಅವಳನ್ನು ಮುಂಜಾನೆ ೧೦-೪೫ ಘಂಟೆಗೆ ಹಾಜರ ಪಡಿಸಬೇಕೆಂದು ಹೇಳಿ ಅವಳನ್ನು ಜೇಲಿಗೆ ಕಳಿಸಿಕೊಟ್ಟರು. ಮರುದಿನ ಮುಂಜಾನೆ ೧೦-೪೫ ಗಂಟೆಗೆ ನ್ಯಾಯಾಧೀಶರ ಕೋಣೆಯಲ್ಲಿ ನಿಂಗವ್ವ ನೀಡಿದ ತಪ್ಪೊಪ್ಪಿಗೆ ಹೇಳಿಕೆಯ ಸಾರಾಂಶವಿಷ್ಟು:

"ನನ್ನ ತಂದೆ-ತಾಯಿಯರು ನನ್ನ ಮನಸ್ಸಿನ ವಿರುದ್ಧ ಶಂಕರಗೌಡನಿಗೆ ಮದುವೆ ಮಾಡಿಕೊಟ್ಟರು. ನನ್ನ ಗಂಡ ಚೆನ್ನಾಗಿಯೇ ಇಟ್ಟುಕೊಂಡಿದ್ದ. ಏಕೋ ನನ್ನ ಮನಸ್ಸಿಗೆ ಆತ ಎಂದೂ ಹಿಡಿಸಲಿಲ್ಲ. ಮದುವೆಗೆ ಮುಂಚಿತವಾಗಿ ನನ್ನ ಹೆಣ್ಣುತನದ ಸರ್ವಸ್ವವನ್ನೂ ಮಹೇಶನಿಗೆ ಒಪ್ಪಿಸಿದ್ದೆ. ಆದರೆ ಆತ ನನ್ನ ಮದುವೆಯ ನಂತರ ಅಷ್ಟೊಂದು ಆಸೆಯನ್ನು ನನ್ನಲ್ಲಿ ಇಟ್ಟುಕೊಳ್ಳಲಿಲ್ಲ. ನಂತರದಲ್ಲಿ ರಹಿಮಾನನ ಸ್ನೇಹ ಮಾಡಿಕೊಂಡೆ. ಆತನೊಂದಿಗೂ ಹೊಲ ಗದ್ದೆಗಳಲ್ಲಿ ಏಕಾಂತದಲ್ಲಿ ಸಂಧಿಸುತ್ತಿದ್ದೆ. ಈ ತೆರನ ನನ್ನ ಜೀವನದಲ್ಲಿ ಗಂಡ ಎಂದಿಗೂ ಅಡಚಣೆಯೆಂದು ರಹಿಮಾನನಿಗೆ ಹೇಳಿದಾಗ ಆತ ನನ್ನ ಗಂಡನನ್ನು 'ತೆಗೆದು' ಹಾಕುತ್ತೇನೆ ಎಂಬ ಭರವಸೆಯನ್ನು ಕೊಟ್ಟ. ಒಂದು ದಿನ ರಹಿಮಾನನಿಗೆ, 'ಗಂಡನನ್ನು ಚರಗ ಚೆಲ್ಲಲು ಮರುದಿನ ಹೊಲಕ್ಕೆ

ಕರೆದು ತರುತ್ತೇನೆ. ನಾವಿಬ್ಬರೇ ಇರುತ್ತೇವೆ. ನೀನು ಬಂದು ಅವನನ್ನು ಮುಗಿಸು' ಎಂದು ಹೇಳಿದೆ. ಅಂದು ರಹಿಮಾನ ಪಕೋೕ ಬರಲಿಲ್ಲ. ಇನ್ನೊಂದು ಸಲ ಕೂಡಿದಾಗ ರಹಿಮಾನ ನನಗೆ, 'ಒಂದು ಕೊಡ್ಲಿ ತಂದು ಇಡು, ನಾಳೆ ರಾತ್ರಿ ಬಂದು ಎಲ್ಲಾ ಮುಗಿಸುತ್ತೇನೆ' ಅಂತಾ ಹೇಳಿದ. ಆ ಪ್ರಕಾರ ನಾನು ಕಟ್ಟಿಗೆ ಒಡೆಯಲು ಬೇಕೆಂದು ನೆಪಮಾಡಿ ನನ್ನ ಚಿಕ್ಕಮ್ಮನ ಮನೆಯಿಂದ ಕೊಡ್ಲಿ ತಂದು ಇಟ್ಟದ್ದೆ. ದಿನಾಂಕ ೧೯ರ ರಾತ್ರಿ ರಹಿಮಾನ ಬರಲೆಂದು ಬಾಗಿಲಿಗೆ ಅಗಳಿ ಹಾಕದೆ ಬಾಗಿಲು ಮುಚ್ಚಿ ಗಂಡನ ಜೊತೆ ಮಲಗಿದೆ. ಮಧ್ಯರಾತ್ರಿ ಸರಿದು ಹೋಗುವಾಗ, ರಹಿಮಾನ ಮೆಲ್ಲನೆ ಬಾಗಿಲು ತಳ್ಳಿ ಒಳಗೆ ಜಾರಿ ಬಂದ. ನನ್ನನ್ನು ಎಬ್ಬಿಸಿ ಕೊಡ್ಲಿ ಎಲ್ಲಿದೆ ತಾ ಎಂದ. ಮೂಲೆಯಲ್ಲಿಂದ ತೆಗೆದುಕೊಟ್ಟೆ. ದೀಪ ಮಂದವಾಗಿ ಉರಿಯುತ್ತಿತ್ತು. ರಹಿಮಾನನು ತಾನುಟ್ಟ ಧೋತರವನ್ನು ಏರಿಸಿ ಕಟ್ಟಿಕೊಂಡು ಕೊಡ್ಲಿ ತೆಗೆದುಕೊಂಡವನೇ ಗಾಢ ನಿದ್ದೆಯಲ್ಲಿ ಮಲಗಿದ್ದ ನನ್ನ ಗಂಡನ ಗುತ್ತಿಗೆಗೆ ಒಂದು ಏಟು ಹಾಕಿದ. ನನ್ನ ಗಂಡ 'ಯಪ್ಪಾ' ಅಂತಾ ಕೂಗಿಕೊಳ್ಳುವಷ್ಟರಲ್ಲಿ ರಹಿಮಾನ ಮೈಮೇಲೆ ಬಂದವರಂತೆ ಇನ್ನೂ ಎರಡು ಮೂರು ಏಟನ್ನು ಕೊಡ್ಲಿಯಿಂದ ನನ್ನ ಗಂಡನ ಕುತ್ತಿಗೆಗೆ ಹಾಕಿದ. ರಕ್ತ ಚಿಲ್ಲೆಂದು ಸುತ್ತಲೂ ಪುಟಿಯಿತು. ಕುತ್ತಿಗೆಯಿಂದ ನನ್ನ ಗಂಡ ಆ ರಾತ್ರಿ ತಡವಾಗಿ ಊಟ ಮಾಡಿದ ಅನ್ನ ಸಹ ಹೊರ ಬಂತು. ನಾನು ತಕ್ಷಣ ದನದ ಸಗಣಿಯಿಂದ ನೆಲ ಸಾರಿಸಿದೆ. ರಹಿಮಾನ ಮತ್ತು ನಾನು ಸೇರಿ ಶವವನ್ನು ಕೌದಿಯಲ್ಲಿ ಸುತ್ತಿ ಅಂಗಳಕ್ಕೆ ತಂದು ಮಲಗಿಸಿ, ಆತ ಮಲಗಿರುವವನೋ ಎಂಬಂತೆ ಸಹಜವಾಗಿರಿಸಿ ಕಂಬಳಿಯನ್ನು ಮುಚ್ಚಿದೆವು. ಕೊಲೆ ಅಪವಾದ ನಮ್ಮಿಬ್ಬರ ಮೇಲೆ ಬರದಿರಲೆಂದು ರಹಿಮಾನನ ಯುಕ್ತಿಯ ಮೇರೆಗೆ ಮಹೇಶ, ಮೇಲಗಿರಿಯರು ಕೊಲೆ ಮಾಡಿದರೆಂದು ಮರುದಿನ ಮುಂಜಾನೆ ಎಲ್ಲರಿಗೂ ಸುಳ್ಳು ಹೇಳಿದೆ."

## ಒಂದೇ ಕಡೆ

ಇದಿಷ್ಟು ಹೇಳಿಕೆಯನ್ನು ಪಡೆದುಕೊಂಡ ನಂತರ ನಿಂಗವ್ವನನ್ನು ಸೌಪತ್ತಿಯ ನ್ಯಾಯಾಧೀಶರು ಮತ್ತೆ ನನ್ನ ಕೋರ್ಟಿಗೆ ರವಾನಿಸಿದರು. ಈಗ ಒಂದೇ ಜೇಲಿನಲ್ಲಿ ಮೊದಲಿನ ಆಪಾದಿತರಾದ ಮಹೇಶ, ಮೇಲಗಿರಿ, ಮತ್ತು ಈಗ ಸಿಕ್ಕಿ ಹಾಕಿಕೊಂಡ ನಿಂಗವ್ವ ಮತ್ತು ರಹಿಮಾನರು ಬಂಧನಕ್ಕೊಳಗಾಗಿ ಇರತೊಡಗಿದ್ದು ಒಂದು ಕೌತುಕವೇ ಸರಿ. ಇಷ್ಟರಲ್ಲಿ ೨೬ ರಂದು ಪೋಲೀಸ್ ತನಿಖಾಧಿಕಾರಿಯು ನನ್ನ ಕೋರ್ಟಿಗೆ ಒಂದು ಮನವಿ ನೀಡಿ ಮಹೇಶ ಮತ್ತು ಮೇಲಗಿರಿಯರ ಮೇಲೆ ಯಾವುದೇ ಸಾಕ್ಷ್ಯ-ಪುರಾವೆಗಳಿಲ್ಲ ಮತ್ತು ಅವರಿಗೆ ಈ ಕೊಲೆಯಲ್ಲಿ ಯಾವುದೇ ಸಂಬಂಧವಿಲ್ಲವೆಂದು ಹೇಳಿ ಅವರನ್ನು ಖುಲಾಸೆ ಮಾಡಬೇಕೆಂದು ಕೇಳಿಕೊಂಡರು. ದಂಡ ಪ್ರಕ್ರಿಯಾ ಸಂಹಿತೆಯ ೧೬೯ನೇ ಪ್ರಕರಣದ ಮೇರೆಗೆ ಮಹೇಶ, ಮೇಲಗಿರಿಯರನ್ನು ತನಿಖಾಧಿಕಾರಿಯ ಇಚ್ಛೆಯ ಮೇರೆಗೆ ಖುಲಾಸೆ ಮಾಡಿದೆ. ಖುಲಾಸೆಮಾಡುವ ಮೊದಲು ಸುಮಾರು ೧೫ ದಿನಗಳ ಮೇಲ್ಪಟ್ಟು ಜೇಲಿನಲ್ಲಿದ್ದ ಮಹೇಶ, ಮೇಲಗಿರಿಯರನ್ನು ಕೂಲಂಕಷವಾಗಿ ಪರೀಕ್ಷಿಸಿದೆ. ಅವರ ಮುಖದ ಮೇಲೆ ಅಥವಾ ಅವರ ಆರೋಗ್ಯದ ಮೇಲೆ ಜೇಲುವಾಸ ಯಾವುದೇ ಅಹಿತಕರ ಪರಿಣಾಮ ಮಾಡಿರುವಂತೆ ಕಂಡುಬರಲಿಲ್ಲ. ಮಹೇಶನು, ಆತನನ್ನು ಪೋಲೀಸರು ಬಂಧಿಸಿದಂದಿನಿಂದ ಬಿಡುಗಡೆಯಾಗುವ ತನಕ ಯಾವಾಗಲೂ ಮಂದಹಾಸ ಬೀರುವ ಹುಡುಗನಾಗಿದ್ದ. ಕೊಲೆಪಾತಕಿಗಳು ಕೋರ್ಟಿನೆದುರಿಗೆ ಬಂದಾಗ ಮಂದಹಾಸ ಬೀರಿದ್ದನ್ನು ನಾನೆಂದೂ ಕಂಡಿಲ್ಲ. ಅಪರಾಧಿಗಳು ಹಾಗೆ ನಗುಮುಖ ಮಾಡಿಕೊಂಡಿರುವುದು ತೀರ ಅಸಹಜವೂ ಹೌದು. ಮೊದಲಿನಿಂದ ನನಗೆ ಅವರಿಬ್ಬರೂ ಯುವಕರು ನಿರಪರಾಧಿಗಳಾಗಿರಬಹುದೆ ಎಂಬ ಸಂಶಯವೂ ಇತ್ತು. ನನ್ನ ಅನುಭವದಲ್ಲಿ ಸಾಮಾನ್ಯವಾಗಿ ಕೊಲೆಪಾತಕಿಗಳು ಜೇಲಿಗೆ ಹೋದ ಏಳೆಂಟು ದಿನಗಳಲ್ಲಿಯೇ ಹಳದಿ ವರ್ಣಕ್ಕೆ ತಿರುಗಿ ಪೂರ್ತಿ ನಿಸ್ತೇಜರಾಗಿ ಕಾಣುತ್ತಾರೆ. ಈಗ ರಹಿಮಾನ ಮತ್ತು ನಿಂಗವ್ವ ತಮ್ಮ ಬಣ್ಣ ಬದಲಾಯಿಸಿದ್ದರು. ರಹಿಮಾನ ಸಹ ಒಳ್ಳೇ ಕುಸ್ತಿಪಟುವಿನಂತೆ ಸದೃಢ ಯುವಕನಾಗಿದ್ದ. ನಿಂಗವ್ವನ ಗಂಡ ಸಹ ಪೈಲ್ವಾನನಂತೆ ಕಟ್ಟುಮಸ್ತಾದ ಆಳಾಗಿದ್ದನೆಂದು ಆತನ ಶವ

ನೋಡಿದ್ದ ಪೋಲೀಸ್ ಅಧಿಕಾರಿ ನನಗೆ ಹೇಳಿದ್ದರು. ಅಂತೂ ನಿಂಗವ್ವನ ಮೆಚ್ಚಿಗೆ ಯಾವಾಗಲೂ ಕುಸ್ತಿ ಪಟುಗಳಂತಿದ್ದ ಯುವಕರ ಮೇಲೇ ಇತ್ತೆಂಬುದನ್ನು ಇಲ್ಲಿ ಗಮನಿಸಬಹುದು.

ಪೋಲೀಸರು ಚಾರ್ಜ್‌ಶೀಟ್ ಕೊಡುವ ಮೊದಲು ನಾನು ನಿಂಗವ್ವನನ್ನು ಅವಳ ತಪ್ಪೊಪ್ಪಿಗೆ ಹೇಳಿಕೆ ಮತ್ತು ಮಹೇಶ, ಮೇಲಗಿರಿಯರ ಮೇಲೆ ಮೊದಲು ಕೊಟ್ಟ ಫಿರ್ಯಾದಿಯ ಬಗ್ಗೆ ಕೇಳಿದಾಗ ಆಕೆ ಸೌದತ್ತಿಯ ನ್ಯಾಯಾಧೀಶರ ಮುಂದೆ ಹೇಳಿದ ಸಂಗತಿಯೇ ನಿಜವೆಂದು ಹೇಳಿದಳು. ರಹಿಮಾನನ್ನು ಕೇಳಿದಾಗ ಆತ ತಾನು ನಿರ್ದೋಷಿಯೆಂದೂ, ನಿಂಗವ್ವನೇ ಗಂಡನನ್ನು ಕೊಡ್ಲಿಯಿಂದ ಕಡಿದ ನಂತರ ತಾನು ಒಂದು ಚಕ್ಕಡಿ ಬಂಡಿಯಲ್ಲಿ ಮಲಗಿದ ಜಾಗೆಗೆ ಬಂದು ಅವಳು ತನ್ನ ಮನೆಗೆ ಕರೆದುಕೊಂಡು ಹೋಗಿ ಹೆಣ ಹೊರಸಾಗಿಸಲು ಕೇಳಿಕೊಂಡಿದ್ದರಿಂದ ಅವಳ ಸಹಾಯದಿಂದ ಹೆಣ ಹೊರಗೆ ಮಲಗಿಸಿದ್ದು ಮಾತ್ರ ನಿಜವೆಂದು ಗೊಣಗಿದ. ಮಗದೊಮ್ಮೆ ಪೋಲೀಸರ ಅಂಜಿಕೆಯಿಂದ ಹಾಗೆ ಹೇಳಿದೆನೆಂದೂ ಹೇಳಿದ. ಕ್ಷಣ ಕ್ಷಣಕ್ಕೆ ತನ್ನ ನಿಲುವನ್ನು ಬದಲಿಸುತ್ತಿದ್ದ ಆತ ನ್ಯಾಯಾಧೀಶರ ಸಮ್ಮುಖದಲ್ಲಿ ತಪ್ಪೊಪ್ಪಿಗೆ ಹೇಳಿಕೆ ನೀಡಲು ಸುತರಾಂ ಸಿದ್ಧನಿಲ್ಲವೆಂದು ಪೋಲೀಸ್ ಅಧಿಕಾರಿಗಳು ಹೇಳಿದರು.

## ದೌರ್ಜನ್ಯ !

ಈಗ ನನ್ನ ನ್ಯಾಯಾಲಯಕ್ಕೆ ನಿಂಗವ್ವ ರಹಿಮಾನರ ಮೇಲೆ ಚಾರ್ಜ್ ಶೀಟ್ ಬಂದಿತ್ತು. ಕೊಲೆ ವಿಚಾರಣೆಯ ಪೂರ್ವಭಾವೀ ಕ್ರಮಗಳನ್ನೆಲ್ಲ ಪೂರೈಸಿ ಆಪಾದಿತರಿಬ್ಬರನ್ನೂ ಕೊಲೆ ವಿಚಾರಣೆಯನ್ನು ಎದುರಿಸಲು ಬೆಳಗಾವಿಗೆ ಸೆಶನ್ಸ್ ಕೋರ್ಟಿಗೆ ಕಳುಹಿಸಿಕೊಡುವ ಆಜ್ಞೆ ಮಾಡಿದೆ.

ಮುಂದೆ ಎಡಿಶನಲ್ ಸೆಶನ್ಸ್ ನ್ಯಾಯಾಧೀಶರ ಎದುರು ಈ ಮೊಕದ್ದಮೆ ವಿಚಾರಣೆಗೆ ಬಂದು, ಇಬ್ಬರೂ ಆಪಾದಿತರು ಕೊಲೆ ಮಾಡಿದ್ದನ್ನು ಅಲ್ಲಗಳೆದರು. ನಿಂಗವ್ವ ತನ್ನ ತಪ್ಪೊಪ್ಪಿಗೆ ಹೇಳಿಕೆಯನ್ನು ಸೌದತ್ತಿ ನ್ಯಾಯಾಧೀಶರ ಸಮ್ಮುಖದಲ್ಲಿ ಪೋಲೀಸರ ದೌರ್ಜನ್ಯಕ್ಕೊಳಗಾಗಿ ಕೊಟ್ಟೆನೆಂದು ಹೇಳಿ ಕೊಲೆಯನ್ನು ಮಹೇಶ, ಮೇಲಗಿರಿಯರೇ ಮಾಡಿದ್ದಾರೆಂದು ಬಡಬಡಿಸಿದಳಲ್ಲದೆ, ಮಹೇಶ ಅಂಜಿಕೆ ಹಾಕಿದ್ದರಿಂದ ಬೆಳಗಾಗುವ ತನಕ ಯಾರಿಗೂ ಕೊಲೆಯ ವಿಷಯ ಹೇಳುವ ಸಾಹಸ ಮಾಡಲಿಲ್ಲವೆಂದು ಅವಳು ತನ್ನ ವಿರುದ್ಧವಾಗಿ ಬಂದ ಸಾಕ್ಷ್ಯ ಪುರಾವೆಗೆ ಉತ್ತರವಾಗಿ ದಂಡಪ್ರಕ್ರಿಯಾ ಸಂಹಿತೆಯ ೩೧೩ನೇ ಪ್ರಕರಣದಡಿ ಹೇಳಿಕೆ ಕೊಟ್ಟಳು.

ಇನ್ನು ಸೆಶನ್ಸ್ ನ್ಯಾಯಾಧೀಶರು ಈ ಖಟ್ಲೆಯಲ್ಲಿ ಪ್ರಾಸಿಕ್ಯೂಶನ್ನಿನ ಪರವಾಗಿ ಬಂದ ಒಟ್ಟು ಹದಿನೆಂಟು ಜನ ಸಾಕ್ಷಿದಾರರ ಸಾಕ್ಷ್ಯವನ್ನು ಪರಾಮರ್ಶಿಸಿ ಕೋರ್ಟಿನ ಮುಂದೆ ಇದ್ದ ಮೊದಲನೇ ಆರೋಪಿ ನಿಂಗವ್ವ ಮತ್ತು ಎರಡನೇ ಆರೋಪಿ ರಹಿಮಾನ; ಶಂಕರಗೌಡನ ಕೊಲೆ ಮಾಡಿ, ಹೆಣ ಹೊರಸಾಗಿಸಿ ರಕ್ತಸಿಂಚಿತ ನೆಲವನ್ನು ಸಾರಿಸಿ ಪುರಾವೆ ಮುಚ್ಚಿಟ್ಟ ಅಪರಾಧ ಮಾಡಿರುವರೋ ಎಂಬುದನ್ನು ಈಗ ನಿರ್ಧರಿಸಬೇಕಾಯಿತು. ಮೊದಲಿಗೆ ಶಂಕರಗೌಡನು ಕೊಡಲಿ ಏಟಿನಿಂದ ೧೯೭೭ರ ಅಕ್ಟೋಬರ್ ೧೯ರ ಮಧ್ಯರಾತ್ರಿ ಸತ್ತಿದ್ದು ಸರಿಯೇ ಎನ್ನುವ ಬಗ್ಗೆ ನ್ಯಾಯಾಧೀಶರಿಗೆ ಎಳ್ಳಷ್ಟೂ ಸಂಶಯ ಉಳಿಯಲಿಲ್ಲ. ಸರಕಾರದ ಪರವಾಗಿ ಇದ್ದ ಆರನೇ ಸಾಕ್ಷಿದಾರರಾದ ಡಾಕ್ಟರರು ಈ ಕುರಿತು ಸ್ಪಷ್ಟ ಅಭಿಪ್ರಾಯ ಕೊಟ್ಟಿದ್ದರು. ಆಪಾದಿತರೂ ಈ ಅಂಶವನ್ನು ಅಲ್ಲಗಳೆಯಲು ಹೋಗಲಿಲ್ಲ.

ಈಗ ಮೊದಲನೇ ಆಪಾದಿತೆ ತನ್ನ ಗಂಡನ ಮನೆಯಲ್ಲಿ ಚೆನ್ನಾಗಿ ನಡೆದುಕೊಳ್ಳಲಿಲ್ಲ ಮತ್ತು ಆಕೆ ಸೌಂದರ್ಯಸಾಧನ ಬಳಸುತ್ತಿದ್ದುದರ ಕಾರಣ ತನ್ನ ಅತ್ತೆಯ ಕೂಡ ಜಗಳ ಕಾಯ್ದು, ಕೊನೆಗೆ ಗಂಡನನ್ನು ಕಟ್ಟಿಕೊಂಡು, ತವರು ಮನೆಗೆ ಬಂದಳೆಂದು ಆಕೆಯ ಅತ್ತೆ ಸಾಕ್ಷ್ಯ ನುಡಿದಿದ್ದಳಲ್ಲದೇ, ಸ್ವತಃ ಆಪಾದಿತೆಯೇ ಇದನ್ನು ನ್ಯಾಯಾಲಯದ ಮುಂದೆ ಒಪ್ಪಿಕೊಂಡಳು. ಹಾಗಾದರೆ ಅವಳು ಈ ಅಮಾನುಷ ಕೊಲೆಯಲ್ಲಿ ಏನಾದರೂ ಪಾತ್ರ ವಹಿಸಿದಳೊ? ಮಹೇಶ, ಮೇಲಗಿರಿಯರು ಕೊಲೆ ಮಾಡಿದರೆಂದೂ, ಅವರ ಅಂಜಿಕೆಯಿಂದ ಅವಳು ಬೆಳಗಾಗುವ ತನಕ ತೆಪ್ಪಗಿದ್ದಳೆನ್ನುವದೂ ನಿಜವೋ? ಅಥವಾ ರಹಿಮಾನ ಕೊಲೆ ಮಾಡಿದ ನಂತರ ಆತನ ಯುಕ್ತಿಯ ಮೇರೆಗೆ ಮೊದಲನೇ

ಅಪಾದಿತೆ ಸಿಂಗಪ್ಪ ಮಹೇಶ. ಮೇಲಗಿರಿಯಾರ ಮೇಲೆ ಸುಳ್ಳು ಫಿರ್ಯಾದಿ ಕೊಟ್ಟಳೋ? ಎನ್ನುವ ಅಂಶಗಳನ್ನು ಈಗ ನ್ಯಾಯಾಲಯ ಪರೀಕ್ಷಿಸಬೇಕಾಯಿತು. ಮೊದಲನೆ ಅಂಶದ ಬಗೆಗೆ ಸೆಶನ್ಸ್ ನ್ಯಾಯಾಧೀಶರು ಸಾಕ್ಷಿ-ಪುರಾವೆಗಳನ್ನೆಲ್ಲ ಪರಿಗಣಿಸಿ, ಆಕೆಯು ಮಹೇಶ. ಮೇಲಗಿರಿಯರ ಅಂಜಿಕೆಯ ಕಾರಣಕ್ಕಾಗಿ ತಪ್ಪಾಗಿದ್ದಳೆನ್ನುವುದು ಅಪ್ಪಟ ಸುಳ್ಳು ಎಂದು ನಿರ್ಧರಿಸಿದರು. ಏಕೆಂದರೆ ಆಕೆಯ ಗಂಡನ ಕೊಲೆ ಮಾಡಿದವರು ಯಾರೇ ಇರಲಿ, ಅವರು ಹೋದ ನಂತರ ಬೆಳಗಾಗುವ ತನಕ ಆಕೆ ಯಾರಿಗೂ ಏನನ್ನೂ ಹೇಳದೆ ಮನೆಯಲ್ಲಿಯೇ ಸುಮ್ಮನೆ ಕೂತಿದ್ದೇಕೆ? ಅದಿರಲಿ, ಬೆಳಗಾದ ವೇಳೆ ಅಂಗಳದಲ್ಲಿ ಮಲಗಿರುವವರಾರೆಂದು ಶಕುಂತಲೆಯು ಅಪಾದಿತೆಯನ್ನು ಕೇಳಿದಾಗ ಮಲಗಿದಾತ ತನ್ನ ಗಂಡನೆಂದೂ ಆ ಜಾಗೆ ಬಿಟ್ಟು ಶಕುಂತಲೆ ಕಸ ಗುಡಿಸಬಹುದೆಂದೂ ನಾಟಕವಾಡಿದ್ದೇಕೆ? ಮೇಲಾಗಿ ಆಪಾದಿತೆ ತಾನೇ ಮದುವೆಗೆ ಮೊದಲು ಮಹೇಶನೊಂದಿಗೆ ಅನೈತಿಕ ಸಂಬಂಧ ಇಟ್ಟುಕೊಂಡಿದ್ದು ನಿಜವೆಂತಲೂ, ಗಂಡನ ಮೇಲೆ ಮನಸ್ಸು ಇದ್ದಿಲ್ಲವೆಂತಲೂ ಹೇಳುತ್ತಾಳೆ. ಕಾರಣ ಆಪಾದಿತೆಯು ತನ್ನ ಗಂಡನ ಕೊಲೆ ಮಾಡಿಸುವಲ್ಲಿ ವೈಯಕ್ತಿಕ ಆಸಕ್ತಿ ವಹಿಸಿದ್ದಲ್ಲದೆ ತನ್ನ-ದುರಿನಲ್ಲೇ ಈ ಕೊಲೆ ಮಾಡಲು ಅನುವು ಮಾಡಿಕೊಟ್ಟು, ಪುರಾವೆ ಬಚ್ಚಿಡಲು ನೆಲವನ್ನು ಸಾರಿಸಿದ್ದು ಖಂಡಿತವೆಂದು ತಮ್ಮ ತೀರ್ಪಿನಲ್ಲಿ ಸೆಶನ್ಸ್ ಜಜ್ಜರು ಹೇಳಿದ್ದಾರೆ.

## ಕೊಲೆಗಾರನೆ ?

ಹಾಗಾದರೆ ಅವಳಿಗೆ ಸ್ನೇಹಹಸ್ತ ನೀಡಿ ಆಕೆಯ ಗಂಡನ ಕೊಲೆ ಮಾಡಿದವನು ಎರಡನೇ ಆಪಾದಿತನೋ ಎಂಬುದನ್ನು ಈಗ ನಿರ್ಧರಿಸಬೇಕಾಯಿತು. ಪ್ರಾಸಿಕ್ಯೂಶನ್ನಿನ ಪರವಾಗಿ ಆತನ ಮೇಲಿದ್ದ ಪುರಾವೆಗಳೆಂದರೆ: (೧) ಆತನನ್ನು ಬಂಧಿಸಿದ ಮೇಲೆ ಅವನು ಪೋಲೀಸರಿಗೆ ಶಂಕರಗೌಡನನ್ನು ಕೊಲೆ ಮಾಡಲು ಉಪಯೋಗಿಸಲಾಯಿತೆಂದು ಹೇಳಲಾದ ಕೊಡಲಿಯನ್ನು ಮಹಜರ ಕೆಳಗೆ ಹಾಜರ ಪಡಿಸಿದ್ದು. (೨) ಕೊಲೆಯಾದ ರಾತ್ರಿ ಅಪರಾತ್ರಿ ಮೀರಿದ ನಂತರ, ರಹಿಮಾನನು ಪಕ್ಕದ ಮನೆಯಾಕೆಯಿಂದ ಒಂದು ಕೊಡ ನೀರು ಬೇಡಿ ತಂದು ಸ್ನಾನ ಮಾಡಿದ್ದು ಮತ್ತು (೩) ಮೊದಲನೆ ಆಪಾದಿತೆ ತನ್ನ ತಪ್ಪೊಪ್ಪಿಗೆ ಹೇಳಿಕೆಯಲ್ಲಿ ಸೌದತ್ತಿ ಮ್ಯಾಜಿಸ್ಟ್ರೇಟರ ಎದುರಿಗೆ ರಹಿಮಾನನು ಅವಳಿಂದ ಕೊಡ್ಲಿ ಇಸಿದುಕೊಂಡು ಆಕೆಯ ಗಂಡನನ್ನು ಕೊಲೆ ಮಾಡಿದನೆಂದು ಹೇಳಿದ್ದು.

ಸೆಶನ್ಸ್ ಜಜ್ಜರು ಪ್ರಥಮ ಅಂಶವನ್ನು ವಿಮರ್ಶಿಸುತ್ತ, ಎರಡನೇ ಆಪಾದಿತನಿಂದ ಹಾಜರಪಡಿಸಿಕೊಂಡ ಕೊಡ್ಲಿಯ ಮೇಲೆ ಯಾವುದೇ ರಕ್ತದ ಕಲೆಗಳು ಕಾಣಿಸಲಿಲ್ಲವೆಂದು ರಾಸಾಯನಿಕ ಪರೀಕ್ಷಕ (ಕೆಮಿಕಲ್ ಎಕ್ಸಾಮಿನರ್) ಹೇಳಿದ್ದರಿಂದ ಅದೇ ಕೊಡಲಿಯಿಂದ ಶಂಕರಗೌಡನ ಕೊಲೆ ನಡೆಯಿತೆಂದು ನಿಚಿತವಾಗಿ ಹೇಳುವದು ಸಾಧ್ಯವಿಲ್ಲ. ಆದ್ದರಿಂದ ಎರಡನೇ ಆಪಾದಿತ ಆ ಕೊಡ್ಲಿಯನ್ನು ಪೋಲೀಸರಿಗೆ ಬಚ್ಚಿಟ್ಟ ಜಾಗೆಯಿಂದ ಹಾಜರಪಡಿಸಿದನೆಂದು ಕದಾಚಿತ್ ನಂಬಿದರೂ ಅದೊಂದೇ ಕಾರಣದಿಂದ ಆತ ಕೊಲೆಗಾರನೆಂದು ನಿರ್ಧರಿಸಲಾಗುವುದಿಲ್ಲವೆಂದು ಜಜ್ಜರು ಅಪ್ಪಣೆ ಕೊಡಿಸಿದರು. ಇನ್ನು ಎರಡನೆಯ ಅಂಶವನ್ನು ಕುರಿತು, ಅಂದು ರಾತ್ರಿ ರಹಿಮಾನ ಪಕ್ಕದ ಮನೆಯಾಕೆಯಿಂದ ಒಂದು ಕೊಡ ನೀರು ಇಸಿದುಕೊಂಡಿದ್ದು ನಿಜವೆಂದೂ ಗೃಹಿಸಿದರೂ ಅದಿಷ್ಟೇ ಆತನನ್ನು ಕೊಲೆ ಅಪರಾಧಿಯೆಂದು ನಿರ್ಧರಿಸಲಾರದು. ದನಕ್ಕೆ ನೀರು ಕುಡಿಸಲು ಒಂದು ಬಿಂದಿಗೆ ನೀರು ಬೇಕೆಂದು ಆತ ಕೇಳಿದನೆಂದು ಪಕ್ಕದ ಮನೆಯಾಕೆ ತನ್ನ ಸಾಕ್ಷಿಯಲ್ಲಿ ಹೇಳಿದ್ದಾಳೆ. ಆಕಳಿಗೆ ಕುಡಿಸಲು ನೀರು ಕೇಳಿದ್ದಿರಬಹುದೆಂಬುದು ಸಹಜವಾಗಿಯೂ ತೋರುತ್ತದೆಂದು ನ್ಯಾಯಾಧೀಶರು ಅಭಿಪ್ರಾಯ ಪಟ್ಟಿದ್ದಾರೆ. ಕೊನೆಯ ಹಾಗೂ ಅತಿ ಮಹತ್ವದ ಅಂಶವನ್ನು ಪರಿಗಣಿಸುತ್ತ ಸೆಶನ್ಸ್ ಜಜ್ಜರು, ಮೊದಲನೆ ಆಪಾದಿತೆ ಸೌದತ್ತಿಯ ಮ್ಯಾಜಿಸ್ಟ್ರೇಟರ ಮುಂದೆ ನೀಡಿದ ತಪ್ಪೊಪ್ಪಿಗೆಯ ಹೇಳಿಕೆಯು ಕ್ರಮಬದ್ಧವಾಗಿಲ್ಲವೆಂತಲೂ ಮತ್ತು ಅದನ್ನು ಬರೆದುಕೊಳ್ಳುವಾಗ ಕಾನೂನು ರೀತ್ಯಾ ಅನುಸರಿಸಬೇಕಾದ

ಪ್ರಾಸೀಜರನ್ನು ಮ್ಯಾಜಿಸ್ಟ್ರೇಟರು ಉಲ್ಲಂಘಿಸಿದ್ದಾರೆಂತಲೂ ಅಭಿಪ್ರಾಯಪಟ್ಟು, ಎರಡನೆ ಆಪಾದಿತ ನಿರ್ದೋಷಿಯೆಂದು ಸಾರಿದರು. ಸಾಮಾನ್ಯವಾಗಿ ತಪ್ಪೊಪ್ಪಿಗೆ ಹೇಳಿಕೆ ಕೊಡುವ ಆಪಾದಿತರಿಗೆ ಕಾನೂನುಬದ್ಧವಾಗಿ ಮ್ಯಾಜಿಸ್ಟ್ರೇಟರು, ತಮ್ಮ ಮುಂದೆ ಅಂಥವರನ್ನು ಹಾಜರಪಡಿಸಿದ ಅವಧಿಯಿಂದ ಹೇಳಿಕೆ ಕೊಡಲು ೨೪ ಗಂಟೆಗಳಿಗೆ ಕಡಿಮೆ ಇಲ್ಲದಷ್ಟು ಪರಾವರ್ತನ ಸಮಯ (Reflection time) ಅಂದರೆ ಆಪಾದಿತರು ತಾವು ತಪ್ಪೊಪ್ಪಿಗೆ ಹೇಳಿಕೆ ಕೊಡುತ್ತೇವೆ ಎಂದು ಹೇಳಿದ್ದ ವಿಷಯದ ಮೇಲೆ ಮತ್ತೊಮ್ಮೆ ಚೆನ್ನಾಗಿ ಮನನ ಮಾಡಿಕೊಳ್ಳಲು ಒಂದು ದಿನಕ್ಕೆ ಕಡಿಮೆಯಿಲ್ಲದಷ್ಟು ಸಮಯ ಕೊಡಲೇಬೇಕಾಗುವುದಲ್ಲದೇ, ಆರೋಪಿತನನ್ನು ಪೋಲೀಸರು ಯಾವಾಗ ಅರೆಸ್ಟ್ ಮಾಡಿದರು? ಪ್ರಥಮ ಬಾರಿಗೆ ಪೋಲೀಸರು ಎಂದು ಆತನನ್ನು ಈ ಕುರಿತು ಪ್ರಶ್ನಿಸಿದರು? ಎಷ್ಟು ಸಲ ಪ್ರಶ್ನಿಸಿದರು? ಅರೆಸ್ಟ್ ಮಾಡುವ ಮೊದಲು ಪೋಲೀಸರು ಆತನನ್ನು ಎಲ್ಲಿಯಾದರೂ ಬಂಧಿಸಿ ಇಟ್ಟಿದ್ದರೆ? ಮತ್ತು ತಪ್ಪೊಪ್ಪಿಗೆ ಹೇಳಿಕೆ ನೀಡಲು ಯಾರಾದರೂ ಮನವೊಲಿಸಿದ್ದಾರೆಯೆ ಅಥವಾ ಹಿಂಸಿಸಿದ್ದಾರೆಯೆ? ಎಂಬ ಪ್ರಶ್ನೆಗಳನ್ನು ಕೇಳಿ, ಉತ್ತರಗಳನ್ನು ಬರೆದುಕೊಳ್ಳಲೇಬೇಕೆಂಬುದು ಕಾನೂನಿನ ಕಟ್ಟಳೆ. ಆದರೆ ದುರ್ದೈವವಶಾತ್ ಈ ಖಟ್ಲೆಯಲ್ಲಿ ಮಾಜಿಸ್ಟ್ರೇಟರು ಮೊದಲನೇ ಆಪಾದಿತೆ ಸಿಂಗವ್ವನಿಗೆ ಹೇಳಿಕೆ ನೀಡಲು ಯಾರಾದರೂ ಒತ್ತಾಯಿಸಿದ್ದಾರೆಯೆ, ಹಿಂಸೆ ಕೊಟ್ಟಿದ್ದಾರೆಯೆ ಎಂಬ ಪ್ರಶ್ನೆಯೊಂದನ್ನು ಹೊರತು ಪಡಿಸಿ ಬೇರೆ ಪ್ರಶ್ನೆಗಳೇನನ್ನೂ ಕೇಳಿರುವುದೇ ಇಲ್ಲ ಎಂದು ಪರಿಗಣಿಸಿ ಮತ್ತು ೨೪ ಗಂಟೆಗಳ ಪರಾವರ್ತನೆ ಸಮಯ ಕೊಡದೆ ಕೇವಲ ೨೧ ಗಂಟೆ ಅವಧಿಯನ್ನು ಕೊಡಲಾಗಿದೆಯೆಂದು ಹೇಳಿ ಸೆಶನ್ಸ್ ನ್ಯಾಯಾಧೀಶರು ತಪ್ಪೊಪ್ಪಿಗೆ ಹೇಳಿಕೆಯನ್ನು ಗಮನಕ್ಕೆ ತೆಗೆದುಕೊಳ್ಳಲಾಗದೆಂದು ತಿರಸ್ಕರಿಸಿದರು.

ಇದಲ್ಲದೇ ನ್ಯಾಯಾಧೀಶರು ತಮ್ಮ ತೀರ್ಪಿನಲ್ಲಿ ಮೊದಲನೆಯ ಆಪಾದಿತೆಗೂ ಎರಡನೆಯ ಆಪಾದಿತನಿಗೂ ಅನೈತಿಕ ಸಂಬಂಧವಿತ್ತೆಂಬ ಬಗ್ಗೆ ಸರಿಯಾದ ಮತ್ತು ಸಾಕಷ್ಟು ಪುರಾವೆಗಳಿಲ್ಲವೆಂದು ಹೇಳಿದ್ದಾರೆ. ಕೆಲ ಸಾಕ್ಷಿದಾರರು ಆಪಾದಿತರಿಬ್ಬರೂ ಆಗಾಗ್ಗೆ ಅಲ್ಲಲ್ಲಿ ನಗುತ್ತ ಮಾತಾಡುವುದನ್ನು ಮಾತ್ರ ನೋಡಿದ್ದೇವೆಂದು ಹೇಳಿದ್ದಾರೆ. ಒಂದು ಹೆಣ್ಣು, ಒಂದು ಗಂಡು ನಗುತ್ತ ಮಾತನಾಡುವುದು ಅನೈತಿಕ ಸಂಬಂಧ ಎನಿಸಲಾರದೆಂದೂ ಜಜ್ಜರು ಹೇಳಿದ್ದಾರೆ. ಮೊದಲನೇ ಆಪಾದಿತೆಯ ಅತ್ತೆ, "ನನ್ನ ಸೊಸೆ ಮತ್ತು ಎರಡನೇ ಆಪಾದಿತ ತಳಿಕೆ ಹಾಕಿಕೊಂಡು ಬಿದ್ದಿದ್ದನ್ನು ನೋಡಿದೆ," ಎಂದು ಹೇಳಿದ ಮಾತಿಗೆ ನ್ಯಾಯಾಧೀಶರು ತಮ್ಮ ಅಭಿಪ್ರಾಯ ನೀಡುತ್ತಾ ಅದು ಅಭುಕ್ತ ಸುಳ್ಳಿರಬೇಕೆಂದು ಹೇಳಿದ್ದಾರೆ. ಕೇವಲ ಸ್ನೋ–ಪೌಡರ್ ಉಪಯೋಗ ಮಾಡುವ ಕಾರಣಕ್ಕಾಗಿ ಸೊಸೆಯೊಂದಿಗೆ ಭಾರೀ ಕದನ ಕಾದ ಅತ್ತೆಯು. ತನ್ನ ಸೊಸೆಯು ಪರಪುರುಷನೊಂದಿಗೆ ಸಂಭೋಗ ಮಾಡುತ್ತಿದ್ದ ದೃಶ್ಯವನ್ನು ಕಣ್ಣಾರೆ ಕಂಡು ಸುಮ್ಮನೆ ಇದ್ದುದು ಪರಮಾಶ್ಚರ್ಯವೆಂದು ಸೋಜಿಗ ಪಟ್ಟಿದ್ದಾರೆ.

## ನಿರಪರಾಧಿ

ಮೇಲಾಗಿ ಆಪಾದಿತರ ಪರ ವಕೀಲರು ತಮ್ಮ ವಾದ ಮಂಡಿಸುತ್ತ ಪ್ರಸ್ತುತ ಆಪಾದಿತರಿಬ್ಬರೂ ನಿರ್ದೋಷಿಗಳೆಂದು ಹೇಳಿ, ಮಹೇಶ, ಮೇಲಗಿರಿಯರೇ ಈ ಕೊಲೆಯ ಸಂಚಿನ ಹಿಂದಿರಲೇಬೇಕೆಂದೂ, ಮಹೇಶನ ತಂದೆ ಆ ನಿಟ್ಟಿನಲ್ಲಿಯೇ ಸಿರಿವಂತ ಪ್ರಭಾವಿ ಕುಳವೆಂದೂ ಹೇಳಿದರು. ಸರಕಾರಿ ಸಾಕ್ಷಿದಾರರಲ್ಲಿ ಅನೇಕರು ಮಹೇಶನ ತಂದೆ ಭಾರೀ ಕುಳವೆಂಬುದು ನಿಜವೆಂದು ಒಪ್ಪಿದ್ದನ್ನು ಗಮನಿಸಿ ನ್ಯಾಯಾಧೀಶರು ತಮ್ಮ ತೀರ್ಪಿನಲ್ಲಿ "ಮೊದಲನೇ ಆಪಾದಿತೆಗೆ ಸ್ನೇಹ ಹಸ್ತ ನೀಡಿ ಆಕೆಯ ಗಂಡನನ್ನು ಕೊಲೆ ಮಾಡಿದಾತ ಇಂಥವನೇ ಎಂದು ಸಾಬೀತು ಮಾಡುವಲ್ಲಿ ಪ್ರಾಸಿಕ್ಯೂಶನ್ ವಿಫಲಗೊಂಡಿದೆ. ಪೋಲೀಸರು ಮಹೇಶ, ಮೇಲಗಿರಿಯರ ಮೇಲೆ ಏನೂ ಸಾಕ್ಷ್ಯವಿಲ್ಲವೆಂದೂ ಅವರ ಮೇಲೆ ಚಾರ್ಜ್‌ಶೀಟ್ ಹಾಕದೆ ಇದ್ದುದೊಂದು ವಿಶಿಷ್ಟ ಅಂಶ. ಇದೇ ಅಂಶವನ್ನು ಗಮನದಲ್ಲಿಟ್ಟುಕೊಂಡು ಎರಡನೇ ಆಪಾದಿತನ ಮೇಲಿದ್ದ ಸಾಕ್ಷ್ಯವನ್ನು ಅತಿ

ಜಾಗರೂಕತೆಯಿಂದ ಸಮೀಕ್ಷಿಸಬೇಕಾಗಿದೆ"ಯೆಂದು ಹೇಳಿ ಎರಡನೇ ಆಪಾದಿತ ಇವೆಲ್ಲ ಕಾರಣಗಳಿಂದ ನಿರಪರಾಧಿ ಎಂದು ಹೇಳಿದ್ದಾರೆ.

## ಮುಂಜಾವಲ್ಲಿ ಸಂಜೆ?

ನಿಜವಾದ ಕೊಲೆಪಾತಕಿ ಇಂಥವನೇ ಎಂದು ತಿಳಿಯುದಾದರೂ ಮೊದಲನೇ ಆಪಾದಿತೆ ತನ್ನ ಸಮಕ್ಷಮದಲ್ಲಿ ಗಂಡನ ಕೊಲೆ ಮಾಡಿಸಿದ್ದು, ಮತ್ತು ಪುರಾವೆ ಬಚ್ಚಿಡಲು ಆತನ ಶವವನ್ನು ಹೊರಸಾಗಿಸಿ, ನೆಲ ಸಾರಿಸಿದ್ದು ಮಾತ್ರ ಅಚಲ, ನಿಶ್ಚಿತವೆಂದು ೧೯೭೭ನೆಯ ಜೂನ್ ೨೨ನೇ ದಿನಾಂಕದಂದು ತೀರ್ಪು ನೀಡಿ ಆಕೆಗೆ ಕೊಲೆ ಅಪರಾಧಕ್ಕಾಗಿ ಆಮರಣ ಕಾರಾಗೃಹವಾಸ ಮತ್ತು ಪುರಾವೆ ನಾಶಪಡಿಸಿದ ಅಪರಾಧಕ್ಕಾಗಿ ಮತ್ತೆ ಮೂರು ವರ್ಷಗಳ ಕಠಿಣ ಶಿಕ್ಷೆಯನ್ನು ಸೆಶನ್ಸ್ ನ್ಯಾಯಾಧೀಶರು ವಿಧಿಸಿದರು.

ಬದುಕಿನ ೨೨ರ ಹರೆಯದಲ್ಲಿ ಸಾತ್ವಿಕ ಜೀವನದ ಅನುಭವ ಉಣ್ಣುವ ಬದಲು ನಿಂಗವ್ವ ವಿಮಾರ್ಗ ಗಾಮಿನಿಯಾಗಿ, ಕುಟಿಲ ಸಂಭೋಗಕ್ಕೆ ಆತುರಪಟ್ಟು, ಜೀವದ ಮುಸ್ಸಂಜೆಯ ತನಕ ಜೇಲುವಾಸ ಮಾಡಬೇಕಾಯಿತಲ್ಲವೆಂಬುದನ್ನು ನೆನೆದರೆ ಒಂದು ಕ್ಷಣಕ್ಕೆ ಆಕೆಗಾಗಿ ಯಾರಾದರೂ ಮರುಗಬಹುದೆಂದು ನನಗನಿಸುವದಿಲ್ಲ. ಆದರೆ ೨೫ರ ಹರೆಯದ ಗಂಡನ ಕೊಲೆ ಮಾಡಿಸಿದ ಈ ರಾಕ್ಷಸಿ ಹೆಣ್ಣನ್ನು ನೆನೆದು ಕೆಲವರ ರಕ್ತವು ಕುದಿಯಲೂಬಹುದಲ್ಲವೆ? ✡

(ಪ್ರಸ್ತುತ ಲೇಖಕರು ಕರ್ನಾಟಕ ನ್ಯಾಯಾಂಗ ಇಲಾಖೆಯಲ್ಲಿ ನ್ಯಾಯಾಧೀಶರಾಗಿದ್ದಾರೆ.)



## ಟಿ ಮಾಡಿ!

ಮೈಸೂರು ಕಾರ್ಖಾನೆಯಲ್ಲಿ ತರಬೇತಿಗೆ ಸೇರಬಯಸುವವರಿಗಾಗಿ ಒಂದು ಲಿಖಿತ ಪರೀಕ್ಷೆ ನಡೆಸುತ್ತಾರೆ. ಅದರಲ್ಲಿ ಪಾಸಾದವರನ್ನು ಇಂಟರ್‌ವ್ಯೂನಲ್ಲಿ ಮತ್ತೊಮ್ಮೆ ಜರಡಿ ಆಡುತ್ತಾರೆ. ಅಲ್ಲಿ ನಡೆಸಿದ ಒಂದು ಬುದ್ಧಿವಂತಿಕೆಯ ಪರೀಕ್ಷೆ ಹೀಗಿದೆ:

ಒಂದು ಕಡೆ ಕಾಫಿಪುಡಿ, ಸಕ್ಕರೆ, ಹಾಲು, ಸ್ಟೋವು, ಎರಡು ಬೆಂಕಿಕಡ್ಡಿ ಮತ್ತು ಕಾಫಿಗೆ ಬೇಕಾದ ಏನೆಲ್ಲಾ ಪದಾರ್ಥಗಳನ್ನು ಇಟ್ಟಿರುತ್ತಾರೆ ಅದರ ಮುಂದೆ 'ಟಿ ಮಾಡಿ' ಎಂಬ ಸೂಚನೆ ಇರುತ್ತದೆ. ಅಭ್ಯರ್ಥಿಗಳಲ್ಲಿ ಕೆಲವರು ಏನೂ ತೋಚದೆ ದಿಙ್ಮೂಢರಾಗಿ ನಿಲ್ಲುತ್ತಾರೆ. ಕೆಲವರು ಕಾಫಿಪುಡಿ ಇರುವಾಗ ಟಿ ಮಾಡುವುದು ಹೇಗೆ ಎಂದು ತಲೆ ಕೆರೆಯುತ್ತಾ ನಿಲ್ಲುತ್ತಾರೆ ಮತ್ತೆ ಕೆಲವು ಮಹಾಶಯರು ಕೊಟ್ಟಿರುವ ಸೂಚನೆಯೆ ತಪ್ಪಿರಬಹುದು ಎಂದು ಭಾವಿಸಿ, ಹೇಗಾದರೂ ಆಗಲಿ ಎಂದುಕೊಂಡು ಕಾಫಿಯ ತಯಾರಿಕೆಯನ್ನು ಪ್ರಾರಂಭಿಸಿಯೆಬಿಡುತ್ತಾರೆ. ಆದರೆ ನಿಜವಾಗಿಯೂ ಬುದ್ಧಿವಂತರಾದ ಕೆಲವರು ಮಾತ್ರ ಕೊಟ್ಟಿರುವ ಪ್ರತಿಯೊಂದು ವಸ್ತುವನ್ನೂ ಗಮನಿಸಿ ನೋಡಿ, ಸ್ವಲ್ಪ ಯೋಚಿಸಿ ಎರಡು ಬೆಂಕಿಕಡ್ಡಿಗಳನ್ನು 'ಟಿ' ಆಕಾರದಲ್ಲಿ ಜೋಡಿಸಿಟ್ಟು ಬರುತ್ತಾರೆ. — ಜಿ. ಎಸ್. ಶ್ರೀವನಮಾಲಿ



ನ್ಯಾಯಾಧೀಶರು ಆಪಾದಿತನೊಬ್ಬನಿಗೆ: 'ಆ ಅಧಿಕಾರಿಯನ್ನು ಅವಮಾನ ಗೊಳಿಸಿದುದಕ್ಕಾಗಿ ನಿನಗೆ ನಾನು ೫೦ ರೂ. ಗಳ ದಂಡವನ್ನು ವಿಧಿಸಿದ್ದೇನೆ- ಅಂದಹಾಗೆ ನೀನು ಈ ಬಗ್ಗೆ ನನಗೇನಾದರೂ ಹೇಳುವುದಿದೆಯೆ?'

'ಮತ್ತೆ ನಿಮ್ಮನ್ನು ಅವಮಾನಗೊಳಿಸಿದರೆ ಎಷ್ಟು ದಂಡ ಹಾಕತೀರಿ ಅಂತ...'

# ಪದಾರ್ಥ ಚಿಂತಾಮಣಿ

– ೫ –

ಯಾವುದೊಂದು ಸಂಸ್ಕೃತ ಅಥವಾ ಕನ್ನಡ ಶಬ್ದಕೋಶವನ್ನು ನೋಡಿದರೆ **ಕಾಶ್ಮೀರ** ಶಬ್ದಕ್ಕೆ ಎರಡಾದರೂ ಅರ್ಥಗಳು ಗೋಚರಿಸುತ್ತವೆ. ಒಂದು ಆ ಹೆಸರಿನ ದೇಶ; ಇನ್ನೊಂದು ನಾವು ಈಗ **ಕುಂಕುಮ–ಕೇಸರಿ** ಅಥವಾ ಬರೀ **ಕೇಶರ** ಎಂದು ಕರೆಯುವ ಆ ಪರಿಮಳದ ಪುಷ್ಪ ಕೇಶರ. ಕೇಶರಕ್ಕೆ ಇರುವ **ಕಾಶ್ಮೀರ**ವೆಂಬ ಹೆಸರು ಭಾರತ ದೇಶದಲ್ಲಿ ಆ ಪದಾರ್ಥ ಎಲ್ಲಿಂದ ಬರುತ್ತಿತ್ತೆಂಬುದಕ್ಕೆ ಖಚಿತವಾದ ಐತಿಹಾಸಿಕ ದಾಖಲೆಯಾಗುತ್ತದೆ. ಇಂದು ಕೇಶರವನ್ನು ನಾವು ಸ್ಪೇನಿನಿಂದಲೂ ತರಿಸುತ್ತೇವೆ. ಭಾರತಕ್ಕೂ ಯುರೋಪಿಗೂ ರೋಮನ್ ಸಾಮ್ರಾಜ್ಯದ ಕಾಲದಿಂದಲೂ ವ್ಯಾಪಾರವಿತ್ತು. ಆದರೆ ಅಲ್ಲಿಂದ ನಾವು ತರಿಸುತ್ತಿದ್ದ ದ್ರವ್ಯಗಳಲ್ಲಿ ಕೇಶರ ಇರಲಿಲ್ಲ. ಕಾಶ್ಮೀರವೊಂದೇ ಕೇಶರದ ಮೂಲಾಕರವಾಗಿತ್ತು. ಮತ್ತೊಂದು ವಿಶೇಷವೆಂದರೆ **ಕುಂಕುಮ** ಶಬ್ದದ ಪ್ರಾಥಮಿಕ ಅರ್ಥ ಕಾಶ್ಮೀರ ಕೇಶರವೆಂದೇ ಹೊರತು ನಮ್ಮ ಮಹಿಳೆಯರು ಹಣೆಗಿಟ್ಟುಕೊಳ್ಳುವ ಅರಿಶಿಣ ಪುಡಿಗೆ ಸುಣ್ಣ ಬೆರಸಿ ತಯಾರಿಸಿದ ಕೆಂಪು ಪುಡಿಯೆಂದಲ್ಲ. ಈ **ಕುಂಕುಮ** ಆ **ಕುಂಕುಮ**ದ ಅಗ್ಗದ ನಕಲಿಯಾಗಿದ್ದರೂ ಇರಬಹುದು.

ಭಾರತೀಯ ಭಾಷೆಗಳ ಕೋಶಗಳಲ್ಲಿ **ಕಾಶ್ಮೀರ**ಕ್ಕೆ ಈ ಅರ್ಥವಿದ್ದರೆ, ಇಂಗ್ಲೀಷಿನ ಯಾವುದೇ ಚಿಕ್ಕ ಕೋಶದಲ್ಲಿ ನಿಮಗೆ **ಕಾಶ್ಮೀರ** (Cashmere) ಎಂಬ ಶಬ್ದ ಸಿಕ್ಕಿಯೇ ಸಿಕ್ಕುವದಾದರೂ ಅದರ ಅರ್ಥ ಕಾಶ್ಮೀರದ **ಉಣ್ಣೆಯ ಶಾಲು** ಎಂಬುದಾಗಿರುತ್ತದೆ. ನಮ್ಮ ದೇಶದಲ್ಲೆಲ್ಲಾ ಶತಮಾನಗಳ ಕಾಲದಿಂದ ಕಾಶ್ಮೀರದ ಉಣ್ಣೆಯ ಕಸೂತಿ ಶಾಲುಗಳನ್ನು ಪಂಡಿತರಿಗೆ ಹೊದಿಸಿ ಗೌರವಿಸುವ ಪರಿಪಾಠವಿದ್ದರೂ ಅವುಗಳಿಗೆ ಆ ದೇಶವಾಚಕ ನಾಮ ಇಲ್ಲದಿದ್ದುದು ಆಶ್ಚರ್ಯ.

ದೇಶವಾಚಕ ಶಬ್ದಗಳಿಂದ ಪ್ರಸಿದ್ಧವಾಗಿರುವ ಬೇರೆ ಪದಾರ್ಥಗಳೂ ಇವೆ. **ಸೈಂಧವ** ಶಬ್ದ ಸಿಂಧೂ ದೇಶದ್ದು ಎಂಬರ್ಥ ಕೊಡುತ್ತದೆ. **ಸೈಂದ್ರಲವಣ** ಎಂಬ ಹೆಸರು ನಮ್ಮ ಹಳ್ಳಿಗರಿಗೆ ಪರಿಚಿತ. ಇದರ ನಿಜ ರೂಪ **ಸೈಂಧವ ಲವಣ**. ಬರೀ **ಸೈಂಧವ** ಎಂದರೂ ಅದೇ. ಔಷಧದಲ್ಲಿ ಉಪಯೋಗಿಸುವ ಒಂದು ಖನಿಜ ಉಪ್ಪು ಅದು. ಇದೇ ಶಬ್ದಕ್ಕೆ ಕುದುರೆ ಎಂಬ ಅರ್ಥವೂ ಇದೆ. ಸಿಂಧೂ ದೇಶದಲ್ಲಿ ಹಿಂದೆ ಸಾಕಿ ರಫ್ತು ಮಾಡುತ್ತಿದ್ದ ವಿಶಿಷ್ಟ ಜಾತಿಯ ಕುದುರೆ ಅದು.

ಕೋಶಗಳಲ್ಲಿ **ಚೀನ**ಕ್ಕೆ ಕೂಡ ಅನೇಕಾರ್ಥಗಳನ್ನು ಕೊಡುತ್ತಾರೆ. **ಚೀನ** ಅಥವಾ **ಚೀನಾಂಬರ** ಎಂದರೆ **ರೇಶ್ಮೆ ಬಟ್ಟೆ**. ರೇಶ್ಮೆಯ ಮೂಲಸ್ಥಾನ ಆ ದೇಶ ಎಂಬ ಇಂದಿನ ತಿಳುವಳಿಕೆಗೆ ಈ ಶಬ್ದ ಪ್ರಮಾಣವನ್ನು ಒದಗಿಸುತ್ತದೆ. **ಚೀನಾಕ** ಎಂಬೊಂದು **ಕರ್ಪೂರ** ಇದೆ. ಕರ್ಪೂರವೂ ಚೀನದ್ದೇ ಕೊಡುಗೆ. (**ಕರ್ಪೂರ** ವೃಕ್ಷ ಮುಖ್ಯವಾಗಿ ಬೆಳೆಯುವುದು **ಫೋರ್ಮೋಸಾ** ದ್ವೀಪದಲ್ಲಿ) ಅಲ್ಲಿಂದ ಚೀನದ ಮೂಲಕ ಅದು ನಮಗೆ ಬರುತ್ತಿತ್ತು. ಯುರೋಪಿಯನ್ ಭಾಷೆಗಳ Camphor ಎಂಬುದು ಅರಬ್ಬೀ ಭಾಷೆಯ **ಕಾಫೂರ್** ಎಂಬ ಶಬ್ದದ್ದೇ ಅಪಭ್ರಂಶ. ಅರಬ್ಬಿಯ **ಕಾಫೂರ್** ಮತ್ತು ಸಂಸ್ಕೃತದ **ಕರ್ಪೂರ** ಎರಡೂ ಬೇರೊಂದು ಮೂಲದಿಂದ ಬಂದಿರಬಹುದು.

ಆದರೆ ಪಾಶ್ಚಾತ್ಯ ದೇಶಗಳಲ್ಲಿ **ಚೀನ** ಎಂದರೆ ಪಿಂಗಾಣಿ ಪಾತ್ರ. ಅದಕ್ಕೂ ಚೀನ ಪ್ರಸಿದ್ಧ, ಆದರೆ ಪ್ರಾಚೀನ ಭಾರತ ಅದಕ್ಕೆ ಗಿರಾಕಿಯಾಗಿರಲಿಕ್ಕಿಲ್ಲ.

ಮತ್ತೆ **ಕೇರಳ**. ಅಶೋಕನ ಕಾಲಕ್ಕೂ ಹಿಂದೆ ಈ ಹೆಸರಿಂದ ಪ್ರಸಿದ್ಧವಾದ ರಾಜ್ಯದ ಹೆಸರು. **ಖಗೋಲ** ಶಾಸ್ತ್ರ ಎಂಬರ್ಥವನ್ನು ಕೊಡುತ್ತದೆ. ಖಗೋಲ ಮತ್ತು ಜ್ಯೋತಿಷ ಶಾಸ್ತ್ರಕ್ಕೆ **ಕೇರಳ** ಪ್ರಾಚೀನದಿಂದ ಹೆಸರಾಗಿತ್ತೆಂದು ಇದು ತೋರಿಸುತ್ತದೆ. ಭಾರತದ ಅದ್ವಿತೀಯ ಗಣಿತ–ಖಗೋಲ ಪ್ರವೀಣ **ಆರ್ಯಭಟ** ಇದ್ದದ್ದು ಪಾಟಲೀಪುತ್ರದಲ್ಲಾದರೂ ಅವನು ಮೂಲತಃ ಕೇರಳದವನಿರಬಹುದೆಂದು ಒಂದು ಊಹೆ ಉಂಟು.

**— ಪಾವೆಂ.**

ನನ್ನ ಅಮ್ಮ ನಮ್ಮ ಬಟ್ಟೆಗಳನ್ನು
ತನ್ನ ಸಿಂಗರ್ ಹೊಲಿಗೆ ಮೆಶೀನಿನಿಂದ ಹೊಲಿದು
ತುಂಬಾ ಹಣ ಉಳಿಸುತ್ತಿದ್ದರು. ನನ್ನ ಬೆಳೆಯುತ್ತಿರುವ ಮಕ್ಕಳ
ಬಟ್ಟೆಗಳು ಬಲು ಬೇಗ ಅವರಿಗೆ ಸಣ್ಣವಾಗುತ್ತಿರುವುದರಿಂದ
ಈಗ ನಾನೂ ಸಿಂಗರ್‌ನವರ ಮೆರಿಟ್‌ನಿಂದ ಹೊಲಿದು
ಹಣ ಉಳಿಸುತ್ತೇನೆ.



ಯಾರದೋ ಅನುಕೂಲಕ್ಕಾಗಿ
ಯಾರದೋ ಬಲಿಯಾಯಿತೆ?

# ಮುಧೋಳ ರಾಜನ 'ಪರಕಾಯ ಪ್ರವೇಶ'

ಶ್ರೀನಿವಾಸ ಹಾವನೂರ

ದಕ್ಷಿಣ ಮರಾಠಾ" ಎಂದು ಬ್ರಿಟಿಶರಿಂದ ಕರೆಯಲ್ಪಟ್ಟ ಪ್ರದೇಶಗಳಲ್ಲಿ, ಕೊಲ್ಹಾಪುರ, ಸಾಂಗಲಿಗಳನ್ನು ಬಿಟ್ಟರೆ, ಮುಧೋಳವೇ ದೊಡ್ಡ ಸಂಸ್ಥಾನವಾಗಿತ್ತು. ಅದರ ಸಂಸ್ಥಾನಿಕರಲ್ಲಿ ಮಾಲೋಜಿ ಘೋರ್ಪಡೆಯು (೧೮೬೭–೧೯೦೫) ಹೆಚ್ಚು ಪ್ರಸಿದ್ಧ ವ್ಯಕ್ತಿಯಾಗಿದ್ದನು. ನಾಲ್ಕಾರು ಪೇಶ್ವೆ ತಲೆಮಾರುಗಳನ್ನು ಕಂಡನು. ಮನೆಯಲ್ಲಿ 'ಘೋರ್ಪಡೆ ದೇವಾಡಿ' ಎಂಬ ಉಪನಾಮವನ್ನು ಇಟ್ಟುಕೊಳ್ಳುವಷ್ಟು ಸಾಮರ್ಥ್ಯಶಾಲಿ. ಅವನ ಹಿರಿಯ ಮಗ ಬದುಕಿ ಇರದ್ದರಿಂದ, ಮೊಮ್ಮಗ ನಾರಾಯಣರಾವ್ ಮುಧೋಳದ ಸಂಸ್ಥಾನಿಕನಾದನು.

ನಾರಾಯಣರಾಯನಿಗೆ ಇಬ್ಬರು ಹೆಂಡಂದಿರು: ಬಕ್ಕಾಬಾಯಿ ಮತ್ತು ಬಾಳಾಬಾಯಿ; ಇವರಿಗೆ ಮೂವರು ಗಂಡು ಮಕ್ಕಳು ಹಾಗೂ ಒಬ್ಬ ಮಗಳು. ಈ ಕಥಾನಕಕ್ಕೆ ಸಂಬಂಧಿಸಿದವರ ವಂಶ ವೃಕ್ಷ ಇಂತಿದೆ:

ಮಾಲೋಜಿರಾವ್
- ಗೋವಿಂದರಾವ್ (೧ನೇ ಹೆಂಡತಿಯಿಂದ)
  - ನಾರಾಯಣರಾವ್
    - ಗೋವಿಂದರಾವ್, ಕುಂದಾಬಾಯಿ, ಲಕ್ಷ್ಮಣರಾವ್ (೨ನೇ ಪತ್ನಿ ಬಾಳಾಬಾಯಿಯ ಮಕ್ಕಳು)
    - ವೆಂಕಟರಾವ್ (ಹಿರಿಯ ಪತ್ನಿ ಬಕ್ಕಾಬಾಯಿಯ ಮಗ)
- ಮಧರಾವ್ (೨ನೇ ಹೆಂಡತಿಯಿಂದ)

ಆಗಿನ ನಡವಳಿಕೆಯ ಪ್ರಕಾರ, ನಾಲ್ವರ ಮದುವೆಯೂ ಬಾಲ್ಯದಲ್ಲಿಯೇ ಆಯಿತು. ಗೋವಿಂದನು ೧೨ ವರ್ಷದವನಿದ್ದಾಗ ಸಿತೋಳೆಕರ ಸರದಾರ ಮನೆತನದ ಜಾನಕಿ ಅವನ ಕೈಹಿಡಿದಳು. ಇತ್ತ ವೆಂಕಟನು ನಿಪ್ಪಾಣಿಯ ಸಂಸ್ಥಾನಿಕನ ಮಗಳನ್ನು ವರಿಸಿದನು. ಗೋವಿಂದನು ೧೬ ವರ್ಷದವನಿದ್ದಾಗ, ತಂದೆಯು ಅವನನ್ನು ಪುಣೆಯ ಪೇಶ್ವೆಯ ಬಳಿಗೆ ಕರೆದೊಯ್ದನು. ಆತ ಓರ್ವ ಸರದಾರನಾಗಿ ಅಲ್ಲಿ ೪–೫ ವರ್ಷ ಕಳೆದನು. 'ದೊಡ್ಡ ಪಳಾದ' ಮೇಲೆ ಜಾನಕಿಯೂ ಅಲ್ಲಿಯೆ ನೆಲೆಸಿದಳು. ಈ ವೇಳೆಗೆ ವೆಂಕಟನ ಮದುವೆಯ ನಿಶ್ಚಯವಾಯಿತು (೧೮೧೫). ಅದಕ್ಕೆಂದು ಗೋವಿಂದನು ಪತ್ನಿಯನ್ನೂ ಅದೇ ಹುಟ್ಟಿದ ತನ್ನ ಮಗುವನ್ನೂ (೨–೩ ತಿಂಗಳದ್ದು) ಕರೆದುಕೊಂಡು ಹೊರಟನು. ಆಗ ಇಂಗ್ಲಿಶ್– ಮರಾಟರ ಸೆಣಸಾಟ ಅಲ್ಲಲ್ಲಿ ನಡೆದೇ ಇದ್ದಿತು. ಆದ್ದರಿಂದ ಹೆಂಡತಿಯನ್ನು ಬೇರೊಂದು ಮಾರ್ಗವಾಗಿ, ಕಳಿಸಿ, ತಾನು ಕುದುರೆಯನ್ನೇರಿ, ಮಗುವನ್ನು ಧೋತರದಲ್ಲಿ ಬೆನ್ನಿಗೆ ಕಟ್ಟಿಕೊಂಡು, ಜೊತೆಗೆ ಹಾಲಿನ ಪಾತ್ರೆಯನ್ನು ಇಟ್ಟುಕೊಂಡು, ಅದು ಅತ್ತಾಗೆಲ್ಲ ಕುಡಿಸುತ್ತ ನಿಪ್ಪಾಣಿಯನ್ನು ಸೇರಿದನಂತೆ.

ಇದಾದ ಕೆಲವು ತಿಂಗಳಲ್ಲಿಯೇ ಸಂಸ್ಥಾನಿಕ ನಾರಾಯಣರಾಯನು ತೀರಿಕೊಂಡಾಗ (೧೮೧೬) ಬಕ್ಕಾಬಾಯಿಯೇ ಅಧಿಕಾರಸೂತ್ರವಹಿಸಿ, ತನ್ನ ಮಗನಿಗೇ (ಎಲ್ಲರಿಗಿಂತ ಕಿರಿಯ) ಪಟ್ಟಬಾಧ್ಯತೆಯೆಂದು ಸಾಧಿಸತೊಡಗಿದಳು. ಪೇಶ್ವೆಯ ನಿರ್ಣಯಕ್ಕಾಗಿ ಈ ಸಮಸ್ಯೆಯನ್ನು ಬಿಟ್ಟಾಗ, ಅವನು, ತನ್ನ ಕಾರಭಾರಿಯಾದ ಮೋರೋಪಂತನ ಸಲಹೆಯನ್ನು ಕೇಳಿದನು. ಬಕ್ಕಾಬಾಯಿ ಇದನ್ನು ಊಹಿಸಲಾರಳೆ? ಮೋರೋಪಂತನಿಗೆ ೩ಸಾವಿರ ರೂಪಾಯಿ ಲಂಚವನ್ನು ಕೊಟ್ಟು, ತನ್ನ ಮಗನಿಗೇ ಪಟ್ಟುಸಿಗುವಂತೆ ಪೇಶ್ವೆಯ ಮನಸ್ಸನ್ನು ಒಲಿಸಿಕೊಂಡಳು.

ಆದರೆ ಶಾಸ್ತ್ರ ಹಾಗೂ ಪರಂಪರೆ ಏನು ಹೇಳುತ್ತದೆ? ಇದು ಸರ್ವಥಾ ತಪ್ಪು ಎಂದೇ ಅಲ್ಲವೆ? ಇದೇ ಮನೆತನದಲ್ಲಿ ಕೇವಲ ಹತ್ತು ವರ್ಷಗಳ ಹಿಂದೆ ಆದ ಘಟನೆಯಿತ್ತು. ಮಾಲೋಜಿಯು ಸತ್ತಾಗ, ಅವನ ಎರಡನೆಯ ಮಗ ಮಹರಾವ್ ಜೀವಿಸಿದ್ದರೂ, ಹಿರಿಯ ಸಂತಾನಕ್ಕೇನೆ ಪಟ್ಟಬಾಧ್ಯತೆಯೆಂಬ ಶಾಸ್ತ್ರಾನುಸಾರ, ಮೊಮ್ಮಗ ಪಟ್ಟವೇರಿದ್ದನು. ಈ ಅಡಚಣೆಯಿಂದಾಗಿ ಇರಬೇಕು– ಪೇಶ್ವೆಯು ಅಧಿಕೃತ ಸನದನ್ನು ಕೊಟ್ಟಿರಲಿಲ್ಲ. ಇದರಿಂದ ಅಸವಸಗೊಂಡ ಗೋವಿಂದರಾಯನು ಪುಣೆಯಲ್ಲಿಯೆ, ಸುಪ್ರಸಿದ್ಧ ಸರದಾರ ಬಾಪೂ ಗೋಖಲೆಯನ್ನು ಸೇರಿಕೊಂಡನು.

ದಿ. ೧೯ನೇ ಫೆಬ್ರುವರಿ ೧೮೧೮ ಮರಾಟರ ಚರಿತ್ರೆಯಲ್ಲಿ ಒಂದು ಮಹತ್ವದ ದಿನವಾಗಿದೆ. ಅಂದು ನಡೆದ ಅಷ್ಟೆ ಎಂಬಲ್ಲಿಯ ಇಂಗ್ಲಿಶ್– ಮರಾಟಾ ಯುದ್ಧದಲ್ಲಿ ಶೂರ ಬಾಪೂ ಗೋಖಲೆ ಮರಣವನ್ನಪ್ಪಿದನು. ವಿಜಯೋನ್ಮತ್ತರಾದ ಬ್ರಿಟಿಶ್ ಸೈನಿಕರು, ಓಡಿಹೋಗುತ್ತಿದ್ದ ಮರಾಟರನ್ನು ಬೆನ್ನಟ್ಟಿದರು. ಆ ದಿವಸ ಬಾಪೂ ಗೋಖಲೆಗೆ ಹೆಗಲೆಣೆಯಾಗಿ ಹೋರಾಡುತ್ತಿದ್ದ ಗೋವಿಂದರಾಯನು ನೆಲಕ್ಕುರುಳಿದನು. ಯುದ್ಧದಲ್ಲಿ ಯಾರು ಸತ್ತಿದ್ದಾರೆ, ಯಾರು ಅರೆಜೀವವಾಗಿದ್ದಾರೆ, ಯಾರು ಮೂರ್ಛೆ ಹೋಗಿದ್ದಾರೆಂಬುದನ್ನು ನೋಡಲು ಆದಾರಿಗೆ ಸಮಯವಿರುತ್ತದೆ? ಅಂದು ನೆಲಕ್ಕೆ ಮುಖಕ್ಕೆ ಮಾಡಿಕೊಂಡು ಉರುಳಿದ ಗೋವಿಂದರಾಯ ನಿಜವಾಗಿ ಸತ್ತಿದ್ದನೆ? ಅವನು ಬದುಕಿದ್ದರೆ, ಅನಿತರಲ್ಲಿಯೆ ಕಾಣಿಸಿಕೊಳ್ಳುತ್ತಿದ್ದನಲ್ಲವೆ? ಮುಂದಿನ ಏಳು ವರ್ಷಗಳವರೆಗೆ ಅವನನ್ನು ನೆನಪಿಸಿಕೊಂಡವರೇ ಇಲ್ಲ. ಆದರೆ...

೨

೭ ಮಾರ್ಚ್ ೧೮೨೬

ಮಾನನೀಯ ಗವರ್ನರ್ ಸಾಹೇಬ ಬಹದ್ದೂರ ಅವರ ಸನ್ನಿಧಿಗೆ—

ನಮ್ಮ ತಂದೆ ನಾರಾಯಣರಾವ್ ರಾಜೇ ಘೋರ್ಪಡೆ ಅವರು ತೀರಿಕೊಂಡ ಬಳಿಕ, ಚಿ. ರಾ. ಶ್ರೀ ವೆಂಕಟರಾವ್ ಮತ್ತು ನಾನು ಪುಣೆಯ ಪೇಶ್ವೆಯವರ ಬಳಿಗೆ ಹೋಗಿ, ಮುಧೋಳ ಸಂಸ್ಥಾನದ ಮೇಲಿನ ಹಕ್ಕನ್ನು

ಕೇಳಿದೆವು, ಈ ಮಧ್ಯೆ, ಯುದ್ಧದ ವಾತಾವರಣ ಎದ್ದುದರಿಂದ, ನಿರ್ಣಯವು ಮುಂದೆ ಹಾಕಲ್ಪಟ್ಟಿತು. ಪಂಢರಪುರದ ಬಳಿ ನಡೆದ ಯುದ್ಧದಲ್ಲಿ ನಾನು ಬಾಪೂ ಗೋಖಲೆಯವರ ಜೊತೆಗಿದ್ದೆ. ನನಗೆ ಮೂರು ಗಾಯಗಳಾದ್ದರಿಂದ ನೆಲಕ್ಕೆ ಬಿದ್ದೆ. ನಮ್ಮವರೆನ್ನುವವರು ಬಳಿಯಲ್ಲಿದ್ದಿಲ್ಲ. ರಾತ್ರಿಯನ್ನು ಹೇಗೋ ಕಳೆದೆ. ಮುಂದೆ ಆರು ತಿಂಗಳ ವರೆಗೆ ಅಡಗಿಕೊಂಡಿದ್ದು, ಹಲವು ವರ್ಷ ಉತ್ತರ ಹಿಂದುಸ್ಥಾನದಲ್ಲಿ ತೀರ್ಥಯಾತ್ರೆ ಮಾಡಿ, ಕಳೆದ ವರ್ಷ ಮರಳಿ ಬಂದೆನು. ನಾನು ತೀರಿಹೋಗಿರುವೆನೆಂದು ಭಾವಿಸಿ, ಕಂಪನಿ ಸರಕಾರದವರು ನನ್ನ ತಮ್ಮನಿಗೆ ಮುಧೋಳ ಸಂಸ್ಥಾನವನ್ನು ಒಪ್ಪಿಸಿದ ವಿಷಯ ತಿಳಿಯಿತು. ನನ್ನ ನಿಜ ಬಂಧು ಲಕ್ಷ್ಮಣರಾಯನು ನನ್ನನ್ನು ಅಲ್ಲಿ ಇಲ್ಲಿ ಹುಡುಕಿಸಿ ಕಾಣದೇ, ಮಲತಮ್ಮನ ಬಳಿ ನಿಲ್ಲಲಾಗದೇ, ಬಡೋದೆಯ ಗಾಯಕವಾಡರ ಆಶ್ರಯವನ್ನು ಹೊಂದಿದನು. ನನ್ನ ಪತ್ನಿ ತವರು ಮನೆಯನ್ನು ಸೇರಿದಳು. ಹೀಗಾಗಿ ಮರಳಿ ಬಂದ ಮೇಲೆ ನಾನು ಚಿಂಚೋಳಿಯಲ್ಲಿ (ಖಾನದೇಶ) ನೆಲೆ ನಿಂತೆ. ನನ್ನ ತಂಗಿ, ಇತರ ಬಳಗದವರು ನನ್ನನ್ನು ಸೇರಿಕೊಂಡಿದ್ದಾರೆ. ಈ ಪತ್ರವನ್ನು ಬರೆಯುವ ಉದ್ದೇಶವೆಂದರೆ, ನಾನು ಬದುಕಿ ಇದ್ದು ಕಂಪನಿ ಸರಕಾರದ ಸೇವೆ ಮಾಡಬಯಸಿ. ನಿಮ್ಮ ಭೆಟ್ಟಿಯನ್ನು ಯಾಚಿಸುತ್ತಿದ್ದೇನೆ. ಕರುಣಿಸಬೇಕು. –ಇತಿ. ಗೋವಿಂದರಾವ್ ರಾಜೇ ಘೋರ್ಪಡೆ, ಮುಧೋಳಕರ.

ಗೋವಿಂದರಾಯನು ಈ ಮೊದಲೇ ಏಕೆ ಬರಲಿಲ್ಲ? ಅದಕ್ಕೆ ಅವನು ಕೊಟ್ಟ ಕಾರಣವೆಂದರೆ: ತಾನು ಬ್ರಿಟಿಶರ ವಿರುದ್ಧ ಹೋರಾಡಿದ್ದನಾದ್ದರಿಂದ ಆಗ ಸಿಕ್ಕಿದ್ದರೆ ಗಲ್ಲಿಗೇರಿಸಬಹುದೆಂದೂ, ಇಂದಲ್ಲ ನಾಳೆ ಪೇಶ್ವೆಯವರು ಮತ್ತೆ ರಾಜ್ಯವನ್ನು ಮರಳಿ ಪಡೆಯಬಹುದೆಂದೂ ಎಣಿಸಿ, ಉತ್ತರ ದೇಶದಲ್ಲಿ ಗೋಸಾಯಿಯ ವೇಷದಲ್ಲಿ ಕಾಲ ಕಳೆದನಂತೆ.



ಇತ್ತ ಅವನು ಕಣ್ಮರೆಯಾಗುತ್ತಲೂ ವೆಂಕಟರಾಯನ ಮಾರ್ಗ ಸುಲಭವಾಯಿತು. ದಕ್ಷಿಣ ಮರಾಟಾ ಸಂಸ್ಥಾನಿಕರನ್ನು ನಿಯಂತ್ರಿಸುತ್ತಿದ್ದ ಮುಂಬಯಿ ಗವರ್ನರ್ ಎಲ್‌ಫಿನ್‌ಸ್ಟನ್ನನ ಬಳಿಗೆ, ವೆಂಕಟರಾಯನ ಮಾವ ನಿಪ್ಪಾಣಿಕರ ಸಿದ್ದೋಜಿಯೇ ಹೋಗಿ ಮಾತನಾಡಿದನು. ಪೇಶ್ವೆಯವರೊಡನೆಯ ಈ ಕೊನೆಯ ಯುದ್ಧದಲ್ಲಿ, ನಿಪ್ಪಾಣಿಕರನು ತಟಸ್ಥನಾಗಿ ಉಳಿದಿದ್ದನು! ಆದ್ದರಿಂದ ಎಲ್‌ಫಿನ್‌ಸ್ಟನ್ ಅವನ ಮಾತನ್ನು ತೆಗೆದುಹಾಕುವುದು ಸಾಧ್ಯವೇ ಇದ್ದಿಲ್ಲ. ವೆಂಕಟರಾಯನ ಪಟ್ಟಬಾಧ್ಯತೆಯನ್ನು ಮನ್ನಿಸಿ ಇತರ ಸಂಸ್ಥಾನಿಕರೊಡನೆ ಆದಂತೆ ಎಲ್‌ಫಿನ್‌ಸ್ಟನ್ ಒಪ್ಪಂದಮಾಡಿಕೊಂಡನು. ಜಾನಕಿಯು ಚಿಕ್ಕೋಡಿ ತಾಲೂಕಿನ ಮಂಜೇರಿಯಲ್ಲಿ ತವರನ್ನು ಸೇರಿದಳು. ಸಾತಾರೆ ರಾಜನ ಮಧ್ಯಸ್ಥಿಕೆಯಿಂದ ಅವಳಿಗೆ ಪೋಟಗಿಯೂ ದೊರೆತಿತ್ತು.

ಗೋವಿಂದರಾಯನು ಬಂದ ಸುದ್ದಿಯನ್ನು ತಿಳಿದು, ಅವನನ್ನು ಮೊದಲು ಸಂಧಿಸಿದವಳು ಅವನ ತಂಗಿ ಕುಂದಾಬಾಯಿ. ಅವಳ ಭೆಟ್ಟಿ ಆದದ್ದು ಪಂಢರಪುರದಲ್ಲಿ. ಆ ಕೂಡಲೇ ಜಾನಕಿಗೂ ಹೇಳಿ ಕಳುಹಿಸಲಾಯಿತು. ಈ ಕಾರಣದಿಂದ ಅವಳು ಪಂಢರಪುರಕ್ಕೆ ಹೋದ ವರ್ತಮಾನವು ವೆಂಕಟರಾಯನಿಗೆ ತಿಳಿಯುತ್ತಲೂ, ಅವಳ ಅಣ್ಣ ಸೀತೋಳೆಕರನಿಗೆ ಪತ್ರ ಬರೆದು ಅವಳನ್ನು ಹಿಂದೆ ಕರೆಸಿಕೊಳ್ಳಲು ಆಗ್ರಹ ತೊಟ್ಟನು. ಅವಳ ಗಂಡ, ತನ್ನ ಬಂಧು ಸತ್ತು ಹೋಗಿರುವಾಗ, ಅವನ ನಾಮಧಾರಿಯನ್ನು ಇವಳು ಕೂಡಿಕೊಳ್ಳುವುದು, ಮುಧೋಳಕರ ಮನೆತನಕ್ಕೇ ದೊಡ್ಡ ಅವಮರ್ಯಾದೆಯ ವಿಷಯವಲ್ಲವೆ?

ಆದರೂ ಗೋವಿಂದರಾಯನು ಮರಳಿ ಬಂದು ಚಿಂಚೋಳಿಯಲ್ಲಿ ವಾಸವಾಗಿರುವನೆಂಬ ಸುದ್ದಿ ಮುಧೋಳ ಸಂಸ್ಥಾನದಲ್ಲಿ ಹಬ್ಬಿತು. ಮುಖ್ಯ ಪ್ರಶ್ನೆ–ಅವನೇ ಗೋವಿಂದರಾಯನೇ, ಎಂಬುದಾಗಿತ್ತು. ವೆಂಕಟರಾಯನೂ ಬಕ್ಕಾಬಾಯಿಯೂ ಇದಕ್ಕಾಗಿ ತಮ್ಮ ಅರಮನೆಯಲ್ಲಿಯ ಪರಿಚಿತರನ್ನು ಚಿಂಚೋಳಿಗೆ ಕಳಿಸಿಕೊಟ್ಟರು. ಹಾಗೆ ಹೋದ ೮–೧೦ ಜನರೂ ಆತ ನಿಜ ಗೋವಿಂದನೇ ಎಂದು ತಿಳಿಸಿದರು! ಅಪ್ಪಾಜಪ್ಪ ಎಂಬ ಕಾರಭಾರಿಯು ಅಲ್ಲಿಗೆ ಹೋಗಿ ಬಂದು "ಅದೇ ನಿಲುವು. ಸ್ವಲ್ಪ ಮೈ ಬಂದಿದೆ ಮಾತ್ರ. ಅದೇ ದಟ್ಟ ಕೂದಲು, ಅದೇ ದುಂಡು ಮುಖ," ಎಂದು ಹೇಳಿದನು. ಸೈದಾಪುರ ಪೇಟೆಯ ಬಸಪ್ಪನ ಮಗ ಬಸಲಿಂಗಪ್ಪ ಎಂಬಾತ ಒಂಬತ್ತು ದಿನ ಅಲ್ಲಿ ಕಳೆದಿದ್ದಾಗ ಗೋವಿಂದರಾಯನು ಅವನ ತಂದೆ, ಇತರ ಸಂಬಂಧಿಕರ ಹೆಸರನ್ನು ತಾನಾಗಿ ಹೇಳಿದ್ದಲ್ಲದೆ, ಅವರ ಯೋಗಕ್ಷೇಮವನ್ನು ವಿಚಾರಿಸಿದ್ದನಂತೆ.

ರಾಣೋಜಿ ಸಿಂಧೆ ಅರಮನೆಗೆ ಬಟ್ಟೆಗಳನ್ನು ಪೂರೈಸುವ ವ್ಯಾಪಾರಿ. ಅವನನ್ನು ಕಂಡೊಡನೆ ಗೋವಿಂದರಾವ "ಕಾಯ್ ರಾಣೋಜಿ" ಎಂದು ಗುರುತು ಹಿಡಿದು ಮಾತನಾಡಿಸಿದನಂತೆ. ಹಿಂದಿನ ಲೇವಾದೇವಿಯನ್ನೂ ಪ್ರಸ್ತಾಪಿಸಿದನಂತೆ, ಮುಧೋಳದ ಸುಪ್ರಸಿದ್ಧ ಬಕ್ಷಿ ಮನೆತನದ ಪಾಂಡುರಂಗರಾಯನೆಂಬವನೂ ಗೋವಿಂದರಾಯನೊಟ್ಟಿಗೆ ನಾಗ ಬಸಲಿಂಗಯ್ಯನವರ ಶಾಲೆಯಲ್ಲಿ ಕಲಿತವ. ಅವನೂ ಸ್ಥಿರೀಕರಿಸಿದ. ಬಕ್ಕಾದೇವಿಯ ಕಳವಳ ಹೇರತೀರದು. ಆಕೆ ಅರಮನೆಯ ಅಡಿಗೆಯವನನ್ನೇ ಕಳಿಸಿ, ಗೋವಿಂದರಾಯನ ಮೊಣಕಾಲಿನ ಮೇಲೆ ಇರುವ ಮಚ್ಚೆಯನ್ನು ನೋಡಿ ಬರಲು ಹೇಳಿದಳು. ಅಡಿಗೆಯವನು, ಅದು ಇದೆಯೆಂದೇ ಬಂದು ತಿಳಿಸಿದನು. ಇದೇ ಪ್ರಕಾರ ತೋಟಿಗ, ಕಿರಾಣಿ ಸಾಮಾನಿನ ವಾಣಿ. ಇವರೂ ಆತ ನಿಜವಾಗಿಯೂ ಗೋವಿಂದರಾಯನೇ ಎಂದು ಹೇಳಿದರು, ಸತ್ತುಹೋಗಿದ್ದ ಗೋವಿಂದರಾಯ ಈತನಾಗಿದ್ದರೆ, ಅದು ಪರಕಾಯ ಪ್ರವೇಶವೇ ಇರಬೇಕು ?

ಆದರೂ ಇದರ ಬೊಬ್ಬಾಟವಾದರೆ ತನ್ನ ಮಗನ ಪಟ್ಟಕ್ಕೆ ಸಂಚಕಾರ ಬರಬಹುದೆಂದು ಆಕೆ ಹೆದರಿದಳು. ಚಿಂಚೋಳಿಗೆ ಹೋಗಿ ಬಂದವರಾರೂ ನಿಜತ್ವದ ವಿಷಯವನ್ನು ಬಾಯಿಬಿಡಕೂಡದೆಂದು ಕಟ್ಟು ಮಾಡಿದಳು. ವೆಂಕಟರಾಯನು ಸಂಸ್ಥಾನದಲ್ಲಿ ಯಾರೂ ಈ ವಿಷಯವನ್ನು ಎತ್ತಬಾರದೆಂದು ಡಂಗುರ ಸಾರಿಸಿದನು.

ಈ ವೇಳೆಗೆ ಗೋವಿಂದರಾಯನು ಚಿಂಚೋಳಿಯಿಂದ ಪುಣೆಗೆ ಬಂದನು. ಅಲ್ಲಿ ಇದ್ದ ಕಕ್ಕಜ್ಜ (grand-unale) ಮಹರಾವ್ ಅವ

ರಿಗೂ ವೆಂಕಟರಾಯನಿಗೂ ಈ ಮೊದಲು ಆಸ್ತಿಯ ಬಗ್ಗೆ ಜಗಳವಾಗಿತ್ತು. ಗೋವಿಂದ ರಾಯನ ಸೋದರಿ, ಬಡೋದೆಯಲ್ಲಿದ್ದ ಬಂಧು-ಇತರ ೩೦-೪೦ ಜನ ಸಂಬಂಧಿಕರು, ಸರದಾರರು ಪುಣೆಯಲ್ಲಿ ಜೊತೆಗೂಡಿದರು. ಹೇಗೂ ಅವರದೇ ವಾಡೆಯೇ ಇತ್ತಲ್ಲ. ಅದರ ಕೀಲಿ ಮುರಿದು, ಪುಣೆಯಲ್ಲಿಯೇ ಇರತೊಡಗಿದರು.

ಇತ್ತ ಧಾರವಾಡದಲ್ಲಿ ಪೋಲಿಟಿಕಲ್ ಏಜಂಟ್ ಟಿ.ಎಚ್. ಬಾಬರ್ ಈ ವಿಷಯದಲ್ಲಿ ವಿಚಾರಣೆಗೆಂದು ಸೊಂಡೂರಿನ ನರಸಿಂಗರಾವ್ ಎಂಬವನನ್ನು ನಿಯಮಿಸಿದನು, ಅವನು ಮುಧೋಳ ಪುಣೆಗಳಿಗೆ ಹೋಗಿ, ಗುಟ್ಟಾಗಿ ವಿಚಾರಿಸಿ, ಈಗ ದೃಶ್ಯನಾಗಿರುವ ವ್ಯಕ್ತಿ ನಿಜ ಗೋವಿಂದನೇ ಎಂದು ವರದಿಮಾಡಿದನು.

ಇದೆಲ್ಲದರ ಪರಿಣಾಮವೆಂದರೆ ಗವರ್ನರ್ ಎಲ್‌ಫಿನ್‌ಸ್ಟನ್ ತಳೆದ ಅನುಕೂಲಾಭಿಪ್ರಾಯ. ವೆಂಕಟರಾಯನೊಂದಿಗೆ ಈಗಾಗಲೇ ಒಪ್ಪಂದ ಮಾಡಿಕೊಂಡಿದ್ದ ಸಂಸ್ಥಾನವನ್ನು ಮರಳಿಕೊಡಿಸುವ ವಿಚಾರವನ್ನೇನೂ ಆತ ಇಟ್ಟುಕೊಂಡಿದ್ದಿಲ್ಲವಾದರೂ ಆಸ್ತಿಯಲ್ಲಿ ಪಾಲು ಕೊಡಿಸಬೇಕೆಂದು ಯೋಚಿಸಿದ್ದನು. ಮೇಲೆ ಕಾಣಿಸಿದ ಗೋವಿಂದರಾಯನ ಮನವಿಗೆ ಉತ್ತರರೂಪವಾಗಿ, ಭೆಟ್ಟಿಯನ್ನು ದಯಪಾಲಿಸಲು ಸಿದ್ಧನಾದನು. ಹಾಗೆ ಪುಣೆಯ ಒಂದು ಸಮಾರಂಭದಲ್ಲಿ, ಕೊಲ್ಲಾಪುರದ ಮಹಾರಾಜನು ಗೋವಿಂದರಾಯನ ಪರಿಚಯವನ್ನೂ `ಮಾಡಿಕೊಟ್ಟನು. ಆಗ ಎಲ್‌ಫಿನ್‌ಸ್ಟನ್ "ಇನ್ನೊಮ್ಮೆ ಭೆಟ್ಟಿಯಾದಾಗ ವಿವರವಾಗಿ ಚರ್ಚಿಸೋಣ. ಹೇಳಿ ಕಳಿಸುವೆ" ಎಂದು ಆಶ್ವಾಸನವಿತ್ತಿದ್ದ. ಆದರೆ ಕೈಗೆ ಬಂದ ತುತ್ತು ಬಾಯಿಗೆ ಬರಲೇ ಇಲ್ಲ.

ಅದರ ಕಾರಣ ಬಾಳಾಜಿಪಂತ ನಾತೂ ಎಂಬ ವ್ಯಕ್ತಿ. ಅವನಿಗೂ ಎಲ್‌ಫಿನ್‌ಸ್ಟನ್ನನಿಗೂ ತೀರ ಹಳೆಯ ಪರಿಚಯ. ಆ ಪರಿಚಯದ ಉಪಯೋಗ ಮಾಡಿಕೊಳ್ಳಬೇಕೆಂದು ಪೇಶ್ವೆ ಅವನನ್ನು ತನ್ನ ದರಬಾರಿನಲ್ಲಿ ನಿಯಮಿಸಿಕೊಂಡ. ಈ ನೇಮಣೂಕಿಯ ಪ್ರಯೋಜನವನ್ನು ಬ್ರಿಟಿಶರೂ ಗುಟ್ಟಾಗಿ ಪಡೆಯಬೇಕೆಂದರು. ಹೀಗೆ ಉಭಯ ವೇತನನಾಗಿ (Double Agent) ಗೂಢಚಾರ ವೃತ್ತಿಯಲ್ಲಿ ತೊಡಗಿದ. ಇವನಿಂದಾಗಿಯೇ ಮರಾಟರ ಯುದ್ಧ ಯೋಜನೆಯ ವಿವರಗಳು ಬ್ರಿಟಿಶರಿಗೆ ತಿಳಿದು ಬಂದಿದ್ದುವು. ಇಂಥ ವ್ಯಕ್ತಿ ವೆಂಕಟರಾಯನ ಪರವಾಗಿ ಮಾತನಾಡಿ, ಗೋವಿಂದ ರಾಯನು ನಾಮಧಾರಿ ಎಂದು ಹೇಳಿದ್ದುದನ್ನು ಎಲ್‌ಫಿನ್‌ಸ್ಟನ್ ಮಾನ್ಯ ಮಾಡಿದುದು ಕ್ರಮಪ್ರಾಪ್ತವೇ ಆಗಿತ್ತು. ಇದನ್ನು ಆಗುಮಾಡಿಸಲು, ಮುಧೋಳ ಸಂಸ್ಥಾನಿಕನಿಂದ ಅವನು ೫೦ ಸಾವಿರ ರೂಪಾಯಿ ಲಂಚ ತಿಂದನೆಂಬುದಾಗಿಯೂ, ಅಷ್ಟು ಹಣ ದೊರಕಿಸಲು ವೆಂಕಟರಾಯನು ಮುಂಗಡ ಭೂಕಂದಾಯವನ್ನು ವಸೂಲು ಮಾಡಿದ್ದಾಗಿಯೂ ವದಂತಿ ಕೇಳಬಂದಿತು.

ಹೀಗಾಗಿ ಎಲ್‌ಫಿನ್‌ಸ್ಟನ್ ಗೋವಿಂದ ರಾಯನನ್ನು ಕಾಣಲಿಲ್ಲ. ಇಷ್ಟೇ ಅಲ್ಲ ಅವನ ಮನವಿಗೆ ಉತ್ತರರೂಪವಾಗಿ ಧಾರವಾಡದಲ್ಲಿದ್ದ ಪೋಲೀಟಿಕಲ್ ಏಜಂಟನನ್ನು ಕಾಣ

---




"...ಜನ ಇವರ 'ಕೋಗಿಲೇಂ'ತ ಕರಿಯೋದು ಇವರ ಕಂಠವನ್ನು ಕೋಗಿಲೆಗೆ ಹೋಲಿಸಿ" ಅಂತ ತಿಳ್ಕೊಂಡಿದ್ದೆ. ಆದರೆ ನನ್ನ ಅಭಿಪ್ರಾಯ ತಪ್ಪೂಂತ ಗೊತ್ತಾಗಿದ್ದು ಇವರನ್ನು ನೋಡಿದ ಮೇಲೆ..."

ಬೇಕೆಂದು ತಿಳಿಸಲಾಯಿತು. ಜೊತೆಗೆ ವೆಂಕಟರಾಯನಿಂದ ತಕರಾರು: ಪುಣೆಯಲ್ಲಿಯ ತನ್ನ ವಾಡೆಯ ಕೀಲಿ ಮುರಿದು ಅನಧಿಕೃತವಾಗಿ ಪ್ರವೇಶ ಮಾಡಿದನೆಂದು! ಇದರ ವಿಚಾರಣೆ ನಡೆಯಿತು. ಆ ಕುರಿತು ಪುಣೆಯ ಕಲೆಕ್ಟರನ ವರದಿ ಇಂತಿದೆ:

**ಚೀಫ್ ಸೆಕ್ರೆಟರಿ ಟು ಗವರ್ನಮೆಂಟ್, ಪುಣೆ-ಇವರ ಸನ್ನಿಧಿಗೆ:**

**ಗೋವಿಂದರಾವ್ ರಾಜೆ ಘೋರ್ಪಡೆ-ಎಂದು ಕರೆದುಕೊಳ್ಳುವ ವ್ಯಕ್ತಿಯೊಬ್ಬನು ವೆಂಕಟರಾವ್ ಘೋರ್ಪಡೆ ಇವರ ಪುಣೆಯಲ್ಲಿಯ ವಾಡೆಯಲ್ಲಿ ಬೇಕಾಯದೇಶೀರ ಕೀಲಿ ಮುರಿದು ಪ್ರವೇಶ ಮಾಡಿದನೆಂಬ ತಕರಾರು ಬಂದಿತ್ತು. ಆ ಪ್ರಕಾರ, ಅವನಿಗೆ ೨೦ನೇ ತಾರೀಖಿಗೆ ಹಾಜರಾಗಲು ಹೇಳಿ ಕಳಿಸಿತು. ತನಗೆ ಜ್ವರ ಬರುತ್ತಿವೆಯೆಂದು ಹೇಳಿ ಬರಲಿಲ್ಲ. ಅವನ ಪ್ರವಾಸಾನುಕೂಲತೆಗಾಗಿ ಮೇಣೆಯನ್ನು ಕಳಿಸಿ, ಬರಲೇಬೇಕೆಂದು ತಿಳಿಸಿದೆ. ಆಗ ಅವನು ಕುದುರೆಯನ್ನೇರಿ ಬಂದನು. ಹೂವಮಾಲೆಯಿಂದ ಅಲಂಕೃತನಾಗಿದ್ದ ಆತನು ಆರೋಗ್ಯವಂತನಾಗಿಯೇ ಕಂಡನು.**

**ವೆಂಕಟರಾವ್ ಘೋರ್ಪಡೆಯವರ ತಕರಾರು ಬಂದಾಗಲೇ ಇವನಿಗೆ ವಾಡೆಯನ್ನು ತಿಂಗಳೊಳಗಾಗಿ ತೆರವು ಮಾಡಿ, ಧಾರವಾಡಕ್ಕೆ ಹೋಗಲು ಹೇಳಿದ್ದರೂ ಹಾಗೆ ಮಾಡದಿದ್ದುದರಿಂದ, ಅವನನ್ನು ಶನಿವಾರ ವಾಡೆಯಲ್ಲಿ ಸ್ಥಾನಬದ್ಧತೆಯಲ್ಲಿ ಇರಿಸಿದೆ, ಮತ್ತು ನಾಮಧಾರಿಯಾಗಿರುವ ಅವನನ್ನು ಗೋವಿಂದರಾಯ ಎಂದು ತಿಳಿದು ಯಾರೂ ಯಾವದೇ ರೀತಿಯ ಸಹಾಯ ಮಾಡಕೂಡದು ಎಂದು ಪುಣೆ ನಗರದಲ್ಲಿ ಡಂಗುರ ಸಾರಿಸಿದ್ದೇನೆ. ಈ ವಿಷಯವನ್ನು ಗವರ್ನರ್ ಸಾಹೇಬರ ಗಮನಕ್ಕೆ ತರಬೇಕಾಗಿ ಬಿನ್ನಹ.**

**ಅವನನ್ನು ಕರೆಯಿಸಿದ ದಿನ, ಅವನ ನಿಕಟ ಪರಿಚಯದ ಹಲವಾರು ಜನರು ಕಚೇರಿಯಲ್ಲೇ ಇದ್ದರು ಅಲ್ಲಿ ಇದ್ದವರಲ್ಲಿ ಒಬ್ಬನ ಗುರುತನ್ನು ಅವನಿಗೆ ಹೇಳಲಾಗಲೇ ಇಲ್ಲ. ಮೇಲಾಗಿ ಅವನ ನಡಿಗೆಯ ರೀತಿಯು ಬೇರೆಯೇ ಇದ್ದಿತಂತೆ. ನಮ್ಮ ಮಾತುಕತೆ ನಡೆದಾಗ ಮಫ್ಲರಿನಿಂದ ಮುಖದ ಬಹು ಭಾಗವನ್ನು ಮುಚ್ಚಿಕೊಂಡೇ ಇದ್ದನು- "ನೀನು ನಿಜವಾದ ಗೋವಿಂದರಾಯನೇ ಆಗಿದ್ದರೆ, ಧಾರವಾಡಕ್ಕೆ ಹೋಗಿ ಪುರಾವೆ ಕೊಟ್ಟು ಸಿದ್ಧಪಡಿಸಲಿಲ್ಲವೇಕೆ?" ಎಂದು ಅವನನ್ನು ಕೇಳಿದೆ. ಒಂದು ವೇಳೆ ಹಾಗೆ ಸಿದ್ಧವಾಗದೇ ಹೋದರೆ, ವಂಚಕನೆಂದು ನಿರ್ಣಯಿಸಿ ಕಠಿಣಶಿಕ್ಷೆ ವಿಧಿಸಬೇಕಾಗುವದೆಂದು ಎಚ್ಚರಿಸಿದ್ದೇನೆ.**

ತನ್ನ ನಿಜತ್ವದ ವಿಚಾರಣೆ ಪುಣೆಯಲ್ಲಿಯೆ ಆಗಬೇಕು, ಧಾರವಾಡದಲ್ಲಿ ಗುರುತು ಹೇಳುವವರು ಯಾರೂ ಇಲ್ಲ ಎಂದು ಗೋವಿಂದರಾಯನು ಮನವಿ ಸಲ್ಲಿಸಿದಾಗ್ಯೂ ಅದಕ್ಕೆ ಗಮನ ಕೊಟ್ಟಿರಲಿಲ್ಲ. ತನ್ನ ಪರಿವಾರವನ್ನು ಕಟ್ಟಿಕೊಂಡು ಅಲ್ಲಿಗೆ ಹೋಗಲೇಬೇಕಾಯಿತು. ಅವನ ವಿಚಾರಣೆಯನ್ನು ನಡೆಸಿದವ, ಅಸಿಸ್ಟೆಂಟ್ ಕಲೆಕ್ಟರನಾಗಿದ್ದ ವಾಲ್ಟರ್ ಎಲಿಯಟ್.* ಅವರ ವರದಿಯನ್ನು ಗವರ್ನರನಿಗೆ ಕಳಿಸಲಾಯಿತು. ಆತನೇ ಗೋವಿಂದರಾವ್, ಎಂದು ಹೇಳಲು ಸಾಕಷ್ಟು ಪುರಾವೆಗಳಿಲ್ಲ. ಎಂಬುದು ಅದರ ಮಥಿತಾರ್ಥ! ಪುಣೆಯಲ್ಲಿ ಅಕ್ರಮ ಪ್ರವೇಶದ ಆರೋಪವಿದ್ದಿತಷ್ಟೆ. "ಕೀಲಿಯನ್ನು ಮುರಿದವ, ನಾನು" ಎಂಬುದಾಗಿ ಮಹದರಾವ್ ಹೇಳಿಕೆ ಕೊಟ್ಟನಾದ್ದರಿಂದ, ಅಷ್ಟಕ್ಕೇ

---

* ಇವನು ಕಿತ್ತೂರ ಯುದ್ಧದಲ್ಲಿ ಭಾಗವಹಿಸಿ, ಚೆನ್ನಮ್ಮ ರಾಣಿಯ ಸೆರೆಯಾಳಾಗಿದ್ದ. ಕನ್ನಡ ಪ್ರೇಮಿ. ಧಾರವಾಡ ನಗರದಲ್ಲಿ ಒಂದೂ ಕನ್ನಡ ಶಾಲೆ ಇರದಾಗ, ಸ್ವಂತ ವೆಚ್ಚದಿಂದ ಅಂಥ ಶಾಲೆ ಪ್ರಾರಂಭಿಸಿದ. ವಿದ್ವಾಂಸನೂ ಹೌದು. ಉತ್ತರ ಕರ್ನಾಟಕದ ಶಾಸನಗಳನ್ನು ಸಂಪಾದಿಸಿದ್ದಾನೆ. ಮದ್ರಾಸ ಗವರ್ನರನಾಗಿ ಸೇವಾನಿವೃತ್ತಿಯನ್ನು ಪಡೆದ.

ಅದನ್ನು ಕೈಬಿಡಲಾಯಿತು. ಎಲಿಯಟ್ಟನ ವರದಿಯ ಮೇಲೆ ಯಾವ ನಿರ್ಣಯವನ್ನೂ ಕೈಕೊಳ್ಳದೇ, ಒಂದು ವರ್ಷದ ವರೆಗೆ ವಿಷಯವು ನನೆಗುದಿಗೆ ಬಿದ್ದಿತು.

ಈ ಮಧ್ಯೆ ಎಲ್‌ಫಿನ್‌ಸ್ಟನ್ ನಿವೃತ್ತನಾಗಿ ಮಾಲ್ಕಮ್ ಗವರ್ನರನಾಗಿ ಬಂದನು. ಗೋವಿಂದ ರಾಯನ ಕಡೆಯ ನಿಸಪೋಲೆಗಳು ಬರುತ್ತಲೇ ಇದ್ದುದನ್ನು ಕಂಡು, ಮಾಲ್ಕಮ್ ಇದರ ಇತ್ಯರ್ಥಕ್ಕಾಗಿ ವಿಶಿಷ್ಟ ಮಾರ್ಗವೊಂದನ್ನು ಕೈಕೊಂಡನು. ಅದುವೆ ದಕ್ಷಿಣ ಮರಾಠಾ ಪ್ರದೇಶದ ಹಲವಾರು ಸಂಸ್ಥಾನಿಕರು, ಪ್ರಮು ಕರನ್ನೊಳಗೊಂಡ [illegible]. ಇವರಲ್ಲಿ ಜಮಖಂಡಿ, ಮಿರಜ, [illegible], ನಿಪ್ಪಾಣಿ– ಇವುಗಳ ಸಂಸ್ಥಾನಿಕರು ಇದ್ದು, ಸಾಂಗಲಿಯ ಚಿಂತಾಮಣಿರಾವ್ ಪಟವರ್ಧನರು ಮುಖ್ಯ [illegible]ರಾಗಿದ್ದರು. ಇವರೆಲ್ಲರನ್ನು ಜಮಾ ಯಿಸಿ, ಆ [illegible] [illegible] [illegible] ಸುವ ಕೆಲಸವನ್ನು, [illegible] [illegible] ನಿಗೆ ಒಪ್ಪಿಸಲಾಗಿತ್ತು.

ಪಂಚಾಯತಿಯು ಸೇರಿದ ದಿನಾಂಕವು ೧೮೨೯ನೆ ಇಸವಿಯ ಮೊದಲ ದಿನವಾಗಿದ್ದಿತು. ಸಂಜೆ ೪ ಗಂಟೆಗೆ ಸೇರಿದ ಸಭೆಯು ರಾತ್ರಿ ೧೧ಕ್ಕೆ ಮುಗಿಯಿತು. ಗೋವಿಂದರಾಯನ ನಿಜತ್ವ ವನ್ನು ತಿಳಿಯಲು ಆ ದಿನ ಕೇಳಿದ ಕೆಲವು ಪ್ರಶ್ನೆಗಳಿವು:

ಸಾಂಗಲಿಕರ: ನೀವು ನನ್ನನ್ನು ಮೊದಲು ಎಲ್ಲಿ ಭೆಟ್ಟಿಯಾಗಿದ್ದಿರಿ?

ಗೋವಿಂದರಾವ್: ಬ್ರಾಹ್ಮಣವಾಡಿಯಲ್ಲಿ ಎಂದು ಕಾಣುತ್ತದೆ.

ಸಾಂಗಲಿಕರ: ಬಾಪೂ ಗೋಖಲೆಯವರ ಸೊಸೆ ತನ್ನ ತರುಣ ಗಂಡ ಸತ್ತನೆಂದು, ಸಹಗಮನ ಮಾಡಿದಳು. ಅದು ಎಂದು?

ಗೋವಿಂದರಾವ್: ಸುದ್ದಿ ತಿಳಿದ ದಿನವೇ ಮಧ್ಯಾಹ್ನ ೩ ಗಂಟೆಗೆ.

*

ನಿಪ್ಪಾಣಿಯವರ ಸವಾಲು: ನಮ್ಮ ನಿಮ್ಮ ಬೀಗ ತನವಾದ ಮೇಲೆ ನಾನು ಒಂದು ಮೇಜವಾನಿ ಸಮಾರಂಭ ಮಾಡಿಸಿದ್ದೆ. ನೀವು ಬರಲಿಲ್ಲ. ಅದೇಕೆ?

ಗೋವಿಂದರಾವ್: ಅದರ ಕಾರಣ ನೆನಪಿಲ್ಲ.

*

ಸಾಂಗಲಿಕರ ಸಂಸ್ಥಾನಿಕನು ತನಗೆ ಕೊಟ್ಟಿದ್ದ ಮೇಲಿನ ಉತ್ತರಗಳೆರಡೂ ನಿಜವಲ್ಲ, ಎಂದು ತಿಳಿಸಿದರು. ಗೋವಿಂದರಾಯನಿಗೆ ಕುದುರೆಗಳ ಮೇಲೆ ಮೋಹವಿದ್ದು, ನಿಪ್ಪಾಣಿಕರರಲ್ಲಿದ್ದ ಕುದುರೆಯೊಂದನ್ನು ಕೇಳಿದ್ದನಂತೆ. ಇವರು ಕೊಟ್ಟಿ ರಲಿಲ್ಲವಾದ್ದರಿಂದ ಮೇಜವಾನಿಗೆ ಬರಲಿಲ್ಲ. ಈ ಒಳಗಿನ ಸಂಗತಿಯನ್ನು ಅವನು ಹೇಳಿಲ್ಲ ವೆಂಬುದಾಗಿ ನಿಪ್ಪಾಣಿಕರ ವಿವರಣೆ ಕೊಟ್ಟನು! ಇದೇ ರೀತಿಯ ಇನ್ನು ಹಲವು ಪ್ರಶ್ನೋತ್ತರ ಗಳಾದ ನಂತರ, ಗೋವಿಂದರಾಯನ ಹಸ್ತಾ ಕ್ಷರ ಪರೀಕ್ಷೆ ನಡೆಯಿತು. ಅವನು ತನ್ನ ತಂದೆಗೆ ೧೨ ವರ್ಷಗಳ ಹಿಂದೆ ಬರೆದಿದ್ದ ಒಂದು ಪತ್ರ ವನ್ನು ಓದಿ, ಅದನ್ನೇ ಈಗ ಬರೆಯಲು ಹೇಳ ಲಾಯಿತು. ಕೊನೆಯದಾಗಿ ಭಾಷಾ ಪರೀಕ್ಷೆ. ಕನ್ನಡದಲ್ಲಿ ಅವನಿಗೆ ಮರಾಠಿಯಷ್ಟೇ ಪರಿ ಶ್ರಮವಿದ್ದಿತು ಎಂಬ ಗ್ರಹಿಕೆಯಿಂದ, ಕನ್ನಡ ದಲ್ಲೂ ಕೆಲವು ಪ್ರಶ್ನೆಗಳನ್ನು ಕೇಳಲಾಯಿತು.

ಏಳು ತಾಸುಗಳ ಈ 'ವಿಚಾರಣೆ' ಮುಗಿ ಯುತ್ತ ಬಂದಾಗ, ಪಂಚಾಯತಿಯ ಪಕ್ಕಾರ– ಸಾಂಗಲಿಕರರ ಕಡೆಗೆ ಗೋವಿಂದರಾಯ ಒಂದು ಲಕೋಟೆಯನ್ನು ಕೊಡಹೋದರೆ, ಅದನ್ನು ನೋಡದೇನೆ "ವಿಚಾರಣೆ ಮುಗಿದು ಹೋಗಿದೆ" ಎಂದು ಹಾಗೆಯೇ ವಾಪಸು ಮಾಡಿದರಂತೆ, ಗೋವಿಂದರಾಯ ಮತ್ತು ಅವನ ಜೊತೆಗೆ ಬಂದ ವರು ಎದ್ದು ಹೋದ ಮೇಲೆ, ಗವರ್ನರ್ ಮಾಲ್ಕಮ್, ನೆರೆದಿದ್ದ ೧೦–೧೨ ಜನಪಂಚಾ ಯತದಾರರ ಅಭಿಪ್ರಾಯವೇನೆಂದು ಕೇಳಿದ. ಮೂವರು ಆ ಕ್ಷಣವೇ, ಆತ ನಾಮಧಾರಿ ಗೋವಿಂದರಾಯನೆಂಬುದಾಗಿ ಹೇಳಿದರು. ಉಳಿ ದವರು ಆ ಮೇಲೆ ಬರೆದು ತಿಳಿಸುತ್ತೇವೆ– ಎಂದರು.

ಕೆಲದಿನಗಳಾದ ಮೇಲೆ ಅಧಿಕೃತ ಜಾಹಿರ ನಾಮೆ ಹೊರಬಂದಿತು:

**ಎಲಿಯಟ್ ನಡೆಸಿದ ವಿಚಾರಣೆಯಿಂದಲೂ ಬೆಳಗಾಂವಿಯಲ್ಲಿ ನೆರೆದ ಸಂಸ್ಥಾನಿಕರು**

ಹಾಗೂ ಸರದಾರರ ಪಂಚಾಯತಿಯ ಅಭಿಪ್ರಾಯದ ಮೇರೆಗೂ, ಈಗ ಉತ್ತರಹಿಂದುಸ್ಥಾನದಿಂದ ಬಂದ ವ್ಯಕ್ತಿ ನಿಜ ಗೋವಿಂದರಾಯನಲ್ಲವೆಂದೂ ಸ್ಪಷ್ಟವಾಗುತ್ತದೆ. ಆದ್ದರಿಂದ ಈ ಕೆಳಗಿನಂತೆ ಹುಕುಮನ್ನು ಮಾಡಲಾಗಿದೆ

ನಾಮಧಾರಿ ಗೋವಿಂದರಾಯನು ಕೂಡಲೇ ಡೆಕ್ಕನ್ ಪ್ರದೇಶವನ್ನು ಬಿಟ್ಟು ಹೊರಟು ಹೋಗತಕ್ಕದ್ದು. ಮುಂದೆ ಎಂದೂ ಈ ಠಕ್ಕುತನ ತೋರಬಾರದು. ಹಾಗೆ ಮಾಡಿದ್ದಾದರೆ, ಸಾರ್ವಜನಿಕ ಶಾಂತಿಗೆ ಭಂಗತರುವ ಕಾರಣದಿಂದ ಅವನನ್ನು ಶಿಕ್ಷಿಸಲಾಗುವುದು. ಅವನಿಗೆ ಈ ಕಾರ್ಯದಲ್ಲಿ ಪ್ರತ್ಯಕ್ಷವಾಗಿಯಾಗಲೀ, ಪರೋಕ್ಷವಾಗಿಯಾಗಲೀ ಯಾರಾದರೂ ಬೆಂಬಲಿಸಿದರೆ ಅವರನ್ನು ಶಿಕ್ಷೆಗೆ ಗುರಿಪಡಿಸಲಾಗುವುದು. ಇಷ್ಟರವರೆಗಿನ ಈ ವ್ಯವಹಾರದಲ್ಲಿ ಶಾಂತತಾಭಂಗವಾಗಿಲ್ಲವಾದ್ದರಿಂದ ಇವರು ಯಾರ ಮೇಲೆಯೂ ಕ್ರಮವನ್ನು ಕೈಕೊಳ್ಳುವುದಿಲ್ಲ.

ಘೋರ್ಪಡೆ ಮನೆತನದ ಕೆಲವು ಹೆಣ್ಣುಮಕ್ಕಳು ತಮ್ಮ ಅಜ್ಞಾನದಿಂದಲೂ, ವಂಚನೆಯಿಂದಲೂ, ಈ ನಾಮಧಾರಿಯ ಹಿಂದೆ ಇದ್ದಾರೆ. ಅವರು ತಂತಮ್ಮ ಸ್ಥಳಗಳಿಗೆ ಹೋಗಬಹುದು. ಇಲ್ಲವೇ ಅವನನ್ನೇ ಅನುಸರಿಸಿಕೊಂಡು ಇರಬಹುದು. ಎರಡನೆಯ ದಾರಿಯನ್ನು ಅನುಸರಿಸಿದ್ದೇ ಆದರೆ ಅವರು ಡೆಕ್ಕನ್‌ಗೆ ಮರಳಿ ಬರಲಾರರು. ಒಂದು ವೇಳೆ ಪಶ್ಚಾತ್ತಾಪ ಹುಟ್ಟಿ ಬರುವುದಾದರೆ ಆ ಕುಟುಂಬದ ಯಜಮಾನನ ಮುಖಾಂತರ ಸರಕಾರದ ಅನುಮತಿಯನ್ನು ಪಡೆಯತಕ್ಕದ್ದು.

ನಾಮಧಾರಿ ಗೋವಿಂದರಾಯನು ಎರಡು ತಿಂಗಳೊಳಗಾಗಿ ಇಲ್ಲಿಂದ ಹೊರಡತಕ್ಕದ್ದು. ಅವನು ಗುಟ್ಟಾಗಿ ಇಲ್ಲಿ ಉಳಿದದ್ದಾದರೆ, ಈ ವಿಷಯ ತಿಳಿದವರು ಸರಕಾರಕ್ಕೆ ಮಾಹಿತಿ ಕೊಡಬೇಕಾಗಿ ಈ ಮೂಲಕ ಕೋರಿದೆ.

ಈ ಹೆಣ್ಣುಮಕ್ಕಳ ವಿಷಯದಲ್ಲಿ ಕಂಪನಿ ಸರಕಾರವು ತನ್ನದೇ ರೀತಿಯಲ್ಲಿ ಇನ್ನಷ್ಟು ಅನುಕಂಪೆಯನ್ನು ತೋರಿತು. "ಈತ ನಾಮಧಾರಿ ಎಂದು ಸಿದ್ಧವಾಗಿಬಿಟ್ಟಿದೆ. ಅವನನ್ನು ಬಿಡುವಿರೊ? ಅಥವಾ ಅವನೊಟ್ಟಿಗೆ ಹೋಗುವಿರೊ?" ಎಂಬುದಾಗಿ ಅವರೆಲ್ಲರಿಗೆ ಪತ್ರ ಬರೆದು ಕೇಳಿಕೊಂಡು, ಗವರ್ನರನಿಗೆ ತಿಳಿಸಲಾಯಿತು. ಜಾನಕೀಬಾಯಿಯನ್ನು ಕೇಳಿದಾಗ ಆಕೆ, ಹಿಂತಿರುಗಲು ನಿರಾಕರಿಸಿದ್ದರ ಕಾರಣ, ಅವಳಿಗೆ ಮೈದುನ ಲಕ್ಷ್ಮಣರಾಯನ ಬೆಂಬಲವಿದೆ ಎಂದು ವರದಿಹೋಯಿತು.

ಇತ್ತ ಗೋವಿಂದರಾಯ ತನ್ನ ಕೇಸಿನ ಪುನರ್ವಿಚಾರಣೆಯಾಗಬೇಕೆಂದು ಪತ್ರ ಬರೆದನು. "ಅದು ಸಾಧ್ಯವಿಲ್ಲ" ಎಂದು ತಿಳಿಸಲಾಯಿತು. "ಈ ನಿರ್ಣಯದ ವಿರುದ್ಧ ನಾನು ಅಪೀಲು ಮಾಡಬೇಕು, ಆದ್ದರಿಂದ ನಿಮ್ಮ ಬೆಳಗಾಂವಿ ವಿಚಾರಣೆಯ ಉತಾರನ್ನಾದರೂ ಕೊಡಿರಿ" ಎಂದು ಗೋವಿಂದರಾವ್ ಬರೆದುದಕ್ಕೆ ಸರಕಾರ ಮೌನ ತಳೆಯಿತು.

ಒಂದೆರಡು ವರ್ಷ ಹೀಗೆಯೆ ಉರುಳಿದುವು. ಮೇ ೧೮೩೧ ರಲ್ಲಿ ಗವರ್ನರರ ಬದಲಿಯಾಗಿ ಅರ್ಲ್ ಆಫ್ ಕ್ಲೇರ್ ಗವರ್ನರ್ ಆಗಿ ಬಂದ. ಗೋವಿಂದರಾವ್ ಘೋರ್ಪಡೆಗೆ ಆಸೆ ಮೊಳೆಯಿತು. ಭೆಟ್ಟಿಯನ್ನು ದಯಪಾಲಿಸಬೇಕಾಗಿ ಪತ್ರ ಬರೆದನು. "ಸಾಧ್ಯವಿಲ್ಲ" ಎಂದನು ಕ್ಲೇರ್. ಎಲ್ಲ ಮನಪಿಗಳನ್ನೂ ಹೊಸ ದಾಖಲೆಗಳನ್ನೂ ಜೊತೆಗಿರಿಸಿ ಮತ್ತೊಂದು ಪತ್ರ ಬರೆದನು. "ಈಗ ಕೈಕೊಂಡ ತೀರ್ಪು ಅಂತಿಮವಾದುದು. ಅವರ ಪುನರ್ವಿಚಾರಣೆ ಸಾಧ್ಯವಿಲ್ಲ" ಎಂದು ತಿಳಿಸಿತು. ಸರಕಾರ. "[illegible] ನಾನು [illegible] ಬೇರಾವುದಿದೆ? ನನಗೆ ರಾಜ್ಯವಾಗಲೀ, ಆಸ್ತಿಯಾಗಲೀ ಸಿಕ್ಕದಿದ್ದರೆ ಹೋಗಲಿ, ನಾನು ಘೋರ್ಪಡೆ ಮನೆತನದವನೇ ಅಲ್ಲವೆಂಬ ಘೋರ ಅಪಮಾನದಿಂದ ನನ್ನ ಬಾಳೇ ಹೀನಾಯವಾಗಿದೆ. ಉಪಜೀವನಕ್ಕೆ ಇನ್ನೊಬ್ಬರ ಮೇಲೆ ಆದೆಷ್ಟು ದಿನ ಅವಲಂಬಿಸಬೇಕು? ಸಾಲವೂ ಹುಟ್ಟುವಂತಿಲ್ಲ, ಮಾನವೀಯ ದೃಷ್ಟಿಯಿಂದಲಾದರೂ ಇದರ ಪುನರ್ವಿಚಾರಣೆಯಾಗಲಿ" ಎಂದು ಬರೆದನು.

ಅದಕ್ಕೆ ದಯಾಳು ಸರಕಾರ ಉತ್ತರ ಕೊಟ್ಟಿತು. "ಕ್ಷಮಿಸಬೇಕು. ಇತ್ಯರ್ಥವಾದ ವಿಷಯವನ್ನು ಮತ್ತೆ ಎತ್ತಿಕೊಳ್ಳಲಾರೆವು. ಇದನ್ನು ಒಂದಲ್ಲ ಹಲವು ಬಾರಿ ಹೇಳಿಯಾಗಿದೆ. ಇನ್ನು ಮೇಲೆ ಉತ್ತರವನ್ನೂ ಕೊಡಲಾಗುವುದಿಲ್ಲ."

ಆಗಿನ ನಿಯಮದ ಪ್ರಕಾರ, ಪ್ರತಿಯೊಂದು ಕಾಗದ ಪತ್ರವನ್ನು ಲಂಡನ್ನಿನ ಕೋರ್ಟ್ ಆಫ್ ಡೈರೆಕ್ಟರ್ಸ್ ಕಡೆಗೆ ಕಳಿಸಲಾಗುತ್ತಿತ್ತು. ನಾಮಧಾರಿ ಗೋವಿಂದರಾವ್ ಘೋರ್ಪಡೆಯ ಕಾಗದ ಪತ್ರಗಳನ್ನು ಪರಿಶೀಲಿಸಿದ ಅನಂತರ ಅವರು "ನೀವು ಈ ವಿಷಯದಲ್ಲಿ ಅನುಸರಿಸಿದ ಕ್ರಮ, ಕೈಕೊಂಡ ನಿರ್ಣಯ ಸರಿಯಾದದ್ದೇ. ಆದರೂ ಪಂಚಾಯತಿಯ ಸದಸ್ಯರಲ್ಲಿ ಅವನನ್ನು ಈ ಮುಂಚೆ ನೋಡದೇ ಇದ್ದವರು ಎಷ್ಟು ಜನ? ಅವನು ಪಂಚಾಯತಿಯ ಕೊನೆಯ ಗಳಿಗೆಯಲ್ಲಿ ತೋರಿಸಬಯಸಿದ ಕಾಗದವನ್ನು ನೋಡಬೇಕಾಗಿತ್ತು" ಎಂಬುದಾಗಿ, ಎಳೆ ಮಕ್ಕಳ ಕೃತಿಗಳನ್ನು ವ್ಯಾಖ್ಯಾನಿಸುವ ಮುದುಕರ ಧಾಟಿಯಲ್ಲಿ ಬರೆದು ತಿಳಿಸಿತು. ಆ ಕೂಡಲೇ ಎಲ್ಲ ಪಂಚಾಯತಿ ಸದಸ್ಯರಿಗೆ ಪತ್ರ ಹೋಯಿತು. "ನಿಮ್ಮಲ್ಲಿ ಯಾರು ಯಾರಿಗೆ ಎಷ್ಟರ ಮಟ್ಟಿಗೆ ಘೋರ್ಪಡೆ ಗೋವಿಂದ ರಾಯನ ಪರಿಚಯವಿದ್ದಿತು?" ಎಂಬುದಾಗಿ. ಹಾಗೆ ಬಂದ ಉತ್ತರಗಳನ್ನು ಲಂಡನ್ನಿಗೆ ರವಾನಿಸಿ. ಈ ಪ್ರಕರಣದ 'ಪೋಸ್ಟ ಮಾರ್ಟೆಮ್' ಕೆಲಸವನ್ನು ಮುಗಿಸಲಾಯಿತು!

೨

ಈ ಪ್ರಕಾರವಾಗಿ ಮುಂಬಯಿ ಸರಕಾರವು ಅನುಸರಿಸಿದ ಕ್ರಮವು ಸರಿಯೆಂಬುದಾಗಿ, ಶಿಫಾರಸು ಸಿಕ್ಕದ್ದೇನೋ ಹೌದು. ಆದರೆ ಎಷ್ಟರ ಮಟ್ಟಿಗೆ ಸರಿ? ಲಂಚ ನೀಡಿಕೆಯ ಎರಡು ಪ್ರಸಂಗಗಳಂತಿರಲಿ, ಗೋವಿಂದರಾಯನ ನಿಜತ್ವವನ್ನು ಒಪ್ಪಿಕೊಂಡದ್ದಾದರೆ ಅವನು ಮುಧೋಳ ರಾಜ್ಯವನ್ನು ಕೇಳದೇ ಇರುವನೆ? ಹಾಗೆ ಕೇಳಿದ್ದಾದರೆ ವೆಂಕಟರಾವ ಮತ್ತು ಅವನ ವಕೀಲರ ಅಸಮಾಧಾನವನ್ನು ಕಟ್ಟಿಕೊಳ್ಳಬೇಕಾಗುವುದು. ಪ್ರಕರಣ ಬೆಳೆಯುತ್ತ ಹೋಗುವುದು; 'ಅದ್ದರಿಂದ ಗೋವಿಂದರಾಯನನ್ನು ನಾಮಧಾರಿ ಎಂದು ನಿರ್ಣಯಿಸಿಬಿಟ್ಟರೆ, ಸಮಸ್ಯೆಯನ್ನು ಚಿಗುರಿನಲ್ಲಿಯೆ ಚಿವುಟಿ ಹಾಕಿಬಿಡಬಹುದು ಎಂಬುದಾಗಿ ಸರಕಾರವು ಯೋಚಿಸಿರಬೇಕು.

ಗೋವಿಂದರಾಯನ ನಿಜತ್ವವನ್ನು ಪರೀಕ್ಷಿಸಲು, ಸಾಂಗಲಿ, ಸಾತಾರಾ, ಮಿರಜ ಪ್ರಭೃತಿಗಳಿಗಿಂತ ಮುಧೋಳ ಅರಮನೆಯ ಪರಿಜನರೇ ಹೆಚ್ಚು ಸಮರ್ಥರಲ್ಲವೆ? ಅವರಲ್ಲಿ ಒಬ್ಬರಾದರೂ, ಈತ ವೇಷಧಾರಿ ಎನ್ನಲಿಲ್ಲ; ಇಷ್ಟೇ ಅಲ್ಲ, ಕಂಪನಿ ಸರಕಾರವು ಪ್ರತ್ಯೇಕವಾಗಿ ಗುಪ್ತ ವಿಚಾರಣೆ ನಡೆಸಿದಾಗ, ಅವರೆಲ್ಲರೂ ಗೋವಿಂದ ರಾಯನ ನಿಜತ್ವವನ್ನೇ ಪುನರುಚ್ಚರಿಸಿದರಲ್ಲದೆ, ತಾವು ವೆಂಕಟರಾವ್ ಘೋರ್ಪಡೆ ಹಾಗೂ ಬಕ್ಕಾಬಾಯಿಯ ಹೆದರಿಕೆಯಿಂದಾಗಿ ಬಾಯಿ ಬಿಡಲಾರೆವೆಂದು ಹೇಳಿದ್ದರು, ಕೂಡ !

ಪಂಚಾಯತಿ ಎಂದ ಮೇಲೆ, ಎರಡೂ ಪಕ್ಷದವರಿರಬೇಕು. ಗೋವಿಂದರಾಯನ ಪಕ್ಷವನ್ನು ಬಹಿರಂಗವಾಗಿ ಹಿಡಿದವರು ಒಬ್ಬರಾದರೂ ಇದ್ದರೆ? ಕೊಲ್ಹಾಪುರದ, ಹಾಗೂ ಬಡೋದೆಯ ಸಂಸ್ಥಾನಿಕರು ಗೋವಿಂದರಾಯನ ನಿಜತ್ವವನ್ನು ಒಪ್ಪಿಕೊಂಡಿದ್ದರು. ಈ ಪಂಚಾಯತಿಯಲ್ಲಿ ಅವರು ಯಾರೂ ಇರಲಿಲ್ಲ. ವೆಂಕಟರಾಯನ ಮಾವ ಹಾಗೂ ಭ್ರಷ್ಟಾಚಾರದ ಕುಖ್ಯಾತಿಯಿದ್ದ ಬಾಳಾಜಿಪಂತ ನಾತೂ ಇಬ್ಬರೂ ಹಿನ್ನಲೆಯಲ್ಲಿ ಸೂತ್ರ ಆಡಿಸುತ್ತಿದ್ದಾಗ, ಸಾಂಗಲಿಯ ಪಟವರ್ಧನರಂಥ ಹಿರಿಯ ಸಂಸ್ಥಾನಿಕರು ಅವರಿಗೆ ಅನುಕೂಲರಿದ್ದಾಗ, ವಿನಾಕಾರಣ ಬೇರೊಂದು ಅಭಿಪ್ರಾಯವನ್ನು ವ್ಯಕ್ತಪಡಿಸಿ, ಗವರ್ನರ ಬಹದೂರ್‌ರ ಬೇಸರಕ್ಕೆ ಕಾರಣವಾಗುವುದೇಕೆ? ಎಂಬುದಾಗಿ ಹಲವು ಪಂಚಾಯತಿ ಸದಸ್ಯರು ಯೋಚಿಸಿದ್ದರೆ ಆಶ್ಚರ್ಯವೇನಿಲ್ಲ. ಪಂಚಾಯತಿ ಸೇರಿದ ದಿನ, ಅನೇಕರು ತಮ್ಮ ಅಭಿಪ್ರಾಯವನ್ನು ಆಮೇಲೆ ತಿಳಿಸುವೆವೆಂದು ಹೇಳಿದ್ದರ ಇಂಗಿತವೇನಿರಬೇಕು?

ಗೋವಿಂದರಾಯನ ನಿಜತ್ವವನ್ನು ಅಲ್ಲಗಳೆಯಲು ಆ ದಿನ ಮುಂದೆ ಮಾಡಲಾದ ಪುರಾವೆಗಳೆಂದರೆ, (೧) ಕನ್ನಡ ಚೆನ್ನಾಗಿ ಬಾರದಿರುವುದು. ಆದರೆ ೨೦ ನೇ ಶತಮಾನದಲ್ಲಿದ್ದ

ನಮ್ಮ ಭಾಗದ ಸಂಸ್ಥಾನಿಕರಾದರೂ ಆದೆಷ್ಟರ ಮಟ್ಟಿಗೆ, ಪ್ರಜೆಗಳ ಭಾಷೆಯನ್ನು ಅರಿತವರಿದ್ದರು? (೨) ಹಸ್ತಾಕ್ಷರ ಭೇದ: ಹನ್ನೆರಡು ವರ್ಷಗಳ ಅಂತರವಿದ್ದರೆ, ಯಾರ ಹಸ್ತಾಕ್ಷರವೂ ಕಿಂಚಿತ್ ಬದಲಾವಣೆ ಹೊಂದತಕ್ಕದೇ. (೩) ಕೊನೆಯದಾಗಿ, ಕೊಟ್ಟ ಕೆಲವು ಉತ್ತರಗಳಲ್ಲಿ ತಪ್ಪು: ಇದು ಕೂಡ ಕಾಲದ ಅಂತರದಿಂದಾದದ್ದು, ಎಂದು ಹೇಳಲವಕಾಶವಿದ್ದಿತಲ್ಲವೆ?

ಮೇಲಿಂದ ಮೇಲೆ ಮನವಿ ಸಲ್ಲಿಸಿದ ಗೋವಿಂದರಾವ್ ಘೋರ್ಪಡೆಯು ಒಂದು ಮನವಿಯಲ್ಲಿ ತನ್ನ ನಿಕಟ ಪರಿಚಯದ ಜನರಿರುವ ಪುಣೆಯಲ್ಲಿ ಇನ್ನೊಮ್ಮೆ ಪಂಚಾಯತಿ ಸೇರಲಿ, ಎಂದಿದ್ದನು. ಸರಕಾರ ಒಪ್ಪಲಿಲ್ಲ. ಬೆಳಗಾಂವಿ ಪಂಚಾಯತಿಯ ಉತಾರವನ್ನೂ ಕೊಡಲಿಲ್ಲ. ಅವನ ನಿಜತ್ವವನ್ನು ಮಾನ್ಯ ಮಾಡುವುದು ಅಪಾಯಕರ ಎಂದು ನಿರ್ಧರಿಸಿಕೊಂಡ ಆಗಿನ ಸರಕಾರವು ಸುಮ್ಮನುಳಿಯಿತು. ನಿದ್ದೆಯ ನಟನೆ ಮಾಡುವವರನ್ನು ಎಬ್ಬಿಸಲಾಗುವುದೆ? ಅಂತೂ ಮುಧೋಳದ ರಾಜಪುತ್ರನಾಗಿಯೂ ನಿರ್ಗತಿಕನಾಗಿ, ಅಖಂಡ ಏಳು ವರ್ಷಗಳ ವರೆಗೆ ಅನಿಶ್ಚಿತ ಭವಿಷ್ಯದಲ್ಲಿ ತೊಳಲಾಡಿ, ಗೋವಿಂದರಾವ್ ರಾಜೇ ಘೋರ್ಪಡೆ ಹೇಳ ಹೆಸರಿಲ್ಲದಂತಾದನು.

ಅವನಿಗಿಂತ ದುಸ್ಸಹವಾದ ಸ್ಥಿತಿಯನ್ನು ಅವನ ಹೆಂಡತಿ ಅನುಭವಿಸಬೇಕಾಯಿತು. ಮುಧೋಳ ಸಂಸ್ಥಾನದ ಮೊದಲ ಮಹಿಳೆಯಾಗಿ ಬಾಳಬೇಕಾಗಿದ್ದವಳು, ೧೮ರ ವಯಸ್ಸು ದಾಟುವ ಮೊದಲೆ ವಿಧವಾ ಪದವಿಯನ್ನು ಹೊತ್ತು ಜೀವಿಸುವ ಹೊತ್ತು ಬಂದಿತು. ಆರೇಳು ವರ್ಷದ ಅನಂತರ, ಗಂಡ ಬದುಕಿ ಇದ್ದಾನೆಂಬ ವಾರ್ತೆಯನ್ನು ತಂದವರು, ಅವಳ ಹತ್ತಿರದ ಸಂಬಂಧಿಕರೇ. ಆ ಸ್ಥಿತಿಯಲ್ಲಿ ಮೊದಲಬಾರಿ ಅವನನ್ನು ಸಂಧಿಸಿದಾಗ ಬುರುಖಾ ಹಾಕಿಕೊಂಡು, ತನ್ನ ಮಾತು ಕೇಳಿಸದಷ್ಟು ದೂರದಲ್ಲಿ ಕೂಡ್ರಿಸಿ ಮಾತನಾಡಿದಳಂತೆ. ಮುಂದೂ ಹಲವು ದಿನ ಕಾಯ್ದು ನಂತರವೇ ಅವನನ್ನು ಆಕೆ ಕೂಡಿಕೊಂಡಳು. ಇನ್ನೊಂದು ಮಗುವನ್ನು ಹೆತ್ತಳು. ಬೆಳಗಾಂವಿ ಪಂಚಾಯತಿಯ ಅನಂತರ ಅವಳೂ ಹಲವು ಮನವಿಗಳನ್ನು ಸಾದರಪಡಿಸಿದಳಲ್ಲದೆ, ವಕೀಲನೊಬ್ಬನನ್ನು ಮುಂದಿಟ್ಟುಕೊಂಡು, ಗವರ್ನರ್ ಮಾಲ್ಕಮ್‌ನನ್ನು ಕಂಡಳು. "ನನ್ನ ನಿಜ ಗಂಡನನ್ನೇ ಕೂಡಿಕೊಂಡಿದ್ದೇನೆ. ಅವರು ನಿಜವಾದ ಗೋವಿಂದರಾವ್ ಆಗಿರದಿದ್ದರೆ, ಓರ್ವ ಪರಪುರುಷನೊಡನೆ ಸಂಗ ಮಾಡಿದ ನಾನು ವ್ಯಭಿಚಾರಿಣಿಯೇ ಆದೇನಲ್ಲ? ಆ ಕಳಂಕವನ್ನು ಹೊರುವುದಕ್ಕಿಂತ ಸಾಯುವುದೇ ಮೇಲು" ಎಂದೆಲ್ಲ ವಿಲಾಪಿಸಿದಳು. "ನೀವು ನಮಗೆ ಏನನ್ನೂ ಕೊಡದಿದ್ದರೂ ಚಿಂತೆಯಿಲ್ಲ; ಘೋರ್ಪಡೆ ಮನೆತನದ ಗೋವಿಂದರಾವ್ ಇವರಲ್ಲ ಎಂಬುದನ್ನು ರದ್ದುಗೊಳಿಸಿ. ನನ್ನ ಪತಿ ನಿಜತ್ವವನ್ನು ದಯವಿಟ್ಟು ಒಪ್ಪಿಕೊಳ್ಳಿರಿ, ನನ್ನ ಶೀಲವನ್ನು ಕಾಯಿರಿ." ಎಂದೂ ಬರೆದಳು. ಏನೂ ಪ್ರಯೋಜನವಾಗಲಿಲ್ಲ, ಗಂಡ–ಹೆಂಡತಿಯರು ಮಿತಪರಿವಾರದೊಡನೆ. ಬಡೋದೆಗೆ ಹೋಗಿರಬೇಕು. ❖

(ಆಧಾರ: ಲಂಡನ್ನಿನ India Office Library ಮತ್ತು ಮುಂಬಯಿಯ Maharashtra Archives ನಲ್ಲಿಯ ದಾಖಲೆಗಳು.)

ಒಂದು ಕಲೆ ಅಥವಾ ಕವನ ಸಫಲವಾಗುವುದು ಅದರಲ್ಲಿ ಕಲೆಗಾರ ಕಾಲವನ್ನು ತಡೆಹಿಡಿದು ನಿಲ್ಲಿಸಿದಾಗ. ಹೀಗೆ ನಿಲ್ಲಿಸುವುದು ಸಾಧ್ಯವಾಗುವುದು ಭೂತ-ಭವಿಷ್ಯತ್ತು-ವರ್ತಮಾನಗಳನ್ನು ಒಂದೇ ಬಿಂದುವಿನಲ್ಲಿ ತಂದು ಕೇಂದ್ರೀಕರಿಸಿದಾಗ.

—ಎಂ. ಗೋಪಾಲಕೃಷ್ಣ ಅಡಿಗ
('ಸಮಗ್ರ ಕಾವ್ಯ'ದಿಂದ)

ನಿಮಗೆ ನೀವೇ ಖಾತ್ರಿ ಮಾಡಿಕೊಳ್ಳಿ:

# ಮಿಂಚಿನಂತಹ ಸೂಪರ್ ರಿನ್ ಬಿಳುಪು, ಬೇರೆ ಯಾವುದೇ ಡಿಟರ್ಜೆಂಟ್ ಬಿಲ್ಲೆ ಅಥವಾ ಬಾರ್‌ಗಿಂತ ಅಧಿಕ ಬಿಳುಪು.






ಸೂಪರ್ ರಿನ್ ನಿಯಮಿತವಾಗಿ ಉಪಯೋಗಿಸಿರಿ ಮತ್ತು ನಿಮ್ಮ ಬಟ್ಟೆಗಳು ಎಷ್ಟು ಅಧಿಕ ಬಿಳುಪಾಗಿ ಕಾಣುತ್ತವೆಂದು ನೋಡಿರಿ, ನೀವು ಬೇರೆ ಯಾವುದೇ ಡಿಟರ್ಜೆಂಟ್ ಬಿಲ್ಲೆ ಅಥವಾ ಬಾರ್‌ನಿಂದ ಒಗೆದಾಗ ಆಗುವುದಕ್ಕಿಂತ ಅಧಿಕ ಬೆಳ್ಳಗೆ ಆಗುತ್ತವೆ. ಏಕೆಂದರೆ ಸೂಪರ್ ರಿನ್‌ನಲ್ಲಿ ಅಧಿಕ ಬಿಳುಪುಗೊಳಿಸುವ ಶಕ್ತಿ ಇದೆ. ನಿಮಗೆ ನೀವೇ ಖಾತ್ರಿ ಮಾಡಿಕೊಳ್ಳಿ.




**ಬೇರೆ ಯಾವುದೇ ಡಿಟರ್ಜೆಂಟ್ ಬಿಲ್ಲೆ ಅಥವಾ ಬಾರ್‌ಗಿಂತ ಅಧಿಕ ಬಿಳುಪುಗೊಳಿಸುವ ಶಕ್ತಿ.**

ಹಿಂದುಸ್ಥಾನ್ ಲೀವರ್ ಅವರ ಉತ್ಕೃಷ್ಟ ತಯಾರಿಕೆ.

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳೂ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಪ್ರತಿ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಗುರುತಿಸಿಕೊಳ್ಳಿರಿ ಆಮೇಲೆ ಇದರ ಬೆನ್ನಿನ ಪುಟ ನೋಡಿರಿ ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ

೧. ಹಿಳ್ಳು

(ಅ) ಉಬ್ಬು (ಆ) ಕುಗ್ಗು (ಇ) ಜಡೆ (ಈ) ಮರಿ

೨. ಸಮುಚ್ಚಯ

(ಅ) ಎತ್ತರ (ಆ) ಗುಂಪು (ಇ) ಒಡೆದು ಹೋಗಿದ್ದು (ಈ) ಭಾಗ್ಯ

೩. ಟೊಣೆ

(ಅ) ಅಲ್ಲಾಡು (ಆ) ಮುಚಿಸು (ಇ) ಪೊಳ್ಳಾಗು (ಈ) ಮುಳುಗಿಸು

೪. ಲಲಿತ

(ಅ) ಜೋಲಾಡುವ (ಆ) ಗಾಯವಾದ (ಇ) ಕೋಮಲ (ಈ ಕಾದಾಡುವ

೫. ಉಲಿತ

(ಅ) ಮೃದು (ಆ) [illegible] (ಇ) ಸುಳಿದಾಡುವ (ಈ) ಮುರಿದ

೬. ತೀರ್ಕಣೆ

(ಅ) ಸರಿಹೊಂದುವಿಕೆ (ಆ) ನಿರ್ಧಾರ (ಇ) ದಾಟಿಹೋಗುವಿಕೆ (ಈ) ಕೊನೆ

೭. ಉಪಧಿ

(ಅ) ಉಪಟಳ (ಆ) ಬಿರುದು (ಇ) ರಾಶಿ (ಈ) ಮುನ್ನುಡಿ

೮. ಸೈಗುಟ್ಟು

(ಅ) ಬಡಿ (ಆ) ಬಿಡಿಸು (ಇ) ಒಪ್ಪಿ-ಕೊಳ್ಳು (ಈ) ಗೋಪ್ಯ

೯. ಪ್ರಶಸ್ತ

(ಅ) ಶಿಕ್ಷೆಗೆ ಗುರಿಯಾದ (ಆ) ಶ್ರೇಷ್ಠ (ಇ) ಪ್ರಜೆ (ಈ) ಕಾನೂನು ಬಲ್ಲ

೧೦. ಚೂಣಿ

(ಅ) ಮುಂಭಾಗ (ಆ) [illegible] (ಇ) ಜುಟ್ಟು (ಈ) ಕುಪ್ಪಸ

೧೧. ಶಾಸ್ತಿ

(ಅ) ಶಿಕ್ಷೆ (ಆ) ಅಧಿಕಾರ ನಡೆಸುವ ಹೆಂಗಸು (ಇ) ವಿದ್ವಾಂಸ (ಈ) ಸುಳ್ಳು

೧೨. ಡೊಗ್ಗು

(ಅ) ಮೋಸ (ಆ) ಹೋದ (ಇ) ಗುದ್ದು (ಈ) ಬಗ್ಗು

# 'ಶಬ್ದಭಾಂಡಾರ'ದ ಸರಿಯಾದ ಅರ್ಥಗಳು

೧. **ಹುಳು** (ಈ) ಮರಿ, ಕಂದ, ಪಿಳ್ಳೆ. ಉದಾ:— ಬಾಳೆಯು ಬುಡದಲ್ಲಿ ಹಿಳ್ಳು ಹುಟ್ಟಿದೆ. [ಕನ್ನಡ—ಪಿಳ್ಳೆ.]

೨. **ಸಮುಚ್ಚಯ** (ಅ) ಗುಂಪು, ಸಮೂಹ; ಜೋಡಣೆ; ಶಬ್ದ ಅಥವಾ ವಾಕ್ಯಗಳ ಜೋಡಣೆ. ಉದಾ:— ಪದ ಸಮುಚ್ಚಯ. [ಸಂ. ಸಂ=ಒಟ್ಟಾಗಿ, ಉತ್=ಮೇಲೆ, ಚಯ=ಕೂಡಿದ್ದು.]

೩. **ಟೊಣೆ** (ಅ) ವಂಚಿಸು, ಮೋಸಮಾಡು ಥೇದಿಸು, ಇರಿ, ತಿವಿ; ಸೋಲಿಸು. ಉದಾ:— ದೈವವೇ ಅವಳನ್ನು ಟೊಣೆ-ಯಿತು. [?]

೪. **ಲಲಿತ** (ಇ) ಕೋಮಲ, ಮೃದು; ಸುಂದರ; ಸಂತೋಷಕರ; ಮನೋಹರ. ಉದಾ:— ಲಲಿತ ಸಾಹಿತ್ಯ, ಲಲಿತಾಂಗಿ. [ಸಂ. ಲಲ್=ಆಡು, ಓಲೈಸು—ಎಂಬು-ದರಿಂದ.]

೫. **ಉಲಿತ** (ಇ) ಸುಳಿದಾಡುವ, ಅಲು-ಗಾಡುವ; ನಡುಗುವ; ತೂಗಾಡುವ. ಉದಾ:— ಉಲಿತ ಕೇಶ= ಸುಳಿದಾಡುವ ಕೂದಲು. [ಸಂ. ಉಲ್=ಅಲುಗು-ಎಂಬುದರಿಂದ.]

೬. **ತೀರ್ಗಣೆ** (ಈ) ಕೊನೆ, ಮುಕ್ತಾಯ, ನೆರವೇರಿಕೆ. ಉದಾ:— ಸಮಸ್ಯೆ ತೀರ್ಗಣೆ ಹೊಂದಲಿಲ್ಲ. [ಕನ್ನಡ, ತೀರ್= ಕೊನೆಗೊಳ್ಳು ಎಂಬುದ್ದರಿಂದ.]

೭. **ಉಪಧಿ** (ಅ) ಉಪಟಳ, ಕಾಟ; ಮೋಸ, ವಂಚನೆ; ಸತ್ಯವನ್ನು ಬಚ್ಚಿಡು-ವುದು: ಸ್ವ ಪರೀಕ್ಷೆ. ಉದಾ:— ದೇಶಕ್ಕೆ ಉಪಧಿ ತಪ್ಪಲಿಲ್ಲ. [ಸಂ.]

೮. **ಸೈಗುಟ್ಟು** (ಇ) ಒಪ್ಪಿಕೊಳ್ಳು, ಇನ್ನೊ-ಬ್ಬರ ಮಾತಿಗೆ (ವಿಚಾರಿಸದೆ) ಸಮ್ಮತಿಸು, ಉದಾ:— ಹೆಂಡತಿಯ ಮಾತಿಗೆ ಸೈಗುಟ್ಟಿದ. [ಕನ್ನಡ, ಸೈ=ಸರಿ, ಕುಟ್ಟು=ಹೇಳು.]

೯. **ಪ್ರಶಸ್ತ** (ಅ) ಉತ್ತಮ, ಶ್ರೇಷ್ಠ; ಹೊಗಳಲ್ಪಟ್ಟ; ಪಳಗಿಸಲ್ಪಟ್ಟ. ಉದಾ:— ಪ್ರಶಸ್ತವಾದ ಸ್ಥಳ. [ಸಂ. ಪ್ರ= ಹೆಚ್ಚಾಗಿ, ಶಸ್ತ=ಪಳಗಿದ.]

೧೦. **ಚೂಣಿ** (ಅ) ಮುಂಭಾಗ, ಮುಂದಿನ ಸಾಲು; ಸೈನ್ಯದ ಮುಂಭಾಗ. ಉದಾ:— ಮೆರವಣಿಗೆಯು ಚೂಣಿಯಲ್ಲಿದ್ದವರಿಗೆ ಪೆಟ್ಟುಬಿತ್ತು. [?]

೧೧. **ಶಾಸ್ತಿ** (ಅ) ದಂಡನೆ, ಶಿಕ್ಷೆ; ಕಟ್ಟಳೆ, ವಿಧಿ. ಉದಾ:— ಅವನಿಗೆ ಸರಿಯಾದ ಶಾಸ್ತಿ ಮಾಡಿದರು. [ಸಂ. ಶಾಸ್= ಆಳು, ಪಳಗಿಸು—ಎಂಬುದರಿಂದ.]

೧೨. **ಡೊಗ್ಗು** (ಈ) ಬಗ್ಗು, ನಮಸ್ಕರಿಸು; ವಿಧೇಯವಾಗಿರು; ಅಂಜಿ ನಡೆ. ಉದಾ.— ಅವನು ಯಾರಿಗೂ ಡೊಗ್ಗಿದವನಲ್ಲ, [ಕನ್ನಡ.]

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿ-ಸಿದ್ದು ಸರಿಯಾಗಿದೆಯೆಂದು ಎಣಿಸಿ, ಕೆಳಗಿ-ನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬—೮ ಸರಿಯಿದ್ದರೆ | ... | ಸಾಧಾರಣ |
| ೯—೧೦ ,, | ... | ಉತ್ತಮ |
| ೧೧—೧೨ ,, | ... | ಅತ್ಯುತ್ತಮ |

# 'ಸರ್ವಜ್ಞ' ಕವಿಗೆ ಆ ಹೆಸರು ಏಕೆ?

ಗೌರೀಶ ಕಾಯ್ಕಿಣಿ

"ಸರ್ವಜ್ಞನೆಂಬುವನು ಗರ್ವದಿಂದ ಆಗನು. ಆತ ಸರ್ವರಲ್ಲಿಯೂ ಜ್ಞಾನದ ಒಂದೊಂದು ಅಂಶವನ್ನು ಹೀರಿಕೊಂಡು ವಿದ್ಯೆಯ ಪರ್ವತವೇ ಆಗುತ್ತಾನೆ"–ಎಂಬ ಅರ್ಥದ ಒಂದು ಸರ್ವಜ್ಞನ ತ್ರಿಪದಿ ಸುವಿಖ್ಯಾತವಿದೆ.

ಆ ತ್ರಿಪದಿಯು ನನ್ನ ಜಿಜ್ಞಾಸೆ ಕೆರಳಿಸಿದ್ದು ಅದರ ಈ ವಿಶಾಲ ಲೋಕಾನುಭವದ ತಿರುಳಿನ ಅಭಿಪ್ರಾಯಕ್ಕಾಗಿ ಮಾತ್ರವಲ್ಲ ಈ ತ್ರಿಪದಿಯಲ್ಲಿ ನಮ್ಮ ಸರ್ವಜ್ಞನೆಂಬ ವಿರಕ್ತ ಜಂಗಮ ಕವಿಯು ತನ್ನ ಬಗೆಗೇ ಒಂದು ನಿರ್ಲಿಪ್ತ ನಿಲುವಿನಿಂದ ಬರೆದುಕೊಂಡ ವೈಖರಿ.

ಸರ್ವಜ್ಞ ಕವಿಯ ಹೆಸರೇನು? ಅವನಿಗೆ ಸರ್ವಜ್ಞನೆಂಬ ಅಂಕಿತವೇ ಮೂಲತಃ ಇತ್ತೋ ಅಥವಾ ಆ ನಾಮಾಂಕಿತದಿಂದ ಆತ ಲೋಕ-ಪ್ರಸಿದ್ಧಿ ಪಡೆದನೋ? ಮೇಲಿನ ಅವನ ನುಡಿಯಿಂದ ಸೂಚಿತವಾಗುವುದೇನೆಂದರೆ ಈ ಸಾಧು ಕವಿಗೆ 'ಸರ್ವಜ್ಞ'ನೆಂಬುದೊಂದು ಉಪಾಧಿ, ಬಿರುದು. ಅವನ ಬಹುಶ್ರುತತ್ವಕ್ಕೆ, ಅಪಾರ–ಅಗಾಧ ಜೀವನಾನುಭವಕ್ಕೆ ಮೆಚ್ಚಿ ಅಂದಿನ ಕನ್ನಡ ಜನ "ಕೈಗೆ ಖಪ್ಪರ" ಹಿಡಿದು "[illegible] ನಾಡ"ನ್ನು ಒಂಟಿ ಸಲಗನಂತೆ ಸುತ್ತುತ್ತಿದ್ದ ಈ ಮಹಾವೈರಾಗಿಗೆ ಅನ್ವರ್ಥಕವಾಗಿ ಇಟ್ಟ ಹೆಸರು "ಸರ್ವಜ್ಞ"ನೆಂದಿರಬೇಕು. ಅವನ್ನು [illegible] ಯವಾಗಿ ಸಮರ್ಥಿಸಿಕೊಂಡು ಒಂದು [illegible] ಈ ಮೇಲೆ ಉದಾಹರಿಸಿದ "ಸರ್ವಜ್ಞ" [illegible] ದಿಂದ ವ್ಯಾಖ್ಯಾನ ಮಾಡಿರಬೇಕು.

"ಎಲ್ಲ ಬಲ್ಲವರಿಲ್ಲ! ಬಲ್ಲವರು ಬಹಳಿಲ್ಲ" ಎಂದು ಸಾರಿದ ಈ ಮಹಾ ಮೇಧಾವಿಯು [illegible] ಜೀವನದ ದೃಷ್ಟ್ಯಾ ತನ್ನನ್ನೇ "ಸರ್ವಜ್ಞ" ನೆಂದು ಹೆಸರಿಸಿಕೊಂಡಿರಲಾರ.

ಹಾಗಾದರೆ ಇವನನ್ನು "ಸರ್ವಜ್ಞ"ನೆಂದೇ [illegible] ಜನ ಕರೆದರು? ಪಂಡಿತ, ವಿದ್ವಾಂಸ, [illegible] ಓಜ ಇತ್ಯಾದಿ ಉಪಾಧಿಗಳು ಅಂದು ಪ್ರಚಲಿತ ವಿದ್ದವು. ಎಲ್ಲ ಬಲ್ಲವರಿಗೆ "ಸರ್ವಜ್ಞ"ನೆಂದು ಕರೆಯುವ ವಾಡಿಕೆ ಅಂದು ಇತ್ತೇ? [illegible] ಬಿರುದು [ಬೇರೆ ಯಾವನಾದರೂ ಜ್ಞಾನಿಗೆ ಇಲ್ಲವೆ ಕವಿಗೆ ಅಂದು ಕೊಟ್ಟಿದ್ದು ಕೇಳಿ ಬಂದಿ–ದೆಯೇ? ಹಾಗೇನಿಲ್ಲ.

ಸಾಮಾನ್ಯತಃ "ಸರ್ವಜ್ಞ"ತ್ವವು ಪರಮಾತ್ಮನ ವರ್ಣನೆಯ ವಿಶೇಷಣಗಳಲ್ಲಿ ಒಂದು–ಸರ್ವ ಶಕ್ತ, ಸರ್ವಾಂತರ್ಯಾಮಿ ಎಂಬಂತೆ. ಪುಲಕೇಶಿ ಯಿಂದ ಸಮ್ರಾಟನಿಗೆ "ಪರಮೇಶ್ವರ"ನೆಂದು ಕರೆದಿದ್ದರೂ ಮುಂದೆ ಪರಮಜ್ಞಾನಿಗೆ ಇಲ್ಲವೆ ವರಕವಿಗೆ "ಸರ್ವಜ್ಞ"ನೆಂಬ ಹೆಸರು ಅಂಟಿಸಿದ್ದು ಬೇರೆ ಇಲ್ಲ.

ಅಂದಾಗ ಈ ಕವಿಯನ್ನು "ಸರ್ವಜ್ಞ"ನೆಂದು ಕರೆದುದರ ವೈಚಿತ್ರ್ಯವೇನು? ಮೊನ್ನೆ ಮಹಾರಾಷ್ಟ್ರದ ಪ್ರಾಚೀನ ಮಹಾನುಭಾವೀ ಪಂಥದ ಒಂದು ಮೂಲ ಗ್ರಂಥವಾದ "ಲೀಳಾ ಚರಿತ್ರ"ದ ಕೆಲವು "ಓವಿ"(ಮರಾಠಿ ತ್ರಿಪದಿ)ಗಳನ್ನು ಓದುವ ಸಂದರ್ಭ ಒದಗಿ ಬಂದಿತು. ಆಗ ಅಕಸ್ಮಾತ್ ಈ ಸಂಗತಿಯು ಕಣ್ಣಿಗೆ ಬಿತ್ತು!

"ಲೀಳಾ ಚರಿತ್ರ" 'ಮಹಾನುಭಾವೀ' ಪಂಥದ ಪ್ರತಿಷ್ಠಾಪಕನಾದ ಚಕ್ರಧರ್ಮ ಸ್ವಾಮಿಯ ಲೀಲೆಗಳ ಕಥಾ ವಿಸ್ತಾರ. (ಈ ಹೆಸರಿನ ಪ್ರಭಾವವೇ ಆ ಕಾಲದ ಹಿಂದೆ ಮುಂದೆ ರಚಿತವಾದ ಚಾಮರಸನ 'ಪ್ರಭುಲಿಂಗಲೀಲೆ'ಯ ನಾಮಕರಣದ ಮೇಲೆ ಆಗಿರಬಹುದೇ? ಏಕೆಂದರೆ, ಚಕ್ರಧರ ಸ್ವಾಮಿಯ ಈ ಚರಿತ್ರೆ ೧೨ನೆಯ ಶತಮಾನಕ್ಕೂ ಹಿಂದಿನದು.) ಈ ಸ್ವಾಮಿಯ ಲೀಲೆಗಳೆಂದರೆ ಅವನ ಚರಿತ್ರೆಯ ಅನೇಕ ಅದ್ಭುತ ಪ್ರಸಂಗಗಳ ಸ್ಮೃತಿಗಳು. ಸ್ವಾಮಿಗೆ ಅವನ ಆಪ್ತ ಶಿಷ್ಯರು ಈ ಬಗೆಗೆ ಪ್ರಶ್ನೆ ಕೇಳುತ್ತಾರೆ. ಚಕ್ರಧರ ಸ್ವಾಮಿ ಉತ್ತರ ರೂಪವಾಗಿ ಅನೇಕ ಐತಿಹ್ಯಗಳನ್ನು, ಘಟನೆಗಳನ್ನು ಕಥಿಸುತ್ತಾನೆ.

ನಾನು ಓದಿದ ಕಥೆಯಲ್ಲಿ ಮಹದಾಯಿಎಂಬ ಒಬ್ಬ ಆಪ್ತ ಶಿಷ್ಯೆ ಕೇಳಿದ ಪ್ರಶ್ನೆಗೆ ಚಕ್ರಧರ ಸ್ವಾಮಿಯ ವಿವರವಾದ ಉತ್ತರವಿದೆ. ಆ ಕಥೆಯ ವಿವರ ನಮಗೆ ಇಲ್ಲಿ ಅಪ್ರಸ್ತುತ. ನಾನು ಇಲ್ಲಿ ಎತ್ತಿ ಹೇಳುವುದು ಎರಡೇ ಮಾತು. ಒಂದು ಚಕ್ರಧರ ಸ್ವಾಮಿಯನ್ನು "ಗೋಸಾಯಿ" ಎಂದೂ "ಸರ್ವಜ್ಞ"ನೆಂದೂ ಕರೆದದ್ದು. ಮಹದಾಯಿ ಒಮ್ಮೆ ಆ ಗೋಸಾಯಿಗೆ ಕೇಳಿದಳು. ಆಗ ಆ ಸರ್ವಜ್ಞ ಹೇಳಿದನು.

ಅಂದರೆ ಮಹಾನುಭಾವೀ ಪಂಥದವರು ತಮ್ಮ ಆದ್ಯ ಗುರುವನ್ನು "ಸರ್ವಜ್ಞ"ರೆಂದು ಸಂಬೋಧಿಸುತ್ತಿದ್ದರು. ಚಕ್ರಧರ ಒಬ್ಬ ವಿರಕ್ತ ಗೋಸಾಮಿ (ಗೋಸ್ವಾಮಿ). ತಮ್ಮ ಪಂಥದ ಗುರುಗಳನ್ನು ಹಿರಿಯರನ್ನು ಮಹಾಭಾವಿಗಳು 'ಸರ್ವಜ್ಞ'ನೆಂದು ಕರೆಯುತ್ತಿದ್ದರು. ಅದೇ ಪದ್ಧತಿಯಲ್ಲಿ ನಮ್ಮ "ಪದ್ಧತಿ" ಕವಿ, ವಿರಕ್ತ ಗೋಸಾವಿಯಂತಿದ್ದ ಕವಿಗೂ "ಸರ್ವಜ್ಞ"ನೆಂಬ ಹೆಸರು ಬಂದಿರಬಹುದೇ? ಆತ ವೀರಶೈವ ಮತವನ್ನು ಒಪ್ಪಿಕೊಂಡವನೆಂದು ನಾವೆಲ್ಲ ತಿಳಿದುಕೊಂಡಿದ್ದೇವೆ. ಆದರೂ ಆತ ಮೂಲತಃ ಈ ಮಹಾನುಭಾವೀ ಪಂಥದವನೇ?

ಏಕೆಂದರೆ ಆ ಪಂಥದ ಗುರುವರೇಣ್ಯ ಚಕ್ರಧರ ಸ್ವಾಮಿಯನ್ನು "ಲೀಳಾ ಚರಿತ್ರ"ದಲ್ಲಿ ಸಂಬೋಧಿಸಿದ ರೀತಿಯಲ್ಲಿಯೇ, ನಮ್ಮ ಜನ ಅಂದು "ಸರ್ವಜ್ಞ"ನೆಂದು ಆ ಹಿರಿಯ ಅನುಭಾವಿ ಕವಿಯನ್ನು ಕಂಡರು, ಕರೆದರು. ಆ ಪಂಥದಲ್ಲಿಯೇ ಕಾಣಿಸಿಕೊಂಡ ಈ ಉಪಾಧಿಯು ನೇರ ನಮ್ಮ ಈ ಒಬ್ಬ ಕವಿಗೇ ಅಂಟಿ ನಿಂತು ರೂಢಿಯಲ್ಲಿ ಪಳಗಿ ಬಂದಿದೆ. ಆ ಕವಿಗೆ 'ಸರ್ವಜ್ಞ' ನೆನಿಸಿಕೊಳ್ಳುವುದರಲ್ಲಿ ಗರ್ವವಿಲ್ಲ. ಆತ "ಎಲ್ಲ ಬಲ್ಲವ", "ವಿದ್ಯೆಯ ಪರ್ವತ"ನಾಗಬೇಕೆಂಬ ಹಂಬಲವಿಟ್ಟುಕೊಂಡ ಪರಮ ಜಿಜ್ಞಾಸು.

ಆದ್ದರಿಂದ ನಮ್ಮ ಸರ್ವಜ್ಞ ಮಹಾನುಭಾವಿಯ ಪ್ರಭಾವಕ್ಕೆ ಒಳಪಟ್ಟ ಒಬ್ಬ ವಿರಕ್ತನೇ? ["ಲೀಳಾ ಚರಿತ್ರೆ"ಯಂತೆಯೇ ಸರ್ವಜ್ಞನ ಕೃತಿಗಳೆಲ್ಲ ತ್ರಿಪದಿಗಳಲ್ಲಿಯೇ ಇವೆ. ಆದರೆ ಈ ತ್ರಿಪದಿ (ಓವಿ) ೧೧–೧೨ ನೆಯ ಶತಮಾನದ ಮಹಾರಾಷ್ಟ್ರದ ಸಂತ ವಾಙ್ಮಯದ ಮುಖ್ಯ ಮಾಧ್ಯಮವಾಗಿದ್ದಂತೆ ನಮ್ಮ ಶಾಸನ ಪದ್ಯಗಳ ಹಾಗೂ ಜಾನಪದ ಕವಿತ್ವದ ಜನಪ್ರಿಯ ವೃತ್ತವೂ ಆಗಿದ್ದಿರಬಹುದು.] ಈ ಕುರಿತು ನಮ್ಮ ಸಾಹಿತ್ಯೇತಿಹಾಸತಜ್ಞರು ಹೆಚ್ಚಿನ ಬೆಳಕು ಚೆಲ್ಲಬಹುದೇ ?





# ಕಾಕವೇದಾಂತ

ಶಿವರಾಮು ಜೋಶಿ

ಕಾಗೆಗಳು ದೇಶ ಬಿಟ್ಟವೆಯೆಂದರೆ ಅಲ್ಲಿ ಏನೂ ಇಲ್ಲವೆಂದರ್ಥ. ಲಕ್ಷದ್ವೀಪದ ಕೆಲವು ದ್ವೀಪಗಳಲ್ಲಿ ಮುನ್ನೂರು ವರ್ಷಗಳಿಂದ ಕಾಗೆಗಳೇ ಇಲ್ಲವಂತೆ. ಕಾಗೆ 'ಶೌಚಪಕ್ಷಿ' ಎಂದು ಹೆಸರಾಗಿದೆ. ಕೊಳಚೆಯನ್ನು ತೆಗೆದುಹಾಕುವ ಕಾಗೆ ಕೊಳಚೆ ಇರುವಲ್ಲೆಲ್ಲ ಇರಬೇಕಾದ ಪಕ್ಷಿಯೇ. ಆದರೆ ಅದನ್ನು ಕಂಡರೆ ಯಾರಿಗೂ ಅಸಹ್ಯ, ಅಪಶಕುನ. ಲಕ್ಷದ್ವೀಪದಲ್ಲಿ ಕಾಗೆಯೇ ಅಸಹ್ಯಪಟ್ಟುಕೊಂಡು ದೇಶಾಂತರ ಹೋಗಿಬಿಟ್ಟಿದೆ. ಕಾರಣವಿಷ್ಟೆ. ಕಾಗೆಯೊಂದು ಒಬ್ಬ ಮುಸ್ಲಿಮ್ ಸಂತ ಮುಲಕ್ ಎಂಬಾತನ ಮೇಲೆ ಹಿಕ್ಕೆ ಹಾಕಿಬಿಟ್ಟಿತು. ತಿಳಿದೋ ತಿಳಿಯದೆಯೋ ಕಾಗೆ ಮಾಡಿದ ಅಪರಾಧಕ್ಕೆ ಸಂತರು ಶಾಪ ಹಾಕಿಬಿಟ್ಟರು. ಕಾಗೆ ಸಂತರ ಸಿಟ್ಟು ತಿಳಿದು ಹಾರಿ ಹೋಯಿತು. ಹೋಗುವಾಗ ಒಂಟಿಯಾಗಿ ಹೋಗದೆ ತನ್ನ ಪೀಳಿಗೆಯನ್ನೇ ಕರೆದುಕೊಂಡು ಹೋಯಿತು.

ಕಾಗೆಗಳ ಬಗೆಗೆ ನಮ್ಮ ದೇಶದಲ್ಲಿಯೂ ಕಥೆ ಇದೆ. ಬಿಸಿಲಿನಲ್ಲಿ ಮಾರ್ಗಾಯಾಸದಿಂದ ಒಬ್ಬ ಮುನಿ ದಾರಿಯಂಚಿನ ಮರದ ಅಡಿ ವಿಶ್ರಮಿಸುತ್ತಿದ್ದ. ನಿದ್ರೆ ಹೋದ ಮುನಿಯ ಮೇಲೆ ಮರದಲ್ಲಿ ಕುಳಿತ ಕಾಗೆ ಮಲ ಹಾಕಿತು. ಎಚ್ಚೆತ್ತ ಮುನಿ ಕಣ್ಣು ತೆರೆದು ನೋಡಿದ. ಕಾಗೆಯತ್ತ ದೃಷ್ಟಿ ಹರಿಯಿತು. ಮುನಿಯು ಕೋಪದ ದೃಷ್ಟಿಗೆ ಕಾಗೆ ದಗ್ಧವಾಗಿ ಹೋಯಿತು. ಲಕ್ಷದ್ವೀಪದ ಸಂತ ಫಕೀರನಂತೆ ನಮ್ಮ ದೇಶದ ಮುನಿ ಶಾಪವನ್ನೇನಾದರೂ ಹಾಕಿದ್ದರೆ ನಮ್ಮ ದೇಶದಲ್ಲಿ ಒಂದೂ ಕಾಗೆ ಉಳಿಯುತ್ತಿರಲಿಲ್ಲ.

ನಮ್ಮ ದೇಶದಲ್ಲಿ ಅನೇಕ ಬಗೆಯ ಕಾಗೆಗಳಿವೆ. ಕಪ್ಪು ಕಾಗೆ, ಬಿಳಿ ಕಾಗೆ, ಕಂದು ಕಾಗೆ, ಕೆಂಪು ಕಾಗೆ ಇತ್ಯಾದಿ. ಕೆಲವು ವರ್ಷಗಳ ಹಿಂದೆ ಬಿಳಿಯ ಕಾಗೆಯೊಂದು ಹಾರಿ ಬಂದು ಬಳ್ಳಾರಿಯ ಕಲ್ಲು ಗುಡ್ಡಗಳಲ್ಲಿ ಸೇರಿಕೊಂಡುಬಿಟ್ಟಿತು. ಬಹುಶಃ ದಕ್ಷಿಣ ಧ್ರುವದಿಂದ ಅದು ಬಂದಿರಬೇಕು. ಅದು ಹಿಮಾಲಯವನ್ನು ತಲುಪುವ ಮೊದಲೇ ಕಲ್ಲು ಗುಡ್ಡಗಳಲ್ಲಿ ಸಿಕ್ಕಿ ಹಾಕಿಕೊಂಡು ಮನುಷ್ಯನ ದೃಷ್ಟಿಗೆ ಬಿತ್ತು. ಬಿಳಿಯ ಕಾಗೆಯೊಂದು ಕಣ್ಣಿಗೆ ಬಿದ್ದಾಗ ಯಾರು ಸುಮ್ಮ



ನಿರುತ್ತಾರೆ? ಸುದ್ದಿ ಮಾಡಿ ಅವನ್ನು ಓಡಿಸಿ ಹಾಕಿದರು. ಅದು ಈಗ ಮೈಸೂರು ಪ್ರಾಣಿ ಶಾಲೆಯಲ್ಲಿದೆ. ಬಿಳಿ ಕಾಗೆಯಂತೆ ಧ್ರುವ ಪ್ರದೇಶದಿಂದ ಅನೇಕ ಪಕ್ಷಿಗಳು ಹಾರಿ ಬರುತ್ತವೆಯಾದರೂ ಏಕಾಕಿಯಾಗಿ ಬರುವುದಿಲ್ಲ. ದಕ್ಷಿಣದಲ್ಲಿ ರಂಗನ ತಿಟ್ಟು, ಉತ್ತರದಲ್ಲಿ ಭರತಪುರ ಪಕ್ಷಿಧಾಮಗಳನ್ನು ಸೇರುತ್ತವೆ. ಕಾಗೆಗೆ ಮಾತ್ರ ಏನು ಶಾಪವೋ ಏನೋ! ಕಾಗೆಗಳು ಬರುತ್ತವೆ. ಹೋಗುತ್ತವೆ. ಅವುಗಳನ್ನು ಯಾರೂ ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ. ಕಾಗೆ ನಮ್ಮ ಮೇಲೆ ಆಗಾಗ ಹಿಕ್ಕೆ ಹಾಕುವುದುಂಟು. ಆಗ ನಾವು ಯಾರೂ ಕಾಗೆಯನ್ನು ಏನೂ ಮಾಡಲಾರೆವು. ಸಂತಸಂತೆ ಶಾಪ ಹಾಕುವ ಬದಲು ನಮ್ಮ ಅದೃಷ್ಟಕ್ಕೆ ಮರುಗುತ್ತೇವೆ. ಕಾಗೆ ಶಕುನವಾಯಿತೆಂದರೆ ದೇವರ ನೆನಪಾಗಿ ಅರಳೀ ಕಟ್ಟೆಗೆ ಓಡುತ್ತೇವೆ. ಕಾಗೆ ಶನಿ ದೇವರ ವಾಹನ, ಶನಿದೇವರಿಗೆ ಎಲ್ಲರೂ ಅಂಜುತ್ತಾರೆ. ಏಕೆ ಎಂಬುದು ಎಲ್ಲರಿಗೂ ಗೊತ್ತು.

ಬೀರಬಲ್ಲ ಮತ್ತು ಅಕ್ಬರ ಒಮ್ಮೆ ಸಂಜೆ ತಿರುಗಾಟಕ್ಕೆ ಹೋಗಿದ್ದರು. ಅಕಬರ ಯಾವಾಗಲೂ ಬೀರಬಲ್ಲನನ್ನು ಕೆಣಕುತ್ತಿದ್ದ. ಒಂದು ಮರದ ಮೇಲೆ ಒಂದು ಕಾಗೆ ಕುಳಿತಿತ್ತು.

"ಬೀರಬಲ್, ಆ ಕಾಗೆ ಏಕೆ ಒಂಟಿಯಾಗಿ ಕುಳಿತಿವೆ?" ಅಕಬರ ಕೇಳಿದ. ಕಾಗೆ ಯಾವಾಗಲೂ ಒಂಟಿಯಾಗಿರುವುದಿಲ್ಲ.

"ಜಹಾಂಪನಾ, ಅದು ತನ್ನ ಬಂಧುಗಳನ್ನು ಇದಿರು ನೋಡುತ್ತಿದೆ" ಬೀರಬಲ್ಲ ಹೇಳಿದ.

ಅಕಬರ ಅಂತರ್ಮುಖಿಯಾದ. ಯಾರನ್ನೂ ಸೇರದವರನ್ನು ಕಾಗೆ ಎಂದು ಬಯ್ಯುತ್ತಾರೆ. ಕಾಗೆ ಮಾತ್ರ ಎಲ್ಲರನ್ನೂ ಸೇರಿಕೊಂಡೇ ತಿನ್ನುತ್ತದೆ, ಕುಣಿಯುತ್ತದೆ. ಎಲ್ಲರನ್ನೂ ಸೇರಿಕೊಂಡು ಇರುವಾಗ ಅವಕ್ಕೆ ಕಾಗೆ ಬಳಗವೆನ್ನುತ್ತಾರೆ. ಕಾಗೆ ಒಂಟಿಯಾದರೂ ಹೆಸರು, ಇತರರೊಡನೆ ಇದ್ದರೂ ಹೆಸರು. ಕಾಗೆ ಸಂಘಜೀವಿ. ಎಲ್ಲಿಯೋ ಇರಲಿ ಅದು ತನ್ನ ಬಳಗಕ್ಕೆ ಕರೆ ಕೊಡುತ್ತದೆ. ಎಲ್ಲಿ ಹೋದರೂ ತನ್ನ ಬಳಗ ಸೇರುತ್ತದೆ.

ಇನ್ನೊಮ್ಮೆ ಅಕಬರ, ಬೀರಬಲ್ಲನನ್ನು ಕೇಳುತ್ತಾನೆ, "ಬೀರಬಲ್, ಈ ಮರದಲ್ಲಿ ಎಷ್ಟು ಕಾಗೆಗಳು ಇವೆ?"

"ಜಹಾಂಪನಾ, ಕೆಲವು ಕಾಗೆಗಳು ಬೇರೆ ಊರಿನಿಂದ ಬಂದು ಸೇರಿಕೊಂಡಿವೆ. ಈ ಊರಿನ

ಇವು ನಮ್ಮ
ಟ್ಯಾಂಕುಗಳ ಪೂರ್ವಜರೆ?

# ಆರ್ಮಡಿಲ್ಲೊ

ಜಿ. ಎಸ್. ಭಟ್ಟ

ನಮ್ಮ ಯುದ್ಧದ ಟ್ಯಾಂಕುಗಳ ಪೂರ್ವಜ ಎನ್ನಬಹುದಾದ ಪ್ರಾಣಿ ಆರ್ಮಡಿಲ್ಲೊ. ಪಗ್ಗನಂತೆ ನೆಲ ಕೊರೆಯಬಲ್ಲ ಈ ಪ್ರಾಣಿ ಹೆಚ್ಚಾಗಿ ದಕ್ಷಿಣ ಅಮೇರಿಕದಲ್ಲಿ ವಾಸಿಸುತ್ತದೆ. ಇದರ ಬೆನ್ನಿನ ಮೇಲೆ ಮತ್ತು ಸೊಂಟದ ಮೇಲೆ ಮೂಳೆಯ ಒಂದೊಂದು ಗುರಾಣಿಗಳಿವೆ. ಯುದ್ಧಕ್ಕಾಗಿಯೇ ಈ ಪ್ರಾಣಿ ಸಿದ್ಧವಾದಂತೆ ನಮಗೆ ಅನಿಸುತ್ತದೆ. ಆದರೆ ಪ್ರಕೃತಿಯ ವೈಚಿತ್ರ್ಯವೇ ಬೇರೆ. ಅದು ಮೈಮೇಲೆ ಎರಗುವಂತಹ ಪ್ರಾಣಿಯಲ್ಲ.

ಆರ್ಮಡಿಲ್ಲೊಗೆ 32 ಹಲ್ಲುಗಳಿದ್ದರೂ ಅವು ಬಾಯಿಯ ಒಳಭಾಗದಲ್ಲಿವೆ. ಮುಂಭಾಗದಲ್ಲಿ ಯಾವೂ ಇಲ್ಲ. ಇದು ಸಾಮಾನ್ಯವಾಗಿ ಗೆದ್ದಲನ್ನು ತಿನ್ನುವುದರಿಂದ ಮನುಷ್ಯನಿಗೆ ತುಂಬ ಉಪಕಾರಿ. ಉಷ್ಣ ದೇಶದಲ್ಲಿ ಉಪದ್ರವಕಾರಿಯಾದ ಗೆದ್ದಲುಗಳನ್ನು ಆರ್ಮಡಿಲ್ಲೊ ಭಕ್ಷಿಸುತ್ತದೆ. ಇದಲ್ಲದೆ ಈ ಪ್ರಾಣಿ ಹುಳ-ಹುಪ್ಪಟೆ, ಇಲಿ, ಮೊಟ್ಟೆ, ಕೊಳೆತ ಮತ್ತು ಹಳಸಿದ ಮಾಂಸ, ಹಾವು, ತರಕಾರಿಗಳನ್ನೂ ತಿನ್ನುತ್ತದೆ.

ಇದು ನಿಶಾಚರ. ಆಹಾರವನ್ನು ಅರಸಲು ಸಾಮಾನ್ಯವಾಗಿ ರಾತ್ರಿ ಸಂಚಾರ ಹೊರಡುವುದಾದರೂ ಒಮ್ಮೊಮ್ಮೆ ನಡುಹಗಲಿನಲ್ಲೂ ಇದನ್ನು ಕಾಣಬಹುದು. ಈ ಪ್ರಾಣಿಯ ದೃಷ್ಟಿ ಮಂದ, ಕಿವಿ ಕೆಪ್ಪ. ಇದರಿಂದ ವೈರಿಗಳನ್ನು ಎದುರಿಸುವುದು ಇದಕ್ಕೆ ಸ್ವಲ್ಪ ಕಷ್ಟ.

ಅಪಾಯದಿಂದ ತಪ್ಪಿಸಿಕೊಳ್ಳಲು ಆರ್ಮಡಿಲ್ಲೊ ಬಹು ವೇಗವಾಗಿ ಓಡುತ್ತದೆ. ಮಾಂಸಾಹಾರಿ ಪ್ರಾಣಿ ಬೆನ್ನಟ್ಟಿಕೊಂಡು ಬಂದಾಗ ನೆಲವನ್ನು ಕೊರೆದು ಅಲ್ಲೇ ಹುದುಗಿಕೊಳ್ಳುತ್ತದೆ. ಇದಕ್ಕೆ ಇರುವ ಬಲವಾದ ಉಗುರುಗಳು ಈ ಕೆಲಸದಲ್ಲಿ ತುಂಬ ಸಹಾಯಕವಾಗಿವೆ. ಕಾಡುನಾಯಿ ಮತ್ತು ಗುಳ್ಳೇನರಿಗಳು ಸಾಮಾನ್ಯವಾಗಿ ಈ ಪ್ರಾಣಿಯ ಬೆನ್ನಟ್ಟಿ ಬರುತ್ತವೆ. ಆರ್ಮಡಿಲ್ಲೊ ತನ್ನ ಹೊರ ಕವಚದ ಒಳಗೆ ತನ್ನ ತಲೆ ಮತ್ತು ಬಾಲಗಳನ್ನು ಎಳೆದುಕೊಂಡು ಚೆಂಡಿನಂತೆ ಉರುಳಲೂಬಲ್ಲದು. ಗುಳ್ಳೇ ನರಿ ಮತ್ತು ಕಾಡುನಾಯಿ ಇವನ್ನು ಬೆದರಿಸಿಕೊಂಡು ಹೋಗಿ ನೀರಿಗೆ ತಳ್ಳುತ್ತವೆ. ಇದರಿಂದ ಇವನ್ನು ಸುಲಭವಾಗಿ ಹಿಡಿಯಬಹುದು ಎಂಬುದು ಅವುಗಳ ಹಂಚಿಕೆ.

ಆರ್ಮಡಿಲ್ಲೊ ಸಾಮಾನ್ಯವಾಗಿ ಬಿಲಗಳಲ್ಲಿ ವಾಸಿಸುತ್ತವೆ. ಕೆಲವು ವೇಳೆ ಗುಹೆಗಳನ್ನೂ ತಮ್ಮ ವಾಸಸ್ಥಾನವನ್ನಾಗಿ ಮಾಡಿಕೊಂಡಿರುತ್ತವೆ. ಗುಹೆಯ ಒಳಗಿರುವ ಒಣಗಿದ ಹುಲ್ಲುಗಳು ಎಲೆಗಳು ಅವಕ್ಕೆ ಮೆತ್ತನೆಯ ಹಾಸಿಗೆಯ ಏರ್ಪಾಡು ಮಾಡಿಕೊಡುತ್ತವೆ. ಪ್ರಾಣಿಗಳು ಬೆನ್ನಟ್ಟಿಕೊಂಡು ಬಂದಾಗ ರಕ್ಷಿಸಿಕೊಳ್ಳಲೆಂದು ಇವು ಹಲವು ಬಿಲಗಳನ್ನು ತೋಡಿರುವುದೂ ಉಂಟು.

ಆರ್ಮಡಿಲ್ಲೊ ಗಂಡು ಮತ್ತು ಹೆಣ್ಣು ನೋಡಲು ಒಂದೇ ರೀತಿಯವಾಗಿರುತ್ತವೆ. ಇವುಗಳಲ್ಲಿ ಕೆಲವು ಅವಿಭಕ್ತ ಕುಟುಂಬದ ಜೀವನ ನಡೆಸುತ್ತವೆ. ವಯಸ್ಸಿಗೆ ಬಂದ ಆರ್ಮಡಿಲ್ಲೊಗಳು ಸಾಮಾನ್ಯವಾಗಿ ಪ್ರತ್ಯೇಕ ಬಿಲಗಳಲ್ಲಿ ವಾಸಿಸುತ್ತವೆ. ಒಂದೊಂದು ಬಾರಿ ಆರ್ಮಡಿಲ್ಲೊಗಳು ಗುಂಪಾಗಿ ಆಹಾರವನ್ನು ಹುಡುಕಲು ಹೋಗುವುದುಂಟು. ಹೆಣ್ಣು

ಆರ್ಮಡಿಲ್ಲೊ ತನ್ನ ಮರಿಗಳನ್ನು ತುಂಬ ಪ್ರೀತಿಯಿಂದ ಕಾಣುತ್ತದೆ.

ಆರ್ಮಡಿಲ್ಲೊಗಳ ತವರು ದಕ್ಷಿಣ ಅಮೇರಿಕವಾದರೂ ಇವು ಮಧ್ಯ ಅಮೆರಿಕಕ್ಕೂ ವಲಸೆ ಹೋಗಿವೆ. ಇವುಗಳಲ್ಲಿ ಒಂದು ಜಾತಿಯ ಆರ್ಮಡಿಲ್ಲೊ ಮೆಕ್ಸಿಕೋ ಮತ್ತು ಅಮೇರಿಕ ಸಂಯುಕ್ತ ಸಂಸ್ಥಾನಕ್ಕೂ ವಲಸೆ ಹೋಗಿದೆ.

ಪ್ರಾಗೈತಿಹಾಸ ಕಾಲದಲ್ಲಿ ಕವಚಧಾರಿಗಳಾದ ಹಲವಾರು ಪ್ರಾಣಿಗಳು ದಕ್ಷಿಣ ಅಮೇರಿಕದಲ್ಲಿ ವಾಸವಾಗಿದ್ದವು. ಅವುಗಳಲ್ಲಿ ಗ್ಲಿಪ್ಟೊಡಾನ್ಸ್ ಎಂಬುದು ಆರ್ಮಡಿಲ್ಲೊಗಳ ಸಂಬಂಧಿ. ಕೆಲವು ಗ್ಲಿಪ್ಟೊಡಾನುಗಳು ದೈತ್ಯಾಕಾರದವಾಗಿದ್ದವು. ಇವು ೫ ಅಡಿ ಎತ್ತರ ಮತ್ತು ೧೪ ಅಡಿ ಉದ್ದವಾಗಿದ್ದುವು. ಇವುಗಳ ಚಿಪ್ಪು ದಪ್ಪ ಮತ್ತು ಬಿರುಸಾಗಿತ್ತು. ಆರ್ಮಡಿಲ್ಲೊಗಳಿಗೆ ಹೋಲಿಸಿದಾಗ ಇವು ಹೆಚ್ಚು ಕವಚಧಾರಿಗಳಾಗಿದ್ದುವು. ಆರ್ಮಡಿಲ್ಲೊಗಳ ಮೂಳೆ ಪಟ್ಟೆಗಳ ಲೆಕ್ಕವನ್ನು ಅವಲಂಬಿಸಿ ಅವುಗಳನ್ನು ಹೆಸರಿಸಬೇಕಾಗುತ್ತದೆ. ಇಂದು ಸಾಮಾನ್ಯವಾಗಿ ನಾವು ಕಾಣುವ ಆರ್ಮಡಿಲ್ಲೊಗಳು ಒಂಬತ್ತು ಪಟ್ಟೆಗಳನ್ನುಳ್ಳವು. ರಿಯೊ ಗ್ರಾಂಡನ್ನಿನ ಉತ್ತರಕ್ಕೆ ಈಡೆಂತಾ ಗುಂಪಿನ ಏಕೈಕ ಆರ್ಮಡಿಲ್ಲೊಗಳಿವೆ.

ಆರ್ಮಡಿಲ್ಲೊಗಳ ಸಂತತಿ ಅರ್ಜೆಂಟಿನದವರೆಗೂ ಹರಡಿದೆ. ಹಲವು ಪ್ರದೇಶಗಳಲ್ಲಿ ಈ ಪ್ರಾಣಿಯನ್ನು ಬಡವನ ಹಂದಿ ಎನ್ನಲಾಗುತ್ತದೆ. ಇದರ ಮಾಂಸ ತುಂಬ ರುಚಿಯಾಗಿರುವುದರಿಂದ ಇದೊಂದು ಜನಪ್ರಿಯ ಭಕ್ಷಣೀಯ ಪ್ರಾಣಿಯಾಗಿದೆ. ಒಮ್ಮೆ ಇದರ ಮಾಂಸದ ರುಚಿ ನೋಡಿದವರು ಇನ್ನೊಬ್ಬರಿಗೂ ಅದರ ರುಚಿ ನೋಡಿ ಎನ್ನುವುದು ವಾಡಿಕೆ.

ಆರ್ಮಡಿಲ್ಲೊಗೆ ಪುಟ್ಟ ಕಾಲುಗಳಿದ್ದು ಅಸಹ್ಯವಾದ ಚಿಪ್ಪುಗಳಿದ್ದರೂ ಅದು ಬಲು ಚುರುಕು ಪ್ರಾಣಿ. ಅಮೇರಿಕದ ಅಧ್ಯಕ್ಷ ಥಿಯೋಡೋರ್ ರೂಸ್‌ವೆಲ್ಟ್ ಬ್ರೆಜಿಲ್ಲಿನ ತಮ್ಮ ಅನುಭವಗಳಲ್ಲಿ ಈ ಪ್ರಾಣಿಯನ್ನು ಉಲ್ಲೇಖಿಸಿದ್ದಾರೆ.

ಒಂಬತ್ತು ಪಟ್ಟೆ ಆರ್ಮಡಿಲ್ಲೊ ಇತರ ಆರ್ಮಡಿಲ್ಲೊಗಳಂತೆ ಇದೆಯಾದರೂ ಅದು ಸಾಕು ಬೆಕ್ಕಿನಂತೆ ಕಾಣುವುದು. ಇವು ವಾಸಿಸುವಲ್ಲಿ ಸಾಮಾನ್ಯವಾಗಿ ನೀರು ಕಡಿಮೆ. ಆದರೆ ಇದು ನೀರನ್ನು ಕುಡಿಯುವುದಿಲ್ಲ ಎಂತಿಲ್ಲ. ಆರ್ಮಡಿಲ್ಲೊ ಚೆನ್ನಾಗಿ ಈಜಬಲ್ಲುದು, ನೀರಿನ ತಳದಲ್ಲಿಯೂ ನಡೆಯಬಲ್ಲುದು, ಇರುವೆ ಮತ್ತು ಮಿಡತೆಗಳನ್ನು ಕಂಡೊಡನೆಯೆ ಗಬಕ್ಕನೆ ನುಂಗುತ್ತದೆ.

ಆರ್ಮಡಿಲ್ಲೊ ಒಂದು ಸೂಲಿಗೆ ನಾಲ್ಕು ಮರಿಗಳನ್ನು ಈಯುತ್ತದೆ. ಒಂದು ಸೂಲಿನಲ್ಲಿ ಹುಟ್ಟುವ ಮರಿಗಳೆಲ್ಲ ಸಾಮಾನ್ಯವಾಗಿ ಒಂದೇ ಲಿಂಗದವು ಆಗಿರುವುದು ಈ ಪ್ರಾಣಿಯ ವೈಶಿಷ್ಟ್ಯ. ಆರ್ಮಡಿಲ್ಲೊದ ಮರಿಗಳು ಬೆಳೆದ ಆರ್ಮಡಿಲ್ಲೊಗಳಂತೆಯೇ ಇರುತ್ತವೆ. ಅವು ಹುಟ್ಟಿದ ಕೆಲವೇ ಗಂಟೆಗಳಲ್ಲಿ ತಿರುಗಾಡಬಲ್ಲವು. ಆದರೆ ಪೂರ್ತಿ ಬೆಳೆಯುವ ವರೆಗೂ ಅವುಗಳ ಚಿಪ್ಪುಗಳು ಗಟ್ಟಿಯಾಗಿರುವುದಿಲ್ಲ. ತಾಯಿ ಎರಡು ತಿಂಗಳವರೆಗೂ ಮರಿಗಳ ಪೋಷಣೆ ಮಾಡುತ್ತದೆ. ತಾಯಿ ಹೊರಹೊರಟಾಗ ಮರಿಗಳೂ ಅದನ್ನು ಹಿಂಬಾಲಿಸುವುದುಂಟು.

ಟೆಕ್ಸಸ್ಸಿನಲ್ಲಿ ಒಂಬತ್ತು ಪಟ್ಟೆಗಳ ಆರ್ಮಡಿಲ್ಲೊಗಳೇ ಸರ್ವೇಸಾಮಾನ್ಯ. ಆದ್ದರಿಂದ ಅದನ್ನು ಟೆಕ್ಸಸ್ ಆರ್ಮಡಿಲ್ಲೊಗಳೆಂದೂ ಕರೆಯುತ್ತಾರೆ. ಪ್ರತಿ ಹತ್ತು ಎಕರೆಗೆ ಒಂದರಂತೆ ಆರ್ಮಡಿಲ್ಲೊಗಳನ್ನು ಅಲ್ಲಿ ಕಾಣಬಹುದು.

ಹೆಣ್ಣು ಆರ್ಮಡಿಲ್ಲೊಕ್ಕಿಂತ ಗಂಡು ಗಾತ್ರದಲ್ಲಿ ದೊಡ್ಡದು. ಅದು ೧೩ ಪೌಂಡು ಇರುತ್ತದೆ.

ಇಂಡಿಯನ್ನರು ಪ್ರಾಚೀನ ಕಾಲದ ಕಪ್ಪು ತಲೆಯ ರಣಹದ್ದುಗಳೇ ಆರ್ಮಡಿಲ್ಲೊಗಳಾಗಿವೆ ಎಂದು ನಂಬುತ್ತಾರೆ.

ಆರ್ಮಡಿಲ್ಲೊಗಳಲ್ಲಿ ದೈತ್ಯ ಆರ್ಮಡಿಲ್ಲೊ, ಯಕ್ಷಿಣಿ ಆರ್ಮಡಿಲ್ಲೊಗಳೂ ಇವೆ. ಯಕ್ಷಿಣಿ ಆರ್ಮಡಿಲ್ಲೊಗಳು ಗಾತ್ರದಲ್ಲಿ ತುಂಬ ಚಿಕ್ಕವು. ಅವುಗಳ ಎತ್ತರ ಕೇವಲ ೫ ಅಂಗುಲ ಮಾತ್ರ.



ಆನಂದ ಟಿ. ಎರ್ನೆಲ್

ಶ್ರೀಮತಿ ಸುಚಿತ್ರಾ ಅವರಿಗೆ ಕುತ್ತಿಗೆ ನೋವು, ಎಡ ಭಾಗದಲ್ಲಿ. ಹಾಗಾಗಿ ನನಗೂ ಪದೇ ಪದೇ ಅವರ ಕುತ್ತಿಗೆಯದೇ ನೆನಪು. ಅಲ್ಲದೆ ಈಗ ಹಿಂದುಸ್ತಾನದಲ್ಲಿರುವ ಜಿಮ್ಮಿ ಕಾರ್ಟರ್ ನಾಳೆ ಯಾವ ಸಮಾರಂಭಕ್ಕೆ ಉಪಸ್ಥಿತನಾಗುವವನಿದ್ದಾನೆ ಎಂಬುದು ಪುನಃ ಮರೆತುಹೋಯಿತು. ಸುಧಾ ಮೊನ್ನೆಯಿಂದ ಪಾಕರಿಸಲು ಶುರು ಮಾಡಿದ್ದಾಳೆ. ಸುಚಿತ್ರಾ ಅವರ ಮನೆಗೆ ಹೋಗೋಣ, ಒಂದು ಹತ್ತು ದಿನ ಆರಾಮವಾಗಿದ್ದು ಬರೋಣ ಎಂದರೆ ಅವಳು ಕೇಳಲಿಲ್ಲ. ಸುಚಿತ್ರಾ ಅವರ ಯಜಮಾನ ನಾರಾಯಣ ಬಹಳ ವಿನಂತಿಸಿಕೊಂಡು ಆಮಂತ್ರಣ ಬರೆದಿದ್ದರು. ಅವರ ಮನಸ್ಸು ನೋಯಿಸಬಾರದೆಂದು ಹೊರಟು ಬಂದಿದ್ದೇನೆ. ಆದಾಗಲೇ ಹತ್ತು ದಿನಗಳಾಗಿವೆ. ಪೊಲಾನ್ಸ್ಕಿ ಇಷ್ಟು ಪ್ರಖ್ಯಾತ ಚಲನಚಿತ್ರ ನಿರ್ದೇಶಕನಾಗಿದ್ದು ಈ ರೀತಿ ಮಾಡಬಾರದಿತ್ತು ಎಂದು ನಾರಾಯಣ ಹೇಳಿದರು. ಹೌದೆಂದು ನಾನು ಒಪ್ಪಿಕೊಂಡರೂ ಮನಸ್ಸಿನೊಳಗೆ ಪೊಲಾನ್ಸ್ಕಿಯ ಮೇಲೆ ಸಹಾನುಭೂತಿ ಇದ್ದೇ ಇತ್ತು. ಮೈನರ್ ಹುಡುಗಿಯನ್ನು ಬಲಾತ್ಕಾರವಾಗಿ ಸಂಭೋಗಿಸಬಾರದೆಂದು ಅವನಿಗೂ ತಿಳಿದಿದೆ. ಅಲ್ಲದೆ ಪೋಲೀಸರ ಭಯ ಕೂಡ ಇದ್ದಿರಲೇಬೇಕು. ಆದರೂ ಯಾಕಷ್ಟು ಅನ್ಯಾಯವಾಗಿ ಉದ್ರಿಕ್ತನಾದ. ಕನಿಷ್ಠ ಪಕ್ಷ ತಲೆ ಕೆಟ್ಟು ಹೋಗಿರಬೇಕು; ಅಷ್ಟು ಒಳ್ಳೆಯ ಮೆದುಳಲ್ಲಿ ವಿಕೃತ ಹುಟ್ಟಿರಬೇಕು. ಪೊಲಾನ್ಸ್ಕಿ ಹಾಳಾದ ಸಲ್ಲಾ ಅಂತ ನನ್ನ ಕಳೆವಳ. ನಾರಾಯಣರವರದ್ದು ಸುಖ ಸಂಸಾರ ಅಂತ ಅವರೇ ಈ ಹತ್ತು ದಿನಗಳಲ್ಲಿ ಅನೇಕ ಬಾರಿ ನನ್ನಲ್ಲಿ ಹೇಳಿಕೊಂಡರು. ನೋಡಿದರೂ ಹಾಗೆಯೇ ಕಾಣುತ್ತಾರೆ. ಸುಚಿತ್ರಾರಲ್ಲಿ ಬೇಕಾದರೆ ನೀವು ಯಾವ ನಿಷ್ಕರ್ಷೆಯನ್ನೇ ಮಾಡಿ, ಅವರ ಬಿಪ್ಪಿಗಳ ಬಗ್ಗೆ ಮಾತಾಡಬೇಡಿ, ಐ. ಎಸ್. ಜೋಹರ, ಪ್ಯಾಟೀ ಹಸ್ಟ್, ಜಾಕಲಿನ್ ಕೆನೆಡಿಯ ಬಗ್ಗೆ ಹೇಳಬೇಡಿ. "ನೀವು ಮುಂಬಾಯಿಯಲ್ಲಿ ಇರುವುದು ತಪ್ಪು" ಅಂತ ಸುಚಿತ್ರಾ ಹೇಳುತ್ತಿದ್ದಾರೆ. ನಾನು ಕೂಡಾ ಸುಧಾಳನ್ನು ಕರೆದುಕೊಂಡು ಬಂದು ಮುಂಬಾಯಿಯಿಂದ ನೂರ ಎಂಬತ್ತು ಮೈಲು ದೂರ ಇರುವ ಈ ಬಡಾವಣೆಗೆ ಬರಬೇಕಂತೆ. ಮುಂಬಾಯಿಯ ನೀತಿ ಮಟ್ಟ ಹಾಳಾಗಿದೆ ಎಂದು ಅವರ ಅಭಿಪ್ರಾಯ. ಒಂದೇ ರಾತ್ರಿಯಲ್ಲಿ ನೂರಾರು ಹೆಂಗಸರು ಕಳ್ಳ ಬಸುರಿಯರಾಗುತ್ತಾರೆ ಎಂದು ನಾರಾಯಣ ಹೇಳಿದಾಗ ಶಬ್ದಗಳ ಸತ್ಯವನ್ನು ಸಹಿಸಲಾರದೆ ಸುಚಿತ್ರಾರವರು ಗಂಡನ ಕಡೆ ದ್ವೇಷದಿಂದ ದುರುಗುಟ್ಟಿ ನೋಡುತ್ತಾರೆ. 'ಹಾಯ್ ವಿಠೋಬಾ' ಅನ್ನುತ್ತಾರೆ.

ಬಿ. ಎ. ಕಲಿತ ಸುಚಿತ್ರಾ ಅವರ ತಲೆ ಚುರುಕು ಇದೆ. ಇಂಟೆಲಿಜಂಟಾಗಿ ಮಾತಾಡ್ತಾರೆ. ಆದರೆ ಎಲ್ಲವನ್ನೂ ಕೇಳಲು ಒಪ್ಪದೆ ಇರುವುದು ಅವರ ಒಂದು ದೋಷ. "But she is a good lady. Yes yes ಹೆಂಡತಿ ಅಂದರೆ ಪರ್ಫೆಕ್ಟ್ ಹೆಂಡತಿ. ಹಾ...ಹ್ಹಾ... ಈಕೆಯಿಂದಾಗಿ ನಾನು ಮೇಲೆ ಬಂದೆ. I mean ಇಷ್ಟೆಲ್ಲ ಕಾರಭಾರ ಮಾಡುವಂಥವನಾದೆ. ಹಾ...ಹ್ಹಾ..." ನಾರಾಯಣರವರ ಹಲ್ಲುಗಳ ಕೆಳ ಸಾಲಿನಲ್ಲಿ ದವಡೆಯ ಹತ್ತಿರ ಒಂದು ಹಲ್ಲು ಇಲ್ಲ, ಬಂಗಾರದ ತುಂಡು ಇದೆ. ಸುಚಿತ್ರಾರ ಸುಂದರ ಮೊಗದ ತುಂಬಾ ಉಲ್ಲಸಿತ ನಗು! ನಾಚಿಕೊಳ್ಳಲು ಕೊರಳಿನ ನೋವು ಅಡ್ಡ ಬಂತು. ಮದುವೆಯಾಗಿ ನಾಲ್ಕು ವರ್ಷಗಳಾಗಿವೆ. ಮಕ್ಕಳು ಇಲ್ಲ. ಪಂಢರಪುರಕ್ಕೆ ಎರಡು ಬಾರಿ ಹೋಗಿದ್ದಾರೆ. ರಾಮೇಶ್ವರಕ್ಕೆ ಒಂದು ಬಾರಿ. ಕಾಶಿಗೆ

ಹೋಗುವ ಆಲೋಚನೆ ಇದೆ. ಒಂದೊಂದು ವೇಳೆ ಅನೀತಿಯು ಅನಿವಾರ್ಯತೆ ನೀತಿ ಆಗುತ್ತದೆ ಎಂದರೆ ಅವರು ಒಪ್ಪಲಿಲ್ಲ. ಲಾಜಿಕ್‌ನಲ್ಲಿ ಸ್ವಲ್ಪ ಹಿಂದೆ ಇದ್ದಾರೆ. ಅಂಥವನು, ಇಂಥವನು, ಅಂಥವಳು, ಇಂಥವಳು ರೈಲು ಹಳಿಗೆ ತಲೆ ಕೊಟ್ಟು ಸಾಯಲಿ ಎಂದು ಗಡಿಗಡಿ ಹೇಳುತ್ತಾರೆ. ಮತ್ತೆ ಐಯೋಡೆಕ್ಸ್ ತೆಗೆದುಕೊಂಡು ಪುನಃ ಕುತ್ತಿಗೆ ನೀವುತ್ತಾರೆ. ನಾರಾಯಣರವರು, "ಇಲ್ಲಿ ಕೊಡು; ನಾನು ಹಚ್ಚುತ್ತೇನೆ" ಅನ್ನುತ್ತಾರೆ. ಬೇಡಾ ಅನ್ನುತ್ತಾರೆ ಸುಚಿತ್ರಾ. ನನ್ನ ಹೆಂಡತಿ ಸುಧಾ ಆದರೆ ಮಂಚದಲ್ಲಿ ಕವಚಿ ಮಲಗಿಕೊಂಡು, "ಪತ್ರೇನಾ ಇಲ್ಲಾ ಡೈವೋರ್ಸ್ ಕೊಡಬೇಕೆ?" ಎಂದು ನಕ್ಕು ಕೇಳುವಂಥವಳು. ಮುಂಬಾಯಿಯ ಗಡಿಬಿಡಿ ಬದುಕಿನಲ್ಲೂ ಅವಳು ಏಕೈಕಳಾಗಿ ನಿಲ್ತಾಳೆ. ಎಂತಹ ಅಶಾಂತಿಯಲ್ಲೂ ನನ್ನ ಎದೆಯೊಳಗೆ ಬರುವ ಪುರುಸೊತ್ತು ಮಾಡಿಕೊಂಡು ಬರುತ್ತಾಳೆ. "ಹಾಗೆ ನಾನೂ ಪರಿಶುದ್ಧಳು ಅಲ್ರಿ. ಕಾಲೇಜು ಕಾಲದಲ್ಲಿ ಒಬ್ಬಾತನೊಡನೆ ಸಖ್ಯ ಬೆಳೆಸಿದ್ದೆ. "Excuse me" ಎಂದಳು. ಬಹಳ ತೆಳುವಾಗಿ ನಕ್ಕಳು. ಮತ್ತೆ ಮುಖ ಮ್ಲಾನವಾಗಿ ದುಃಖ ಒತ್ತರಿಸಿ ಬಂತು. ಅಲ್ಲೇ ಮೊಣಕಾಲುಗಂಟಿನ ಮೇಲೆ ಮುಖ ಆನಿಸಿ ಅಳತೊಡಗಿದಳು, ಹುಚ್ಚಿ.

ಪ್ರಶಾಂತ ಬದುಕಿನತ್ತ ಬಂದರೆ ಅನ್ಯಾಯ, ಅಪಘಾತಗಳು ಆಗುವುದಿಲ್ಲ ಎಂದು ಸುಚಿತ್ರಾರ ಅಭಿಪ್ರಾಯ. ಹೌದು, ಸಾಧ್ಯವಿದೆ. ರೇಖಾಸಂಧಿಗಳ ಸಂಪರ್ಕ ಕಡಿಮೆ. ವಸ್ತುಗಳು ಕಡಿಮೆ. ಕಣ್ಣುಗಳು, ಕಿವಿಗಳು, ಮೊಲಗಳು, ಅಶ್ಲೀಲ ಸಾಹಿತ್ಯಗಳು ಕಡಿಮೆ ಅಲ್ವೆ? ಸಾಧ್ಯವಿದೆ. ಒಂದು ವೇಳೆ ಸುಧಾ ಇಲ್ಲಿ ಇರುತ್ತಿದ್ದರೆ, ಅವಳಿಗೆ ಕಾಲೇಜಿನಲ್ಲಿ ಗೆಳೆತನವೂ ಆಗುತ್ತಿರಲಿಲ್ಲ! ಸರಿ. ಯೂ ಆರ್ ಕರೆಕ್ಟ್ ಮಿಸೆಸ್ ಸುಚಿತ್ರಾ.

ನಗರಗಳು ಬೆಳೆಯುತ್ತಿವೆ.

"Oh! Calcutta, you bitch, you piss yellow leprosy like jaundiced urine like a magneficient fresco. Flower fool, mute, ludicrous." ಮುಂಬಾಯಿಯಂತೂ ಕೇಳುವುದೇ ಬೇಡ. ಪ್ಯಾರಿಸ್, ನ್ಯೂಯಾರ್ಕ್, ಹಾಂಗ್‌ಕಾಂಗ್‌ಗಳ ಮಿಕ್ಸ್ಚರ್. ನಾರಿಮನ್ ತುದಿಯಲ್ಲಿ ಎತ್ತರೆತ್ತರ ಕಟ್ಟಡಗಳು ಬೆಳೆಯಲಿ. ಒಬ್ಬ ಗಂಡ ಇನ್ನೊಬ್ಬನ ಹೆಂಡತಿಯನ್ನು ಯಾಕೆ ಪ್ರೀತಿಸಬೇಕು? ಆಕೆ ಯಾರ್ಯಾರಿಗೆ ಮಕ್ಕಳನ್ನು ಯಾಕೆ ಹೆರೆದು ಕೊಡಬೇಕು? ಅದಕ್ಕಾಗಿಯೆ ಬಂದವಲ್ಲವೆ ನಿರೋಧ, ವಂಕೆಗಳು! ಅದು ಇಟ್ಟುಕೊಂಡರೆ ಯಾರ ಯಾವುದರ ಕುರುಹೂ ಉಳಿಯುವುದಿಲ್ಲ. "ಓಹ್...ನನ್ನಿಂದ ಸಹಿಸಲಾಗೋಲ್ಲ. ಅನೀತಿ. I hate this world, this time, this civilization." ಇಲ್ಲರಿ ಮಿಸೆಸ್ ಸುಚಿತ್ರಾ. ಎಲ್ಲಾ ಕಡೆಯೂ ಹಾಗೇನೆ. ಇವು ಕಾಲ, ಪ್ರಾಣ, ಇರುವಿಕೆ ಮತ್ತು ಪ್ರಗತಿಯ ಅನಿವಾರ್ಯಗಳು. ಎಲ್ಲವನ್ನು ಒಂದು ಬೀಜಗಣಿತದಲ್ಲಿ ಹಾಕಿದರೆ ಒಂದನ್ನೊಂದು ಹೊಡೆದುಕೊಳ್ಳುತ್ತವೆ, ಸಾಯುತ್ತವೆ. ಉತ್ತರ ಸೊನ್ನೆಯಾಗುತ್ತದೆ. ಈ ಉತ್ತರದಲ್ಲಿ ಅನೀತಿ, ಅನ್ಯಾಯ, ಅಸಿಂಧುಗಳ ಕುರುಹುಗಳು ಉಳಿಯುವುದಿಲ್ಲ.

ಶ್ರೀಮತಿ ಸುಚಿತ್ರಾ ಆಕಳಿಸುತ್ತಾರೆ. ದೇವರ ದಯೆಯಿಂದ ಅವರಿಗೆ ಹಲ್ಲು ನೋವಿಲ್ಲ. ಮುತ್ತುಗಳನ್ನು ಜೋಡಿಸಿಟ್ಟಂತೆ ಸುಂದರವಾದ ಹಲ್ಲುಗಳಿವೆ ಅವರಿಗೆ.

ಕೋಣೆಯೊಳಗೆ ಬಿಸಿಲು ಕೋಲುಗಳು ಬಾರವು. ಕಿಟಕಿಯಿಂದ ಹೊರ ನೋಡಿದರೆ ದೂರದಲ್ಲಿ ಉದ್ದುದ್ದ ಮರಳುದಿನ್ನೆಗಳು. ಮತ್ತೆ ಅದರಾಚೆ ಪರದೆ ಇಳಿದಂತೆ ದೊಡ್ಡ ಆಕಾಶ. ಕಿಟಕಿಗಳು ದೊಡ್ಡದಾಗಿವೆ. ಹಜಾರದಲ್ಲಿ ಮೇಲೆ ಜಂತಿಗಳಲ್ಲಿ ಯಾವುದೋ ಹಸಿರು ಬಳ್ಳಿ ಹರಿದಾಡಿದೆ. ಊರ್ಧ್ವಕೋನದಲ್ಲಿ ಬೆಳಕು ಬಂದರೆ ನೆರಳು ಛಾವಣಿ ಬರುತ್ತೆ. ಕೆಳಗೆ ಬಿದಿರಿನ ಪಲ್ಲಂಗ, ಬಿದಿರಿನ ಕುರ್ಚಿಗಳು, ಬಿದಿರಿನ ಟೀಪಾಯಿ. ಹಗುರವಾದ ಎಳೆ ಎಳೆ ಗಾಳಿ ಬೀಸುತ್ತೆ. ಶುಭ್ರವಾದ ಉಲ್ಲಸಿತ ಬೆಳಕು ಬರುತ್ತೆ. ಒಳಗೆ ಒಂದು ಬೆಕ್ಕು ಇದೆ. ಮತ್ತೊಂದು ನಾಯಿ ಇದೆ.

"ನಾವು ಕಡಿಮೆ ಯೋಚಿಸುತ್ತೇವೆ. ನಮ್ಮ

ಮೆದುಳಿಗೆ ವಿಶ್ರಾಂತಿ ಇದೆ. ನಿಮ್ಮಂತೆ ಅಲ್ಲ. ನೂರೊಂದು ವಿಧ–ವಿಧ ಆಲೋಚನೆಗಳು. ಗ್ಲೂಕೋಸ್–ಡಿ ತೆಗೆದುಕೊಳ್ಳುವ ಅಗತ್ಯವಿಲ್ಲ” ಆಕಳಿಸಿದ್ದ ಸುಚಿತ್ರಾ ಪುನಃ ಮಾತಾಡತೊಡಗುತ್ತಾರೆ. ಹೌದೆಂದು ಒಪ್ಪಿದೆ. ಶಿವಾಜಿ ಪಾರ್ಕಿಗೆ ಭಾಲರಾತ್ರಿಯನ್ನು ಕಳೆಯಲು ಹೋಗಿ ಹಿಂದಿರುಗುವಾಗ ದಾದರಿನಲ್ಲಿ ಟ್ರೇನ್ ಸಂಚಾರ ನಿಂತು ಹೋಗಿದೆ ಅಂತ ವರ್ತಮಾನ ಸಿಗುತ್ತದೆ. ವಾಜಪೇಯಿ ಯು. ಎನ್. ಓ. ದಲ್ಲಿ ಹಿಂದಿ ಮಾತಾಡುವುದು ಒಳಿತೇ? ಡಿಜಿಟಲ್ ಮಾರ್ಕೆಟಿನಲ್ಲಿ ಕಂಪೋನೆಂಟ್‌ಗಳ ಪೈಪೋಟಿ ಹೆಚ್ಚಾಗಿದೆ. ಸ್ವಲ್ಪ ಹೆಚ್ಚು ಡೀಲರುಗಳನ್ನು ಹಿಡಿಯಬೇಕು. ನಳದಲ್ಲಿ ಸರಿಯಾಗಿ ನೀರು ಬರುವುದಿಲ್ಲ, ನಾವೊಂದು ಕೈಪಂಪು ಹಚ್ಚಿ ನೀರು ಎಳೆಯಬೇಕು ಎಂದು ಸುಧಾ ಹೇಳಿದ್ದಳು. ಬೇಡ, ಬೇರೆ ಮಹಡಿಯವರಿಗೆ ಅನ್ಯಾಯ ಎಂದೆ. ಮನೆಯನ್ನೆ ಬದಲಾಯಿಸುವ. ಬೇರೆ ಕಡೆಗೆ ಹೋಗೋಣ. ಇದು ಹಳತು ಕಟ್ಟಡ ಎಂದರೆ, ಇರಲಪ್ಪ, ಇಲ್ಲೇ ಇರೋಣ ಎಂದು ಪುನಃ ಪದಾಗಿ ಪೊಟ್ಟು ಪೊಟ್ಟಾಗಿ ಮಾತಾಡತೊಡಗುತ್ತಾಳೆ. ನನಗೆ ಇವಳ ವರ್ತನೆಯೇ ಅರ್ಥವಾಗುವುದಿಲ್ಲ. ಪಕ್ಕದ ಮನೆಯ ಹೆಂಗಸೊಂದಿಗೆ ಬಹಳ ಗೆಳೆತನವಿದೆ. ಕಟ್ಟಡ ಹಳತಾದರೇನು. ಗೆಳೆತನ ಬಿಡಲಿಕ್ಕಾಗುತ್ತೇ? ರೂಮು ನಂಬರ್ ೬೮೮ ಕೊಠಾರಿಯವರ ಮಗ ಬಸ್ಸಿನಡಿಗೆ ಬಿದ್ದು ಸಾಯುತ್ತಾನೆ. ಅದರ ಮರುದಿನವೆ ನೂರ್ ಮಂಜಿಲ್‌ಗೆ ಬೆಂಕಿ ಹಿಡಿಯುತ್ತದೆ. ನಮ್ಮ ಸುಧಾಳ ಗೆಳತಿಯೊಬ್ಬಳು ಮೇಲಿನಿಂದ ಹಾರಿ ಸಾಯುತ್ತಾಳೆ. ಕೆಳಗೆ ಬಂದರೆ, ರುಸ್ತುಮ್ಜಿ ಗಲ್ಲಿಯ ಗಣಪತಿ ಫಂಡಿನವರು ಚಂದಾ ಪುಸ್ತಕದೊಂದಿಗೆ ಎದುರಾಗುತ್ತಾರೆ. ತಿರಸ್ಕರಿಸಿ ಸೀದಾ ಹೋದರೆ ಮೊದಲೇ ಮವಾಲಿಗಳು. ಇವಳು ರಸ್ತೆಯಲ್ಲಿ ಒಬ್ಬಂಟಿಗಳಾಗಿ ಹೋಗುವಾಗ ಹೇ ಹೇ ಅಂತ ಕೂಗ್ತಾರೆ. ಸಂಜೆ ಮರಿಯಾನ್ ಡಿಸೋಜ ದುಬಾಯಿಗೆ ಹೋಗ್ತಾನೆ. ಏರ್‌ಪೋರ್ಟಿಗೆ ಹೋಗಬೇಕು. “ತುಮ್ ಮಾದರ್‌ಚೋದ್ ಹೈ…ಸಾಲಾ…ತೆರೀ ಬೆಹೆನ್ ಕೀ…” ಐ ಆ್ಯಮ್ ಸಾರಿ… ನಿನ್ನ ಕಾಲನ್ನು ನಾನು ನೋಡಿಲ್ಲ… ಕಾಲಲ್ಲಿ ಮೆಟ್ಟಿಲ್ಲದ ರಸ್ತೆ ಹುಡುಗ, ನನಗೆ ಇನಿತೂ ಮರ್ಯಾದೆ ಕೊಡದೆ ಬೈದು ಬಿಡುತ್ತಾನೆ. ಅದೇನೆಂದರು ನನಗೆ ಅಂತಸ್ತಿಲ್ಲ. ಸ್ಥಿತಿ ಇಲ್ಲ. ವಿದ್ಯೆ ಇಲ್ಲ. ಟ್ರೈನಿನ ಗರ್ದಿ ಹೀಗೆ. ಅವನ ಕಾಲ ಬೆರಳಲ್ಲಿ ನೆತ್ತರು ಬಂತು. ನಾನೇನು ಮಾಡಲಿ? ಅಲ್ಲದೆ ನಾನು ಅಂಬಾಸಿಡರ್ ಹೋಟೆಲಿನಲ್ಲೊಂದು ಕಾನ್ಫರೆನ್ಸ್‌ಗೆ ಉಪಸ್ಥಿತನಾಗಲಿದ್ದೆ. "I am in hurry, excuse me madam" ನಿಲ್ದಾಣದ ಬಾಗಿಲಲ್ಲೇ ಮಾತಾಡ್ತಾ ನಿಲ್ತಾರೆ ಈ ಹೆಂಗಸರು. ತಿರುಗಿ ನೋಡುತ್ತೇನೆ! ಹುಂ…ಸುಟ್ಟವಳು ಮೂರುವರೆ ರೂಪಾಯಿ ಸೂಳೆ. Let it be: I am in hurry. ಲತೀಫನ ಕಿಸೆಗೆ ಸಿಗರೇಟಿಗೊಂದು ಕೈ ಹಾಕಿದರೆ. ನಿರೋಧ ಪೊಟ್ಟಣ ಸಿಕ್ಕಿತು. ಏನ್ ಮಗನೇ… ಸಂಸಾರ ಹಾಳ್ಮಾಡ್ತಿಯಲ್ಲ ಎಂದು ಹೇಳಿದೆ. ಹ್ಹ ಹ್ಹ…ಎಂದು ನಟ ಪ್ರೇಮನಾಥನಂತೆ ನಕ್ಕ. "ಲೀನಾ ದೇಸಾಯಿಯನ್ನು ಫಟಾಯಿಸಿದ್ದೇನೆ ಮುಂದೇನು" ಎಂದ. ಲತೀಫ. ಕವಿಯೂ ಅಲ್ಲ. ಕಾಸ್ಮೆಟಿಕ್ಸ್ ಫ್ಯಾಕ್ಟರಿಯ ಸೇಲ್ಸ್ ಮ್ಯಾನೇಜರ್. ಸುಂದರಿಯಾದ ಹೆಂಡತಿ ಇದ್ದಾಳೆ. ಬಾಂದ್ರಾದಲ್ಲಿ ಮನೆ ಇದೆ. ಎರಡು ಮಕ್ಕಳಿವೆ. ಅಂಬಾಸಿಡರ್ ಹೋಟೆಲಿನಿಂದ U. S. I. S. ಲೈಬ್ರರಿಗೆ ಐದು ನಿಮಿಷದ ದಾರಿ U. S. I. S.. ಲೈಬ್ರರಿಯಲ್ಲಿ ಅಮೇರಿಕನ್ ಪತ್ರಿಕೆಗಳು ತುಂಬಾ ಇವೆ. ಚೆನ್ನಾಗಿವೆ. ಸುಧಾಳ ತಮ್ಮ ಪ್ರಕಾಶ ಇತ್ತೀಚೆಗೆ ಮೆಟ್ರಿಕ್ ಪಾಸಾದ. ಜೂನಿಯರ್ ಕಾಲೇಜಿನಲ್ಲಿ ಕಲಿಯುತ್ತಾನೆ. ಸುಧಾಳ ತಂದೆಗೆ ಒಂದು ಸಂದೇಶ ಕೊಡಬೇಕಿತ್ತು. ಫೋನು ಮಾಡಿದಾಗ ಅವರು ಆಫೀಸಿನಲ್ಲಿ ಇರಲಿಲ್ಲ. ಹೇಗೂ ನ್ಯೂ ಮೆರಿನ್ ಲೈನ್ಸಿನ U. S. I. S. ಲೈಬ್ರರಿಯಲ್ಲಿ ಪ್ರಕಾಶ ಓದುತ್ತಾ ಇದ್ದಾನೆ. ಅವನೊಂದಿಗೇ ಕಳುಹಿಸುವುದು ಒಳಿತು ಎಂದು ಒಳಗೆ ಹೋದೆ. ಪ್ರಕಾಶ ಇಡೀ ದಿನ ಓದುತ್ತಾ ಇರುತ್ತಾನೆಂದು ಸುಧಾಳಿಗೆ ಖುಷಿ. ಮೂಲೆಯಲ್ಲೊಂದು ಕಡೆ ಅವನು ಬಹಳ ತಲ್ಲೀನನಾಗಿ ಓದುತ್ತಾ ಇದ್ದ. ನನ್ನನ್ನು ನೋಡಿದ ಕೂಡಲೆ ತಾನು ಓದುತ್ತಿದ್ದ Esquire ಪತ್ರಿಕೆಯನ್ನು ಪುಟ ಗುರುತು ಮಾಡಿ ಕವಚಿ

ಇಟ್ಟೆ. ನಾನು ಕ್ಷೇಮ ಸಮಾಚಾರ ಆರಂಭಿಸಿದೆ. ಬಹಳ ಓದುತ್ತೀ ಎಂದು ಪತ್ರಿಕೆ ತೆರೆದೆ. "The Neuclear Universal Foundation of Hollywood, California has developed a programme to increase the size and thickness of the male organ using only a tape or cassette player and the hands." ಪ್ರಕಾಶನ ಆ ಪಕ್ಕದಲ್ಲಿ ಕಾಲೇಜು ಪುಸ್ತಕಗಳು. ತುಂಬಾ ಜ್ಞಾನ ಗಳಿಸುತ್ತೀ ಎಂದು ಹೇಳುವಂತೆ ಮೊಗಚಿ ಮೇಲೆ ಮುಕುಟ ರೇಖೆ ತೆಂಪು ಒಂದೊಂದೇ ಪುಸ್ತಕಗಳನ್ನು ಜಪಿಸುತ್ತಾ ಕೂತೆ. ನಡುವೆ ಎರಿಕಾ ಜೋಂಗಳ How to save your own life ಸಿಕ್ಕಿತು. ಎರಿಕಾ ಜೋಂಗಳ ಪರಿಚಯ ನನಗೂ ಇದೆ. ಅವಳ ಪುಸ್ತಕದಲ್ಲಿ ಇರುವುದು ಒಂದೇ ಶೀರ್ಷಿಕೆ. ಆಮೇಲೆ ಒಳಗೆ ಯೋನಿ ಲಿಂಗಗಳ ಕಸರತ್ತು ಕಥೆ. ಅವಳು ಅವಳದೇ ಜನನೇಂದ್ರಿಯದ ವಿಲಕ್ಷಣತೆಯ ಬಗ್ಗೆ ರಸವತ್ತಾಗಿ ಹೇಳುತ್ತಾಳೆ. ಸುಧಾಳಿಗೆ ಪುಣೆಯ ಪ್ರಭಾಕರ ಕುಲಕರ್ಣಿ ಕುಟುಂಬದ ಪತ್ರ ಬಂದಿದೆ. ಅವರ ಮಗಳು ಅಪರ್ಣಾಳಿಗಾಗಿ ಮುಂಬಾಯಿಯಲ್ಲಿ ಗುಣವಂತ ಹಾಗೂ ಒಳ್ಳೆಯ ಕೆಲಸದಲ್ಲಿರುವ ಹುಡುಗ ದೊರೆತರೆ ತಿಳಿಸಿ ಎನ್ನುವಂತೆ ಕೇಳಿಕೊಂಡಿದ್ದಾರೆ–ಎಂಬ ಸಂದೇಶವನ್ನು ಪ್ರಕಾಶನಿಗೆ ಹೇಳಿ ನಾನು ಲೈಬ್ರರಿಯಿಂದ ಹೊರಬರುತ್ತನೆ. ಕ್ರಾಸ್ ಮೈದಾನದಲ್ಲಿರುವ ಸರ್ಕಸ್ ಟೆಂಟಿನ ಹೊರಗಡೆ ಒಬ್ಬಳು ಮದ್ರಾಸಿ ವಾಚಾಳಿ ಹೆಂಗಸು ತಮಿಳಿನಲ್ಲಿ ತನ್ನ ಗಂಡನಿಗೆ ಬಯ್ಯುತ್ತಾಳೆ. ಗಡಿಗಡಿ ತನ್ನ ಸೀರೆ ಸುತ್ತಿಗೆ ಕೈ ಹಾಕಿ ಕಚ್ಚಿ ಕರೆಯುತ್ತಾಳೆ. ಗಂಡ ಮತ್ತಾಗಿ ಕುಡಿದು ಧೂಳಿನಲ್ಲಿ ಹೊರಳುತ್ತಿದ್ದಾನೆ. ನಾನು ಸುಧಾಳಿಗೆ ಮಾತ್ರೆಗಳನ್ನು ತರುವ ನೆನಪಿನಲ್ಲಿ ಅಕ್ಬರಾಲಿ ಸ್ಟೋರಿನತ್ತ ಬೇಗ ಬೇಗ ಕಾಲು ಹಾಕುತ್ತೇನೆ. ಹೀಗೆ ಇತ್ಯಾದಿ ಇತ್ಯಾದಿ.

ನಾರಾಯಣರವರ ಮನೆಗೆ ಸಂಧ್ಯಾಕಾಲ ಬಹಳ ಸುಂದರವಾಗಿ ಬರುತ್ತೆ. ನಾವು ಮೂವರೂ ಮರಳದಿನ್ನೆಯ ಕಡೆ ವಿಹಾರಕ್ಕೆ ಹೋಗುತ್ತೇವೆ. ಮನಸ್ಸಿಗೆ ಆನಂದವಾಗುವ ವಿಷಯುಗಳ ಬಗ್ಗೆ ಮಾತಾಡ್ತೇವೆ. ಸುಚಿತ್ರಾ ಉಲ್ಲಸಿತರಾಗಿ ನಗುತ್ತಾರೆ. ಅವರು ನಗುತ್ತಾ ನಗುತ್ತಾ ಮರಳ ದಿನ್ನೆಯಲ್ಲಿ ನಮ್ಮನ್ನು ಬಿಟ್ಟು ಒಬ್ಬರೇ ಮುಂದೆ ಹೋಗುತ್ತಾರೆ, ಮರಳಿನಲ್ಲಿರುವ ನಯವಾದ ಕಲ್ಲುಗಳನ್ನು ಆರಿಸುವುದಕ್ಕಾಗಿ. ಇತ್ತ ಗಗನದ ರಂಗು ಬದಲಾಗುತ್ತಾ ಇದೆ. ಸುಚಿತ್ರಾರವರು ದೂರ ಹೋದ ಅವಕಾಶವನ್ನು ಪಡಕೊಂಡು ನಾರಾಯಣ ಹೇಳುತ್ತಾರೆ, "Other wise she is happy all over.. ಮಗು ಇಲ್ಲ. ನಾನೆಷ್ಟೆಷ್ಟೋ ಪ್ರಯತ್ನ ಮಾಡಿದೆ." ಸ್ವರ ತುಸು ನಡುಗುತ್ತದೆ. "ಸುಚಿತ್ರಾಳಿಗೆ ಒಮ್ಮೊಮ್ಮೆ ನೆನಪಾದರೆ ಇಡೀ ದಿನ ಅಳುತ್ತಾ ಕೂಡ್ತಾಳೆ. ಏನು ಮಾಡುವುದು ಹೇಳಿ. ಪಂಢರಪುರ, ರಾಮೇಶ್ವರಕ್ಕೆಲ್ಲ ಅವಳ ಒತ್ತಾಯದಿಂದಲೇ ಹೋದುದು. ದೋಷ ನಮ್ಮಲ್ಲೇ ಇರುವಾಗ ಯಾವ ದೇವಸ್ಥಾನಕ್ಕೆ ಹೋಗಿ ಏನಾದೀತು ಹೇಳಿ?" ನಾರಾಯಣರವರು ನನ್ನ ಮುಖದತ್ತ ನೋಡುತ್ತಾರೆ. ಪುನಃ ಅಧೋಮುಖರಾಗಿ ಮರಳನ್ನೇ ನೋಡುತ್ತಾ ಹೇಳುತ್ತಾರೆ, "ಸುಚಿತ್ರಾಳ ಆರೋಗ್ಯ ಒಮ್ಮೊಮ್ಮೆ ತುಂಬಾ ಕೆಡುತ್ತದೆ. ಬಹಳ ನಾಜೂಕು ದೇಹಸ್ಥಿತಿ ಅವಳದ್ದು. ಮೀರತ್‌ನ ನಮ್ಮ ಗೆಳೆಯರೊಬ್ಬರು ತಮ್ಮ ಹೆಂಡತಿಯೊಂದಿಗೆ ಹೋದ ತಿಂಗಳು ನಮ್ಮಲ್ಲಿಗೆ ಬಂದಿದ್ದರು. ಅವರ ಮಗು ತುಂಬಾ ಸುಂದರವಾಗಿತ್ತು. ಇವಳು ಅವರೊಡನೆ ನೇರವಾಗಿಯೆ ಕೇಳಿಬಿಟ್ಟಳು, ನಮಗೆ ಮಗುವನ್ನು ದತ್ತಕ ಕೊಡ್ತೀರಾ ಅಂತ. ಅದು ಅವರಿಗೆ ಸರಿಯಾಗಲಿಲ್ಲ. ಸಿಟ್ಟು ಬಂದಿತ್ತು. ಸರಿಯಾದ ಉಪಚಾರ ತೆಗೆದುಕೊಳ್ಳದೇ ಹೊರಟುಹೋಗಿದ್ದರು. ಆ ರಾತ್ರಿ ಈಕೆಯ ಅವಸ್ಥೆ ಕೇಳಬೇಡಿ ಮಿ. ಅಶೋಕ."

ಸುಚಿತ್ರಾ ಕಲ್ಲ ಹರಳುಗಳೊಂದಿಗೆ ಹಿಂದಿರುಗಿ ಬರುತ್ತಿದ್ದಾರೆ. ನಾರಾಯಣರವರು ಒಮ್ಮೆಗೆ ಮಾತು ನಿಲ್ಲಿಸಿ ಪುನಃ ವೇಗವಾಗಿ ಮಾತಾಡತೊಡಗುತ್ತಾರೆ. "ನಾನು ನಿಶ್ಚಯಿಸಿದ್ದೇನೆ ಮಿಸ್ಟರ್ ಅಶೋಕ್, ಈ ಪೊಳ್ಳು ನೀತಿ ಅನೀತಿ. ಸಂಸ್ಕಾರ ಅದು ಇದು ಯಾವುದಕ್ಕೂ ತಲೆಬಾಗಬಾರದು. ಅವೆಲ್ಲ ಸುಳ್ಳು. ನನ್ನ ವೀರ್ಯ

ದಲ್ಲಿ ಮಗು ಹುಟ್ಟಿಸುವ ಶಕ್ತಿ ಇಲ್ಲದಿದ್ದರೆ…" ನಾರಾಯಣರವರ ಸ್ವರ ಕುಂಠಿತವಾಗುತ್ತದೆ. ಅವರ ಮೊಗದಲ್ಲಿ ನಾಚಿಕೆ, ಅವಮಾನ ತುಂಬುತ್ತದೆ. ಮಾತು ಒಮ್ಮೆಗೆ ನಿಂತಿತು. ಸುಚಿತ್ರಾ ಏಳೆಂಟು ಸಣ್ಣ ಪುಟ್ಟ ಕಲಾತ್ಮಕ ಕಲ್ಲುಗಳನ್ನು ತಂದು ನಮಗೆ ತೋರಿಸಿದರು. ನಾನು ನನ್ನ ಮೆಚ್ಚಿಗೆ ವ್ಯಕ್ತಮಾಡಿ ಮರಳ ದಿನ್ನೆಯಿಂದ ಎದ್ದು ಹಿಂದಕ್ಕೆ ಮನೆಯ ಕಡೆ ಹೊರಟಾಗ ನಾನು, "ನಾಳೆಯೇ ಮುಂಬಾಯಿಗೆ ಹಿಂದಿರುಗಲು ಇಚ್ಛಿಸುತ್ತೇನೆ, ತುಂಬಾ ಕೆಲಸಗಳ ಹೊಣೆ ಇದೆ. ಸುಧಾಳ ಆರೋಗ್ಯವೂ ಚೆನ್ನಾಗಿಲ್ಲ," ಎಂದೆ. ನಾರಾಯಣರವರು, "ಅಷ್ಟು ತ್ವರೆ ಯಾಕೆ, ಇನ್ನೆರಡು ದಿನ ಇದ್ದು ಹೋಗಿ, ನಿಮ್ಮ ಹೆಂಡತಿಗೆ ಫೋನು ಮಾಡಿದರೆ ಸರಿ" ಎಂದರು. ನಾನು ನನ್ನ ಕಾರಣವನ್ನು ದೃಢಗೊಳಿಸಿದೆ. ಸುಚಿತ್ರಾರವರು, "ನಿಮ್ಮ ಪತ್ನಿ ಗರ್ಭಿಣಿಯಂತೆ ಕಾಣುತ್ತೆ. ಮಾರ್ನಿಂಗ್ ಸಿಕ್‌ನೆಸ್ಸೆ?" ಎಂದು ಕೇಳಿದರು. ಹೌದು ಎಂದು ಉತ್ತರಿಸಿದೆ. ಮರಳ ದಿನ್ನೆಗಳು ಕತ್ತಲಲ್ಲಿ ಮುಳುಗತೊಡಗಿದವು. ಮನೆಗೆ ತಲುಪಿ ಹಜಾರದಲ್ಲಿ ವಿಶ್ರಮಿಸುವಾಗ ಮೂವರೂ ಮೌನ. ಕತ್ತಲಿನ ಬೆಳವಣಿಗೆ ಮೌನಕ್ಕೆ ಸಖ್ಯ ಕೊಡತೊಡಗಿತು.

ರಾತ್ರಿ ಮಲಗಿದ ಮೇಲೆ ತುಂಬಾ ಹೊತ್ತು ನಿದ್ದೆ ಬರಲಿಲ್ಲ. ಶೆಲ್ಫ್‌ನಲ್ಲಿದ್ದ ಪಾಪಾ ಹೆಮಿಂಗ್‌ವೇಯ ಆತ್ಮಕಥೆ ಓದುತ್ತಾ ಕೂತುಬಿಟ್ಟೆ. ಅಲ್ಲಿಗೇ ಕಣ್ಣಡರಿತು. ಪುಸ್ತಕಕ್ಕೆ ಧನ್ಯವಾದ ಕೊಟ್ಟು ದೀಪ ನಂದಿಸಿ ಮಲಗಿಬಿಟ್ಟೆ. ಇಲ್ಲಿಯ ರಾತ್ರಿ ಮುಂಬಾಯಿಯ ರಾತ್ರಿಯಂತಲ್ಲ. ಕೋಣೆಯಲ್ಲಿ ದೀಪ ನಂದಿಸಿದ ಮೇಲೂ ಅಲ್ಲಲ್ಲಿ ಎಲ್ಲೆಲ್ಲೋ ಮಿನುಗುವ ದೀಪಗಳ ಸೋಂಕು ಇಲ್ಲ. ರಾತ್ರಿ ಎಂದರೆ ಇದು ತೀರಾ ರಾತ್ರಿ. ಇಷ್ಟು ದೂರದ ಊರಲ್ಲಿ ಈಗ ಸುಧಾಳ ನೆನಪು ಕಾಡುತ್ತದೆ. ಆಮೇಲೆ ವಿಭಿನ್ನ ಕಲ್ಪನೆಗಳ ತೆವಳು. ಈ ಸತ್ಯವನ್ನು, ಅನಿವಾರ್ಯವನ್ನು ನನ್ನಿಂದ ಎಂದೂ ಹದಕ್ಕೆ ತರಲಾಗಲಿಲ್ಲ. ಸುಧಾಳನ್ನು ಬಿಟ್ಟು ಇಷ್ಟು ದಿನ ದೂರ ಇದ್ದೆ ಎಂಬ ಆಲೋಚನೆಯ ಸಂಪೂರ್ಣ ಅರಿವು ಈಗಷ್ಟೆ ಆದಂತೆ. ತಲೆಯೊಳಗೆ ಪೂರ್ತಿ ಎಚ್ಚರ ಬಂದು ನಿಂತಿತು. ತಲೆದಿಂಬನ್ನು ತೊಡೆಗಳಿಗೆ ತಕ್ಕೈಸಿ ಮಲಗಿದೆ. ಯಾವ ಹೊತ್ತಲ್ಲೂ ಅಪ್ರಾಮಾಣಿಕನಾಗಬಾರದು ನಿಜ. ಆದರೆ ಈ ಮನಸ್ಸಿನ ಸ್ವಾತಂತ್ರ್ಯವನ್ನು ಹೇಗೆ ಹತ್ತಿಕ್ಕಲಿ? ಶಬ್ದದಲ್ಲಿ ಅಭಿನಯದಲ್ಲಿ ಮಾತ್ರ ಎಂದೂ ನನ್ನ ಕೆಟ್ಟ ಅಂತರ್ಯವು ಅಭಿವ್ಯಕ್ತವಾಗದಂತೆ ಆದಷ್ಟು ಎಚ್ಚರಿಕೆಯನ್ನು ತೆಗೆದುಕೊಳ್ಳಬಲ್ಲೆ ಅಷ್ಟೆ. ನನ್ನ ಸತ್ಯ ಏನೆಂದು ಜಗತ್ತಿಗೆ ಗೊತ್ತಾಗಬಾರದು. ನಾಳೆ ನಾರಾಯಣರವರು ನನ್ನನ್ನು ಹೊಡೆದು ಬಡಿದು ಗಡಿ ದಾಟಿಸಿಯಾರು. ಸುಚಿತ್ರಾ ನಾರಾಯಣರೊಡನೆ ಮಲಗಿದ್ದಾರೆ ಎಂದು ನನ್ನ ಮನಸ್ಸು ಮೆಲುಕು ಹಾಕತೊಡಗುತ್ತದೆ. ಸುಚಿತ್ರಾಗೂ ಸುಧಾಳಿಗೂ ಇರುವ ವ್ಯತ್ಯಾಸ ಬರೇ ಕೆಲವು. ಸುಚಿತ್ರಾರ ಪ್ರಾಯ ಸುಧಾಳಿಗಿಂತ ಕೆಲ ವರ್ಷ ಹೆಚ್ಚಿರಬಹುದು. ಸುಧಾಳದ್ದು ತೆಳ್ಳಗಿನ ಶರೀರ, ಇವರದ್ದು ಮಸ್ತಾದ ಮಾಂಸಳ ಮೈಕಟ್ಟು. ಸುಧಾಳಿಗೆ ಇರುವುದು ಬರೇ ಎರಡು ಕಣ್ಣು; ಅವಳ ಸೌಂದರ್ಯದ ಕೇಂದ್ರ ಭಾಗ. ಅಂತಹ ಕಣ್ಣು ಪಡೆಯಲಿಕ್ಕೆ ಸುಚಿತ್ರಾರು ಸಹಸ್ರ ವರ್ಷ ತಪಸ್ಸು ಮಾಡಬೇಕಾದೀತು. ವಿಶಾಲ ಕಣ್ಣುಗಳು. ಅದರೊಳಗೆ ಸಮ್ಮೋಹಕ ಬೆಳಕು ತುಂಬಿದೆ. ನೆಟ್ಟಗೆ ನೋಡುತ್ತಾ ಕೂತರೆ ಅದರದೇ ಅಗಮ್ಯತೆಯಲ್ಲಿ. ಅನಂತತೆಯಲ್ಲಿ ನಾನು ಕೊಚ್ಚಿಹೋಗುತ್ತೇನೆ. ಸುಚಿತ್ರಾ ದೇಹ ಸೌಷ್ಠವದ ಎದುರು ಸುಧಾ ಬಡವಳ ತಿಕ್ಕಾಗಿ ಕಾಣುತ್ತಾಳೆ ನಿಜ. ಇವರು ವಾತ್ಸ್ಯಾಯನನ ಪದ್ಮಿನಿ, ಶಂಕಿನಿಯರದಾರದೋ ನೆನಪು ಹುಟ್ಟಿಸುವಂತೆ ಕಾಣುತ್ತಾರೆ. ಸುಧಾಳ ಮುಖದ ಸೌಂದರ್ಯ ಇವರ ಸರ್ವ ಸೃಷ್ಟಿಯನ್ನು ನಿಮ್ನ ಮಾಡುತ್ತೆ. ಅವಳ ಕಣ್ಣುಗಳು ಬರೇ ಚುಂಬನಕ್ಕೇ ಮೀಸಲಾದ ಸೃಷ್ಟಿಯಂತೆ. ಮೇಲ್ತುಟಿ ಕೂಡಾ ಮೂಗಿನ ದಳದಂತೆ ತುದಿ ಒಂದಕ್ಕೆ ಮಾಟವಾಗಿ ಬಾಗಿದೆ. ಅವಳ ಆಕಾರವನ್ನು ಅವರ ಮೂಲಕ ಹೋಲಿಸಬಾರದು. ಅದರಿಂದ ಉಗುಳಬಾರದು, ವಾಂತಿ ಮಾಡಬಾರದು ಎಂದು ಅನಿಸುತ್ತೆ…

ಪುನಃ ಸ್ತಬ್ಧವಾಗುತ್ತದೆ ತಲೆಯೊಳಗೆ ಕಲ್ಪನೆಗಳ ಸಂಚಾರ. ಹತ್ತಿರದಲ್ಲಿದ್ದ ಅಲಾರಮಿನಿಂದ ಟಿಕ್ ಟಿಕ್ ಕೇಳಿ ಬರುತ್ತದೆ. ನಿದ್ದೆ ಬರುವು

ದಿಲ್ಲ. ಪುನಃ ವಿಚಾರಗಳ ಸುಳಿವು. ಕಿವಿ ಸುಮ್ಮನಾಯಿತು. ನಾನು ಷಂಢನಲ್ಲದರ ಶಿಕ್ಷೆ ಇದು. ಮೈ ಉದ್ದಕ್ಕೆ ಸುಧಾ ಅಂಟಿಕೊಂಡಿದ್ದಂತೆ. ತಲೆಗೂದಲಿನ ಕಂಪು! ಮೂಗಿಗೂ ನೆನಪು ಇದ್ದ ಹಾಗೆ! ಈಗ ಬರೇ ತಲೆಯಲ್ಲಿ, ಎದೆಯಲ್ಲಿ ಮತ್ತೆ ತೊಡೆಯ ತಳದಲ್ಲಿ ಜೀವದ ನೆತ್ತರು ಕೇಂದ್ರೀಕೃತವಾಗಿದ್ದಂತೆ ಥಟ್ಟನೆ ನನ್ನ ಕೋಣೆಯ ಕತ್ತಲು ಮಲಿನವಾದಂತೆ ಭಾಸವಾಯಿತು. ತಲೆದಿಂಬನ್ನು ತೊಡೆಗಳಿಂದ ಸರಿಸಿ ಕಣ್ಣು ಮಿಟುಕಿದೆ. ಕತ್ತಲಿನ ರೆಪ್ಪೆ ತೆರೆದಂತೆ ಕೋಣೆಯ ಬಾಗಿಲು ತೆರೆಯುತ್ತಾ ಇದೆ. ಯಾರು? ಎಂದು ವಿಚಲಿತನಾಗಿ ಕೇಳಿದೆ. ಬೆಳಕು ಬಿತ್ತು. ನಾರಾಯಣ ನಿಂತಿದ್ದರು. ಗಾಢ ನಿದ್ದೆಯಿಂದ ಎದ್ದವನಂತೆ ಕೊರಳಲ್ಲಿ ಗೊರಲಿಟ್ಟೆ.

"Yes, Mr. Narayan ?"

"ಪ್ಲೀಸ್ ಮಿಸ್ಟರ್ ಅಶೋಕ್, ನೀವಾದರೂ ಹೇಳಿರಲ್ಲ ನಾನು ಏನು ಮಾಡಬೇಕೆಂದು."

"ಯಾರ ಮಗುವನ್ನಾದರೂ ದತ್ತಕ ತೆಗೆದುಕೊಳ್ಳಿ. ಮುಂಬಾಯಿಯಲ್ಲಿ ಇದರ ವ್ಯವಸ್ಥೆಗಾಗಿ ಒಂದು ಸಂಸ್ಥೆಯೇ ಇದೆ. ಬಹಳ ಸುಂದರವಾದ ಮಕ್ಕಳಿವೆ ಅಲ್ಲಿ."

"ಅವಳು ಒಪ್ಪುವುದಿಲ್ಲ. ಅವು ಕೆಟ್ಟ ನೆತ್ತರಿಗೆ ಹುಟ್ಟಿದ ಪಿಂಡಗಳು ಅನ್ತಾಳೆ. ಅವುಗಳ ಕ್ಯಾರೆಕ್ಟರ್ ಒಳ್ಳೆಯದಿರಲ್ಲ ಅನ್ತಾಳೆ."

ನನಗೆ ನಗು ಬರುತ್ತದೆ. ನಗಲು ಪರಿಸ್ಥಿತಿ ಅನುಕೂಲವಾಗುವುದಿಲ್ಲ.

"ವಿದೇಶದಲ್ಲಿ ಇಂತಹ ಪರಿಸ್ಥಿತಿಯಲ್ಲಿ ವಿವಾಹವಿಚ್ಛೇದನ ಕೊಡ್ತಾರೆ," ಎಂದೆ ಕಟುವಾಗಿ, "ಹಾಗಾಗುವುದು ಅಮೇರಿಕದಲ್ಲಿ, ಮುಂಬಾಯಿಯಲ್ಲಲ್ಲ. ನೀವು ನೀತಿ ಗೋತ್ರಗಳ ಬಗ್ಗೆ ಮಾತಾಡುವವರು."

ಥಟ್ಟನೆ ನಾರಾಯಣರವರ ಮುಖದಲ್ಲಿ ವಿಲಕ್ಷಣವಾದ ನಗುವೊಂದು ಹರಿಯಿತು.

"ನಾನು ಹಾಗೆ ನೀತಿ ಗೋತ್ರಗಳ ಮೇಲೆ ವಿಶ್ವಾಸ ಇಟ್ಟಿಲ್ಲ" ಎಂದರು.

"ನಿಮ್ಮ ಹೆಂಡತಿ," ಎಂದೆ.

"ಅವಳಿಗೆ ತನ್ನ ಗರ್ಭದ್ದೇ ಮಗು ಬೇಕು. ಮಿಸ್ಟರ್ ಅಶೋಕ್ ಈ ರಾತ್ರಿ ಸುವೇಳೆಯಲ್ಲಿ ಅವಳ ಮನಸ್ಸನ್ನು ಪಲ್ಲಟಿಸಿದ್ದೇನೆ. ಅವಳು ಒಪ್ಪಿದ್ದಾಳೆ. ಆತುರಳಾಗಿದ್ದಾಳೆ. ಉದ್ರಿಕ್ತಳಾಗಿದ್ದಾಳೆ. ತುಂಬಾ ಕತ್ತಲು ಇದೆ. ಮುಖ ಮುಖ ಕಾಣದು. ಮಾತೂ ಬೇಡ. ನೀವು ನಾಳೆಯೇ ಹೋಗುತ್ತೀರಲ್ಲ. Please. ಆಮೇಲೆ ಎಂದಿಗೂ ನಮ್ಮ ಮುಖ ನೀವು ನೋಡಬೇಡಿ. Please. ನಮಗೆ ಬರೇ ಬೀಜ ಬೇಕು. ಅವಳು ಉನ್ಮತ್ತಳಾಗಿದ್ದಾಳೆ. ಈಗ ಪಾಪ ಪ್ರಜ್ಞೆ ಇಲ್ಲ; Please Mr. ಅಶೋಕ್ Please."

ನಾರಾಯಣರವರು ನಿರ್ವೀರ್ಯರಂತೆ ನಿಲ್ಲುತ್ತಾರೆ. ಈ ಹೊತ್ತು ಅವರ ಮುಖ ಲಜ್ಜಿತವಾಗಿಲ್ಲ; ಅಲ್ಪತನದ ಛಾಯೆ ಇದೆ. ವ್ಯಾಸಮಹರ್ಷಿಯನ್ನು ನಂಬಿದವರು ಕೂಡಾ ನನ್ನನ್ನು ನಂಬಲಾರರು ಎಂಬ ವಿಶ್ವಾಸವೂ ನನಗಿದೆ. ಅಂಥವರ ಎದುರು ಈ ಕಥೆ ಹೇಳಿ ನಾನು ಬರೇ ಸುಳ್ಳನಾಗುತ್ತೇನೆ ಅಷ್ಟೆ. ನಾನು ತಪ್ಪಿತಸ್ಥನಾಗುವುದಿಲ್ಲ. ಆಮೆನ್, ನಾನು ಎದ್ದು ನಿಲ್ಲುತ್ತೇನೆ.

---

ಕೊಲ್ಲೆನಯ್ಯಾ ಪ್ರಾಣಿಗಳ;
ಮೆಲ್ಲೆನಯ್ಯಾ ಬಾಯಿಚ್ಛೆಗೆ;
ಒಲ್ಲೆನಯ್ಯಾ ಪರಸತಿಯರ ಸಂಗವ;
ಒಲ್ಲೆನಯ್ಯಾ ಮುಂದೆ ತೊಡಕುಂಟೆಂಬುದ!
ಒಳ್ಳಿದ ಬಾಯಿಂಕೆ ಒಂದೇ ಮನವ ಮಾಡಿ
ನಿಲ್ಲೆಂದು ನಿಲ್ಲಿಸಯ್ಯಾ, ಕೂಡಲ ಸಂಗಮದೇವಾ.

— ಬಸವೇಶ್ವರ

# ಸುಭಾಷಿತಗಳು

ಹೊಗಳುಭಟ್ಟನು ಮಂತ್ರಿ ಪದವಿಯನ್ನು ಪಡೆದರೆ ಶಿಷ್ಟರು ಮೂಲೆಗುಂಪಾಗುವರು. ಬಹಳ ಜನ ಪುರುಷರು ರತಿಕಲಾಪ್ರತಿಪಾದನನಿರತರಾದರೆ ಹರಿಣಾಕ್ಷಿಯರಿಗೆಲ್ಲಿ ಮಾನ ಉಳಿದೀತು? ಕವಿತೆಯು ಬುರುಡೆ ಹೊಡೆಯುವುದರಲ್ಲಿಯೇ ಮುಗಿತಾಯಗೊಂಡರೆ ಭಾವಿ ಕಾವ್ಯದ ನಿರ್ಮಾಣಕ್ಕೆಲ್ಲಿ ಬರಬೇಕು ಅವಕಾಶ? ಯವನನು ರಾಜನಾದ್ದರಿಂದ ಇಡಿ ಜಗತ್ತಿನಲ್ಲಿ ಪಾಂಡಿತ್ಯವು ಅಸ್ತಂಗತವಾಯಿತು.

  

ಹಕ್ಕಿಗಳನ್ನು ಕರೆದಾಗ ಸೊಳ್ಳೆ ಎದುರಿಗ ಬಂದರೆ ಯಾರೂ ತಡೆಯರು; ಕಡಲ ನಡುವೆ ನೆಲಸಿದ ಹುಲ್ಲಿನ ಚೆಂಡು ರತ್ನದ ಕಾಂತಿಯನ್ನು ಹೊಂದುತ್ತದೆ; ತೇಜಃಪುಂಜ ವ್ಯಕ್ತಿಗಳ ಮಧ್ಯದಲ್ಲಿ ತಿರುಗುವಾಗಲೂ ಮಿಣುಕು ಹುಳು (ಭಯದಿಂದ) ಕಂಪಿಸುವುದಿಲ್ಲ. ಬುದ್ಧಿಯಿಲ್ಲದ ಸಾಮಾನ್ಯ ಮನುಷ್ಯನಿಗೆ ಧಿಕ್ಕಾರ; ಅವನೂ ಒಂದೇ, (ಮೇಲೆ ಹೇಳಿದಂಥ) ತತ್ವವ್ಯತ್ಯಾಸಗಳನ್ನು ದಿಳಿಯದ ರಾಜನೂ ಒಂದೇ.

  

ದುಷ್ಟನು ಸಾಸಿವೆಯಷ್ಟಿರುವ ಪರದೋಷವನ್ನಾದರೂ ಕಾಣುತ್ತಾನೆ; ಆದರೆ ತನ್ನಲ್ಲಿಯ ಬಿಲ್ವಗಾತ್ರದ ದೋಷವನ್ನೂ ಕಂಡೂ ಕಾಣನು!

  

ವಿಚಾರ–ಕೃತಿಗಳೆಲ್ಲವೂ ವಿಪರೀತಗಳಾಗಿರುವ, ದೇಹಗಳು ಕಲ್ಲು ಚೂರುಗಳ ರಾಶಿಯಂತಿರುವ ಮತ್ತು ಮಾಂಸದ ಮರಗಳಂತೆ ಬೆಳೆದಿರುವ ಮೂರ್ಖರು 'ಕೂಳಿಗೆ ಕೇಡು, ಭೂಮಿಗೆ ಭಾರ' ಎನಿಸುತ್ತಾರೆ.

  

ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಲಾರದ, ಮಂದಿ ಹೇಳಿದ ಹಾಗೆ ನಡೆದುಕೊಳ್ಳುವ ಮತ್ತು ತನ್ನ ಮೈಯನ್ನು ಮಾರಿಕೊಂಡ ಆಳಿಗೆ ಸುಖ ಎಲ್ಲಿಂದ ಬಂದೀತು?

# ನನ್ನ ಭಾರತ ದರ್ಶನ!

ಆರ್. ಪದ್ಮನಾಭನ್

ಆಗಷ್ಟೇ ನನ್ನ ಓದು ಮುಗಿಸಿದ್ದೆ. ಹೊರನಾಡಿನಲ್ಲಿ ತಿರುಗಬೇಕೆಂಬ ಕುತೂಹಲ ನನ್ನಲ್ಲಿ ಹುಟ್ಟಿತು. ಯಾಕೆ ಎಂಬ ಪ್ರಶ್ನೆಗೆ ಯಾರಿಗೂ ನನ್ನಿಂದ ಉತ್ತರಿಸುವುದು ಸಾಧ್ಯವಿಲ್ಲ. ನನ್ನ ಜೀವನದ ಮೊದಲ ಇಪ್ಪತ್ತೆರಡು ವರ್ಷಗಳನ್ನು ದಕ್ಷಿಣದಲ್ಲಿ ಕಳೆದ ನನಗೆ, ಭಾರತ ತನ್ನ ಉತ್ತರದ ಪ್ರದೇಶಗಳನ್ನು ನಾನು ನೋಡಲೇ ಬೇಕೆಂದು ಪ್ರೋತ್ಸಾಹಿಸಿದಂತೆ ಅನಿಸಿತು. ನನ್ನಲ್ಲಿದ್ದದ್ದು ಸ್ವಲ್ಪ ಹಣ ಮಾತ್ರ, ಸುಮಾರು ೨೦ ರೂಪಾಯಿಗಳು. ಉತ್ತರ ಭಾರತದ ಪ್ರವಾಸಕ್ಕೆಂದು ಯಾವ ಬ್ಯಾಂಕೂ ನನಗೆ ಸಾಲವನ್ನು ಕೊಡುವುದು ಸಾಧ್ಯವಿರಲಿಲ್ಲ. ತಂದೆಯವರೂ ಇಂಥದಕ್ಕೆ ಒಪ್ಪುತ್ತಿರಲಿಲ್ಲ. 'ಇದಕ್ಕೇನು ಭದ್ರತೆ?' ಎಂದವರು ಕೇಳಬಹುದಿತ್ತು. ನನ್ನೆದುರಿಗಿದ್ದ ಒಂದೇ ಒಂದು ದಾರಿ ಎಂದರೆ ಟಿಕೆಟ್ ಇಲ್ಲದೇ ಪ್ರವಾಸ ಮಾಡುವುದು. ಇದಕ್ಕೆ ಯಾವ ಗಾಡಿಯಾದರೂ ಆದೀತು. ಆದರೆ ನಾನು ಪ್ರವಾಸ ಮಾರ್ಗವನ್ನು ಯೋಜಿಸಿರಲಿಲ್ಲ.

ನಾನು ಪುಣೆಯಿಂದ ಜಯಂತಿ ಜನತಾ ಗಾಡಿಯನ್ನು ಏರಿದಾಗ ಡಿಸೆಂಬರಿನ ಮೈ ನಡುಗಿಸುವ ಚಳಿಗಾಲ. ಒಂದು ವೇಳೆ ಟಿಕೆಟ್ ಕಲೆಕ್ಟರ್ ಬಂದು ಟಿಕೆಟ್ ಕೇಳಿದ್ದರೆ, ನನ್ನಲ್ಲಿ ಸಿದ್ಧ ಉತ್ತರವಿರಲಿಲ್ಲ. ಧೌಂಡದಲ್ಲಿ ಇಳಿದೆ. ರಾತ್ರಿ ನಾಗಪುರಕ್ಕೆ ಗಾಡಿ ಇರುವುದೆಂದು ಗೊತ್ತಾಯಿತು.

ಮಧ್ಯರಾತ್ರಿಗೆ ಆ ಗಾಡಿ ಬಂತು. ಎಲ್ಲಾ ಡಬ್ಬಿಗಳೂ ತುಂಬಿಕೊಂಡಿದ್ದವು. ಡಬ್ಬಿಯೊಳಗಿನ ಪ್ಯಾಸೇಜುಗಳಲ್ಲಿ ಕೂಡ ಜನ. ಕೆಳಗೆ ಕಾಲು ಚಾಚಿಕೊಂಡು, ಅಥವಾ ಕುಳಿತು ನಿದ್ರಿಸುವ ನಾನಾ ಭಂಗಿಗಳಲ್ಲಿದ್ದ ಜನ. ಖಾಲಿ ಇದ್ದ ಒಂದೇ ಒಂದು ಜಾಗವೆಂದರೆ ಬಾಗಿಲು ಮತ್ತು ಸಂಡಾಸಿನ ನಡುವಿನ ಪಟ್ಟಿ. ನಾನು ಅಲ್ಲಿಯೇ ಕುಳಿತೆ.

ಜಿಪ್ಸಿಗಳ ಗುಂಪೊಂದು ಹಠಾತ್ತನೇ ನಮ್ಮ ಡಬ್ಬಿಯನ್ನು ಆಕ್ರಮಿಸಿ, ಸಾಮಾನುಗಳನ್ನು ಒಳಗೆಲ್ಲ ಹರಡಿ(ಗೋಣಿ ಚೀಲಗಳು, ಕಣಕಣಿಸುವ ಪಾತ್ರೆ ಪಗಡೆಗಳು, ಚಾಪೆಗಳು ಮತ್ತು ಬಟ್ಟೆ ಬರೆಗಳ ಗಂಟು ಗದಡಿಗಳು)ದರು. ಗಂಡಸರಷ್ಟೇ ಹೊಲಸು ಹೊಲಸಾದ ಬಟ್ಟೆ ತೊಟ್ಟ ಆ ಜಿಪ್ಸಿ ಹೆಂಗಸರು ತಮಗಾಗಿ ಮೂಲೆಯೊಂದರಲ್ಲಿ ಜಾಗ ಮಾಡಿಕೊಳ್ಳಲು ದಬ್ಬಿಸ ತೊಡಗಿದರು. ಮೂರ್ನಾಲ್ಕು ಹುಡುಗರು ನನ್ನ ಸುತ್ತ ಮುತ್ತಿದರು. ಒಬ್ಬೊಬ್ಬರಾಗಲೇ ನಿದ್ರಿಸತೊಡಗಿದ್ದರು. ಆ ಪೈಕಿ ಒಬ್ಬ ಹುಡುಗ ನನ್ನ ಭುಜಕ್ಕೆ ತಲೆಯಿಟ್ಟು ನಿದ್ರಿಸತೊಡಗಿದ್ದ.

ಆ ಜನರ ಗಲಾಟೆ ಕಡಿಮೆಯಾಗಿ ಶಾಂತತೆ ಆವರಿಸುತ್ತಿದ್ದಂತೆಯೇ ಒಬ್ಬ ಧಡಿಯ ಪೋಲೀಸು ಪೇದೆ ನಮ್ಮೆದುರು ಹಾಜರಾದ. ಕೈಯಲ್ಲೊಂದು ಚಿಕ್ಕ ಸ್ಟಿಕ್ ಹಿಡಿದಿದ್ದ ಆತ ಕೆಂಗಣ್ಣಿನಿಂದ ನೋಡುತ್ತ ನಮ್ಮನ್ನು ಬೆದರಿಸತೊಡಗಿದ. ನಂತರ ತನ್ನ ಸಮೀಪವಿದ್ದವನೊಬ್ಬನನ್ನು ದಿಟ್ಟಿಸಿ ನೋಡಿ, ಕೂಡಲೇ ಎಲ್ಲರೂ ಕೆಳಗಿಳಿಯಬೇಕೆಂದು ಫರಮಾನು ಹೊರಡಿಸಿದ.

ಜಿಪ್ಸಿಗಳೆಲ್ಲ ಆತನಿಗೆ ಹಿಡಿ ಶಾಪ ಹಾಕುತ್ತ

[ 'ಆನ್‌ಲುಕರ್' ಕೃಪೆಯಿಂದ ]

ಕೆಳಗಿಳಿದರು. ನಾನು ಮಾತನಾಡದೇ ಪ್ಯಾಸೇಜಿನತ್ತ ನಡೆದೆ, 'ಪೋಲೀಸು ಪೇದೆ ನನ್ನನ್ನು ಕುರಿತು ಆ ರೀತಿ ಆಜ್ಞೆ ಮಾಡಿಲ್ಲ' ಎಂಬ ವಿಶ್ವಾಸದೊಂದಿಗೆ. ಅಲ್ಲಿಯೇ ಸ್ವಲ್ಪ ಜಾಗ ಮಾಡಿಕೊಂಡು ಸೀಟಿನ ಮೇಲೆ ಕುಳಿತೆ. ಆದರೆ ಸಮೀಪದಲ್ಲಿ ಪದ್ಮಾಸನ ಹಾಕಿ ಕುಳಿತಿದ್ದ ಹೆಂಗಸು (ಸುಪುಷ್ಟ ಶರೀರದ ಸುಂದರ ಹೆಂಗಸು) ನನ್ನತ್ತ ಅಚ್ಚರಿಯಿಂದ, ಸಂಶಯದಿಂದ ನೋಡುತ್ತಿದ್ದಳೆಂದೆನಿಸಿತು. ನಾನಂತೂ, ಕಣ್ಣು ನೋಯುತ್ತಿದ್ದುದರಿಂದ ಕಣ್ಮುಚ್ಚಿ ನಿದ್ರಿಸುತ್ತಿದ್ದೆ. ಗಾಡಿ ಹೊರಡಲಾರಂಭಿಸಿದೊಡನೆ ನಾನು ಸುತ್ತ ಕಣ್ಣಾಡಿಸಿದೆ. ಆ ಹೆಂಗಸಿನ ತೊಡೆಗಳಿದ್ದಲ್ಲಿ ಮಲಗಲು ಸ್ವಲ್ಪ ಜಾಗವಿತ್ತು. ಮಲಗಿದೆ.

ನಾಗಪುರದವರೆಗಿನ ಪ್ರಯಾಣದುದ್ದಕ್ಕೂ ನಾನು ಟಿಕೆಟ್ ಕಲೆಕ್ಟರನ ಬಗ್ಗೆ ಯೋಚಿಸಲೇ ಇಲ್ಲ. ಬಂದರೂ ತಪ್ಪಿಸಿಕೊಳ್ಳುವುದು ಸುಲಭವೆನಿಸಿಬಿಟ್ಟಿತು. ಆ ರಾತ್ರಿಯನ್ನು ನಾಗಪುರದ ಸ್ಟೇಶನ್ನಿನಲ್ಲಿ ಮಲಗಿ ಕಳೆದೆ. ಮರುದಿನ ಹಗಲಿಡೀ ಊರಿನಲ್ಲಿ. ಸ್ಟೇಶನ್ನಿನಲ್ಲಿ ಹೊರಗೆ ಹೋಗುವ ಬಾಗಿಲಲ್ಲಿ ನಿಂತಿರುವ ಟಿಕೆಟ್ ಕಲೆಕ್ಟರ್ ಬಲು ಜಾಗರೂಕನಾಗಿರುತ್ತಾನೆ. ಜನಸಂದಣಿ ಹೆಚ್ಚಿರುವ ನಿಲ್ದಾಣದಲ್ಲಿಯಂತೂ ಪ್ರಯಾಣಿಕರು ಹೊರಹೋಗುವಾಗ ಸದಾ ಕಣ್ಣಿಟ್ಟುಕೊಂಡು ಕಾಯುತ್ತಿರುವ ಜನ ಇರುತ್ತಾರೆ. ಒಂದು ಗಾಡಿ ಬಂದು ಹೋದ ನಂತರ ಮತ್ತೊಂದು ಗಾಡಿ ಬರುವವರೆಗೆ ಆ ಟಿಕೆಟ್ ಕಲೆಕ್ಟರ್ ಸ್ವಲ್ಪ ವಿಶ್ರಾಂತಿ ಪಡೆಯುತ್ತಾನೆ. ತನ್ನ ಜಾಗದಿಂದ ದೂರ ಹೋಗಿರುತ್ತಾನೆ. ಟಿಕೆಟ್ ರಹಿತ ಪ್ರಯಾಣಿಕನಿಗೆ ಹೊರಗೆ ಹೋಗಲು ಅದು ತಕ್ಕ ಸಮಯ. ಆರೆಮ್ಮೆಸ್ ಮತ್ತು ಪಾರ್ಸಲ್ ವಿಭಾಗದ ಸಾಮಾನುಗಳ ಸಾಗಾಟಕ್ಕೆ ಒಂದು ಪ್ರತ್ಯೇಕ ಬಾಗಿಲಿರುತ್ತದೆ. ಅಲ್ಲಿ ಯಾರ ಕಾವಲೂ ಇರುವುದಿಲ್ಲ. ಈ ಬಾಗಿಲಿನಿಂದ ಒಳ್ಳೆ ಪೋಷಾಕು ಧರಿಸಿದ ಸುಸಂಸ್ಕೃತನೊಬ್ಬ ಬಗಲಿಗೊಂದು ಚೀಲ ಇಳಿಬಿಟ್ಟುಕೊಂಡು ಹೊರಹೋದರೆ ಯಾರೂ ಸಂಶಯಪಡುವದಿಲ್ಲ.

ಭಿಲಾಯಿಯಿಂದ ದಿಲ್ಲಿಗೆ ಹೋಗುವ ಛತ್ತೀಸಗಡ ಎಕ್ಸ್‌ಪ್ರೆಸ್ ಗಾಡಿ ನಾಗಪುರದ ಮೇಲೆಯೇ



ಆರ್. ಪದ್ಮನಾಭನ್ ತ್ರಿವೆಂಡ್ರಮ್ ನಿವಾಸಿ. ಇಂಗ್ಲಿಷ್ ಎಂ. ಎ. ಮುಗಿಸಿದ ಈ ೨೩ರ ತರುಣ ಪ್ರವಾಸದ ಹವ್ಯಾಸಕ್ಕೆ ಬಿದ್ದರು. ಕೈಯಲ್ಲಿ ಕಾಸಿರಲಿಲ್ಲವಾದರೂ ದೇಶ ಸುತ್ತುವ ಬಯಕೆ ಬಯಲಾಗಲಿಲ್ಲ. ಅಂತೆಯೇ ಕಳೆದ ಡಿಸೆಂಬರಿನಲ್ಲಿ ಬಗಲಿಗೆ ನೇತುಹಾಕಿಕೊಂಡ ತೂಗುಚೀಲದೊಂದಿಗೆ ಇಪ್ಪತ್ತು ರೂಪಾಯಿಗಳಲ್ಲಿ ರೈಲು ಮೂಲಕ ಉತ್ತರ ಭಾರತ ಸುತ್ತಿದರು. ಈಗ 'ಅನ್‌ಲುಕರ್' ಆಂಗ್ಲ ಪಾಕ್ಷಿಕದಲ್ಲಿ ಉಪಸಂಪಾದಕರಾಗಿರುವ ಪದ್ಮನಾಭನ್ ಅವರ ಪ್ರವಾಸದ ಅನುಭವ ಇಲ್ಲಿದೆ.

ಹಾದುಹೋಗುತ್ತದೆ. ಗ್ವಾಲಿಯರ್ ತಲುಪುವವರೆಗೆ ಆ ಗಾಡಿಯಲ್ಲಿ ನನಗೆ ಸಂಗಾತಿಯಾಗಿ ಸಹಪ್ರಯಾಣ ಮಾಡುತ್ತಿದ್ದ ತರುಣಿ ದೊರಕಿದಳು. ಬಹುಶಃ ಹದಿನೆಂಟರಷ್ಟು ವಯಸ್ಸಿನ ಆ ತರುಣಿ ನೋಡಲಿಕ್ಕೆ ಇಪ್ಪತ್ತರ ಹರಯದವಳಂತೆ ಕಾಣುತ್ತಿದ್ದಳು. ದುಂಡು ಮುಖದ ಹೊಳಪು ಕಣ್ಣಿನ ಆ ಹುಡುಗಿ ಒರಟು ಒರಟಾಗಿ ಕಾಣುವ ರಾಜಸ್ಥಾನಿ ಸುಂದರಿ. ನಾನು ಕುಳಿತ ಬೆಂಚಿನಲ್ಲಿದ್ದವರು ಒಟ್ಟು ಆರು ಜನ. ಆಕೆ ನನ್ನ ಪಕ್ಕದಲ್ಲಿಯೇ ಕುಳಿತಿದ್ದಳು. ನಾನು ಕಿಡಕಿಯಿಂದ ಹೊರಗೆ ನೋಡುತ್ತಿದ್ದೆ. ಆ ಬೆಳೆ ತುಂಬಿದ ಭೂಮಿ, ಮತ್ತು ಪ್ರತಿವರ್ಷ ಒಬ್ಬ ರೈತ ಎಷ್ಟು ಫಸಲು ಪಡೆಯಬಹುದೆಂಬ ಬಗ್ಗೆ ಅಚ್ಚರಿಯಿಂದ ಯೋಚಿಸುತ್ತಿದ್ದೆ. ಆಕೆ ತನ್ನ ತೊಡೆಗಳನ್ನು ನನ್ನ ತೊಡೆಗಳಿಗೆ ಒತ್ತಲು ಶುರುಮಾಡಿಬಿಟ್ಟಳು. ನಾನು ಅಂಥ ಯಾವುದಾದರೂ ಆಸೆ ಆಕೆಯ ಕಣ್ಣಲ್ಲಿ ಕಾಣುತ್ತದೆಯೋ ಎಂದು ನೋಡಲು ಮುಖ ತಿರುಗಿಸಿದೆ. ಆಕೆಯ ಮುಖ ಬೇರೆ ಕಡೆ ತಿರುಗಿದ್ದುದರಿಂದ ಆ ಆಸೆ ನನಗೆ ಕಾಣಲಿಲ್ಲ.

ಆಕೆಯ ಆ ಪಕ್ಕಕ್ಕೆ ಕುಳಿತಿದ್ದ ಮುದುಕ ಸಹಪ್ರಯಾಣಿಕನೊಬ್ಬನೊಂದಿಗೆ ಕೋಳಿ ಸಾಕಣೆ ಕುರಿತು ಆಳವಾದ ಚರ್ಚೆಯಲ್ಲಿ ಮುಳುಗಿದ್ದ. ಆಕೆ ತನ್ನ ಸೀರೆಯ ಮೇಲಿಟ್ಟುಕೊಂಡಿದ್ದ ಶಾಲನ್ನು ಎಷ್ಟು ಚಾಣಾಕ್ಷತನದಿಂದ ತೊಡೆಗಳ ಮೇಲೆ ಹಾಸಿಕೊಂಡಳೆಂದರೆ ನನ್ನ ಬಲಗೈ ಅದರಡಿಗೆ ಸಿಕ್ಕಿಕೊಂಡಿತು. ಉತ್ತರ ದಿಕ್ಕಿಗೆ ಗಾಡಿ ದಕ್ಷಿಣ ದಿಕ್ಕಿನತ್ತ ಬೀಸುತ್ತಿದ್ದ ಗಾಳಿಯನ್ನು ಸೀಳಿಕೊಂಡು ಓಡುತ್ತಿತ್ತು.

ಸುತ್ತಮುತ್ತಲಿನ ಜನರ . ಪರಿವೆಯೇ ಆಕೆಗಿರಲಿಲ್ಲ. ಅಷ್ಟೇ ಅಲ್ಲ, ಯಾರಿಗೂ ನಮ್ಮತ್ತ ಲಕ್ಷ್ಯವಿರಲಿಲ್ಲ. ಆದರೆ ಗದ್ದಲದಲ್ಲಿ ಇಂಥವರ ಬಗ್ಗೆ ಯೋಚಿಸುವಷ್ಟು ತಾಳ್ಮೆ ಯಾರಿಗೆ ಇರುತ್ತದೆ, ಹೇಳಿ. ನಮ್ಮೆದುರು ಕುಳಿತಿದ್ದ ತರುಣ ಮಾತ್ರ ನಮ್ಮತ್ತ ಹೊಟ್ಟೆಕಿಚ್ಚಿನಿಂದ ನೋಡುತ್ತಿದ್ದ. ನನ್ನ ಒಂದು ಕೈ ಮತ್ತು ಆಕೆಯ ಒಂದು ಕೈ, ಒಟ್ಟು ಎರಡು ಕೈಗಳು ಕಣ್ಮರೆಯಾದದ್ದು ಆತನಿಗೆ ಗೊತ್ತಾಗಿಬಿಟ್ಟಿತ್ತಲ್ಲದೇ ಶಾಲಿನ ಕಡೆಗೇ ದೃಷ್ಟಿ ಹರಿಸುತ್ತ ಕುಳಿತುಕೊಂಡಿದ್ದ.

ಹುಡುಗಿ ತನ್ನ .ತಲೆಯನ್ನು ನನ್ನ ಭುಜದ ಮೇಲೆ ಇಟ್ಟಿದ್ದಳು. ನನಗೋ, 'ಮಧುಚಂದ್ರಕ್ಕೆ ಹೊರಟ ನವದಂಪತಿಗಳು ನಾವು, ಎರಡನೆ ದರ್ಜೆಯ ರಿಸರ್ವ್ ಆಗದ ಬೋಗಿಯಲ್ಲಿ ಕುಳಿತು ಕಷ್ಟಪಡುತ್ತಿರುವೆವೋ ಏನೊ' ಎಂಬ ಅನಿಸಿಕೆಯುಂಟಾಗಿಬಿಟ್ಟಿತ್ತು. ಕಣ್ಣು ಮುಚ್ಚಿದ್ದ ಆಕೆಯ ಉಸಿರಾಟ ನನ್ನನ್ನು ಹೆಚ್ಚು ಕಾತುರನನ್ನಾಗಿಸಿತು. ಆಕೆಯ ಪರಿಸ್ಥಿತಿಯೂ ನನ್ನ ಹಾಗೇ ಇರಬೇಕು. ನಾವಿಬ್ಬರೂ ಒಂದು ಬೇರೆ ಲೋಕದಲ್ಲೇ ವಿಹರಿಸತೊಡಗಿದ್ದೆವು: ಟಿಕೆಟ್ ಪರೀಕ್ಷಕರಿಲ್ಲದ ಲೋಕದಲ್ಲಿ. ಒಂದು ವೇಳೆ ಆಗ ಟಿಟಿಇ ಏನಾದರೂ ಬಂದಿದ್ದರೆ ನನಗೆ ಎಷ್ಟು ನಿಲ್ಲಲೂ ಕೂಡ ಆಗುತ್ತಿರಲಿಲ್ಲವೋ ಏನೊ.

ಆಕೆ ಇಳಿಯಬೇಕಿದ್ದ ನಿಲ್ದಾಣ ಬಂತು. ನಾನು ಆಕೆಯತ್ತ ನೋಡಿ ಮುಗುಳ್ನಗೆ ಬೀರಿದೆ. ಕೃತಜ್ಞತಾಪೂರ್ವಕವಾಗಿ. ಆಕೆ ಕೂಡ ನನ್ನತ್ತ ನೋಡಿದಳು. ಕಣ್ಣಲ್ಲೇ ಕರೆದಳು. ಹೋಗಿ ಬರುತ್ತೇನೆಂದು ಕಣ್ಣುಗಳಿಂದಲೇ ಹೇಳಿದಳು.

ಈ ಅನುಭವ ನನ್ನ ಮೇಲೆ ಒಂದು ಅಳಿಸಲಾರದ ಪರಿಣಾಮವುಂಟುಮಾಡಿದ್ದಂತೂ ನಿಜ. ನಾನು ದಿಲ್ಲಿಗೆ, ನಂತರ ಕಲಕತ್ತಾಕ್ಕೆ ಹೋಗುವಾಗ ಆ ರಾಜಸ್ಥಾನೀ ಸುಂದರಿ ನನ್ನ ಹೃದಯದಲ್ಲಿ ನನ್ನೊಂದಿಗೆ ಪಯಣಿಸಿದಳು; ಕಲಕತ್ತಾ ತಲುಪುವವರೆಗೂ. ನಗರದಲ್ಲಿ ತಿರುಗುತ್ತಿದ್ದ ಹಾಗೆಯೇ ನನಗೆ ಒಮ್ಮಿಂದೊಮ್ಮೆಲೇ 'ಬಡವರ ನಗರಕ್ಕೆ ಬಂದಿದ್ದೇನೆ ಅನ್ನಿಸಿತು. (ಯಾರೋ ಗಾಡಿಯಲ್ಲಿ ನನಗೆ ಕಲಕತ್ತಾವನ್ನು ಆ ರೀತಿ ಬಣ್ಣಿಸಿದ್ದು ನೆನಪಿಗೆ ಬಂತು.) ಟಿಕೆಟ್ಟಿಲ್ಲದೇ, ಎಲ್ಲಿಯೂ ವಿಚಾರಣೆಗೊಳಗಾಗದೇ ಇಲ್ಲಿಗೆ ಬಂದ ನಾನು ಬಡವ. ನನ್ನಲ್ಲಿ ಇನ್ನೂ ಕೆಲವು ರೂಪಾಯಿಗಳು ಉಳಿದಿದ್ದವು. ಯಾಕೆಂದರೆ ನಾನು ಪ್ರಯಾಣದ ಸಮಯದಲ್ಲಿ ಬರಿಯ ಜಾಗರೂಕನಾಗಿದ್ದೆ. ಮತ್ತು ನನ್ನ ಸಹಪ್ರಯಾಣಿಕರಾದರೂ ಪ್ರೀತಿಯಿಂದ ತಿಂಡಿ ಕೊಟ್ಟರೆ ಒಂದು ಮುಂದು ನೋಡದೇ ಸ್ವೀಕರಿಸುತ್ತಿದ್ದೆ. ಕಲಕತ್ತಾದಲ್ಲಿ ನಾನು ಬಂಧಿಸಲ್ಪಟ್ಟೆ

ದ್ದೇನೇನೋ ಎಂಬ ಭಾವನೆಯುಂಟಾಯಿತು. ಅಂತೆಯೇ ನಾನು ಆಗಾಗ ಒಂದೆಡೆಯಿಂದ ಮತ್ತೊಂದೆಡೆಗೆ ಪ್ರಯಾಣಿಸುತ್ತಿದ್ದೆ, ಟಿಕೆಟ್ಟಿಲ್ಲದೆ.

ಗಂಗಾ ನದಿಗೆ ಸೇತುವೆ ನಿರ್ಮಾಣವಾಗುತ್ತಿರುವ ನ್ಯೂಫರಕ್ಕಾ (ಜ್ಯೂ) ಪಟ್ಟಣಕ್ಕೆ ಬಂದೆ. ಟಿಟಿಇಗಳನ್ನು ಯಾವ ರೀತಿ ಎದುರಿಸಬೇಕೆಂದು ಆಗಲೇ ಗೊತ್ತಾಗಿಬಿಟ್ಟಿತ್ತು. ಬಂಗಾಲದ ತುಂಬೆಲ್ಲ ಹಗಲಿನಲ್ಲಿ ಗಾಡಿ ಹತ್ತಿ ಪ್ರಯಾಣಿಸುತ್ತಿದ್ದೆ. ರಿಸರ್ವ್ ಆಗದ ಗಾಡಿಗಳಲ್ಲಿ ಸಾಮಾನ್ಯವಾಗಿ ಒಬ್ಬನೇ ಟಿಟಿಇ ಇರುತ್ತಾನೆ. ಆತ ಯಾವ ಡಬ್ಬಿಯಿಂದ ಯಾವ ಡಬ್ಬಿಗೆ ಹೋಗುತ್ತಾನೆ ಎಂಬುದು ನೀವು ಗಾಡಿಯ ಬಾಗಿಲ ಬಳಿ ನಿಂತು ನೋಡುತ್ತಿದ್ದರೆ ಗೊತ್ತಾಗಿಬಿಡುತ್ತದೆ. ನಿಮ್ಮ ಡಬ್ಬಿಗೇನಾದರೂ ಆತ ಬಂದರೆ ನೀವು ಮತ್ತೊಂದು ಡಬ್ಬಿಗೆ ಹೋಗಿಬಿಡಬಹುದು.

ಫರಕ್ಕಾದಿಂದ ಡಾರ್ಜಿಲಿಂಗಿಗೆ ಹೋಗಬೇಕೆಂದಿದ್ದೆ. ಸಿಲಿಗುರಿಗೆ ಹೋಗುವ ಗಾಡಿ ರಾತ್ರಿ ೧೦.೩೦ಕ್ಕೆ ಹೊರಡುತ್ತಿತ್ತು. ಗಾಡಿಯ ತುಂಬ ಪ್ರಯಾಣಿಕರು. ಅಂತೂ ಮತ್ತೊಂದು ನಿದ್ರೆಯಿಲ್ಲದ ರಾತ್ರಿ ಕಳೆಯಬೇಕಾಯಿತು ಅಂದುಕೊಂಡೆ. ಲಗ್ಗೇಜಿಡುವ ರ್ಯಾಕಿನ ಮೇಲೆ ಹತ್ತಿ ಕುಳಿತೆ. ಅಲ್ಲೊಬ್ಬ ಸೈನಿಕ ಮಲಗಿಕೊಂಡಿದ್ದ. ರ್ಯಾಕಿನ ತುದಿಗೆ ಕುಳಿತು ಆಧಾರಕ್ಕೆಂದು ಇದ್ದ ಲೋಹದ ಪಟ್ಟಿಗೆ ಕಾಲು ಒತ್ತಿ ಕುಳಿತೆ, ಕೆಳಗೆ ಬೀಳುವುದನ್ನು ತಪ್ಪಿಸಿಕೊಳ್ಳುವ ಉದ್ದೇಶದಿಂದ. ಅರೆನಿದ್ರೆ ಮತ್ತು ಪೂರ್ಣ ಎಚ್ಚರಗಳ ನಡುವೆ ತೂಗುಯ್ಯಾಲೆಯಾಡುತ್ತ ರಾತ್ರಿಯಿಡೀ ಹೀಗೇ ಕಳೆಯಬೇಕೋ ಏನೋ ಎಂದು ಯೋಚಿಸುತ್ತ ಕುಳಿತಿದ್ದಂತೆಯೇ ಕಾಲಮೇಲೆ ತಣ್ಣಗಿನದೇನೋ ಹರಿದಂತೆ ಅನ್ನಿಸಿತು.

ಆತ ಟಿಕೆಟ್ ಕಲೆಕ್ಟರ್. ಮಲಗಿದವರನ್ನೆಲ್ಲ ಎಬ್ಬಿಸುತ್ತಿದ್ದ. ಅವರು ಟಿಕೆಟ್ ತೆಗೆದು ತೋರಿಸುವಷ್ಟು ವ್ಯವಧಾನ ಅವನಿಗಿರಲಿಲ್ಲ. ಆತ ತನ್ನ ಬೆನ್ನು ನನ್ನ ಕಡೆಗೆ ತಿರುಗಿಸಿಕೊಂಡು ನಿಂತಿದ್ದ ಸಮಯದಲ್ಲಿ ನಾನು ತಟ್ಟನೇ ರ್ಯಾಕಿನಿಂದ ಕೆಳಗಿಳಿದು ಜನರ ನಡುವೆ ನುಸುಳಿಕೊಂಡು ಬಾಗಿಲ ಬಳಿ ಧಾವಿಸಿದೆ. ಪ್ಲಾಟ್‌ಫಾರ್ಮ್ ಎಂಬಲ್ಲಿ ಗಾಡಿ ನಿಂತು ಬಿಟ್ಟಿತ್ತು. ನಾನು ಅವಸರದಿಂದ ಕೆಳಗಿಳಿದವನೇ ಡಬ್ಬಿಯಿಂದ ಹೊರ ಓಡಿದೆ.

ಪ್ಲಾಟ್‌ಫಾರ್ಮ್ ತುಂಬೆಲ್ಲ ಮಿಲಿಟರಿ ಪೋಲೀಸರು ಟಿಕೆಟ್ ಪರೀಕ್ಷೆ ಮತ್ತು ಟಿಕೆಟ್ಟಿಲ್ಲದ ಪ್ರಯಾಣಿಕರನ್ನು ಹಿಡಿಯುವುದಕ್ಕಾಗಿ ಬಂದಿದ್ದರು. ಯಾರೋ ಒಬ್ಬ ಟಿಕೆಟ್ಟಿಲ್ಲದ ಪ್ರಯಾಣಿಕನನ್ನು ಹಿಡಿಯಲು ಹೊರಟ ಹಾಗೆ ಬೋಗಿಗಳ ಬಾಗಿಲುಗಳನ್ನು ಭದ್ರವಾಗಿ ಮುಚ್ಚಲಾಗುತ್ತಿತ್ತು. ಕಿಟಕಿಗಳ ಶಟರ್‌ಗಳನ್ನು ಕೂಡ ಎಳೆದು ಯಾರೂ ಒಳಬಾರದ ಹಾಗೆ ಮಾಡಿದ್ದರು.

ಗಾಡಿ ಚಲಿಸಲಾರಂಭಿಸಿತು. ಯಾವ ಬೋಗಿಯ ಬಾಗಿಲೂ ತೆರೆದಿರಲಿಲ್ಲ, ಕಿಟಕಿಗಳು ಕೂಡ. ನಾನು ಚಲಿಸುವ ಗಾಡಿಯನ್ನೇರಲು ಓಡತೊಡಗಿದೆ.

## ಊಟಕ್ಕೇನು?

ನಾನು ದಿನವೊಂದಕ್ಕೆ ೨ ರೂ. ಗಳಿಗಿಂತ ಎಂದೂ ಹೆಚ್ಚು ಖರ್ಚು ಮಾಡಲಿಲ್ಲ. ಸಾಮಾನ್ಯವಾಗಿ ಉತ್ತರ ಭಾರತದ ಎಲ್ಲಾ ರೈಲು ನಿಲ್ದಾಣಗಳಲ್ಲಿ ಪೂರಿಗಳನ್ನು ರೂಪಾಯಿಗೆ ಹತ್ತರಂತೆ ಮಾರುತ್ತಾರೆ. ಹಣ್ಣುಗಳೂ ಅಗ್ಗ. ಪೇರಲ ಹಣ್ಣು ರೂಪಾಯಿಗೆ ಒಂದು ಕಿಲೋ. ಮತ್ತು ಒಂದು ರೂಪಾಯಿ ಕೊಟ್ಟರೆ ಆರರಿಂದ ಹತ್ತು ಬಾಳೆಯಹಣ್ಣು ಸಿಕ್ಕುತ್ತವೆ. ಸಹಪ್ರಯಾಣಿಕರು ವಿಶ್ವಾಸದಿಂದ ಕೊಟ್ಟ ತಿಂಡಿಯನ್ನು ಎಂದೂ ಬೇಡ ಅನ್ನಲಿಲ್ಲ. ಸಾಕಷ್ಟು ನೀರು ಕುಡಿಯುತ್ತಿದ್ದೆ. ಧೂಮಪಾನ ವರ್ಜಿಸಿದ್ದೆ.

ನಾನೆಲ್ಲಿ ಉಳಿದರೂ ನನ್ನ ಮಾತಿಗೆ ಜನ ತುಂಬ ಮರುಳಾಗುತ್ತಿದ್ದರು. ನನ್ನ ಸ್ನೇಹಿತರಾಗಿ ತಮ್ಮೊಡನೆ ಊಟಕ್ಕೆ ಬರಬೇಕೆಂದು ಒತ್ತಾಯಿಸುತ್ತಿದ್ದರು.

ಬೋಗಿಯ ಹೊರಗಡೆ ಇರುವ ಆಧಾರ ಹಿಡಿದು ಬೋಗಿಯ ಮೆಟ್ಟಿಲೇರಿ ನಿಂತೆ. ಕೂಡಲೇ ಬಾಗಿಲನ್ನು ಧಡಧಡ ಬಡಿಯತೊಡಗಿದೆ. [illegible] ಧ್ವನಿ ಕೇಳಿಸಿತು. '[illegible] ಸಾಯಿಬ್ರೀನಿ' ಅಂತ ಕೂಗಿದೆ. ಬಾಗಿಲು ಅರ್ಧ ತೆರೆಯಿತು. [illegible] ಬಾಗಿಲನ್ನು ಪೂರ್ತಿ ತೆರೆಯುವುದು ಸಾಧ್ಯವಿರಲಿಲ್ಲ.

ನಾನು ಒಳಗೆ ನುಸುಳಿಕೊಂಡಾದ ಮೇಲೆ ನನಗಾಗಿ ಬಾಗಿಲು ತೆರೆಯಲು ಅನುಕೂಲವಾಗಲಿ ಎಂದು ಮೂವರು ತರುಣರು ಸಂಡಾಸಿನೊಳಗೆ ಹೋಗಿ ನಿಲ್ಲಬೇಕಾಯಿತೆಂದು ತಿಳಿಯಿತು. ಹತ್ತಾರು ಮುಖಗಳು ಪ್ರಶ್ನಾರ್ಥಕವಾಗಿ ನನ್ನೆಡೆ ನಿಟ್ಟಿಸಿದವು. 'ಎಲ್ಲಿಂದ ಬಂದ್ರಿ?' ಯಾರೋ ಕೇಳಿದರು. 'ಬಂಬೈಯಿಂದ' ಉತ್ತರಿಸಿದೆ. ಅಷ್ಟರಲ್ಲೇ ಯಾರೋ ಒಬ್ಬ ಶುರು ಮಾಡಿದ: "ಬಂಬೈಸೆ ಆಯಾ ಮೇರಾ ದೋಸ್ತ್, ದೋಸ್ತ್ ಕೋ ಸಲಾಂ ಕರೋ." ಉಳಿದವರು ನಗುತ್ತ ಹಾಡನ್ನು ಮುಂದುವರಿಸಿ ನನ್ನ ಗೇಲಿಮಾಡತೊಡಗಿದರು. ನಾನು ಸುಮ್ಮನೆ ನಕ್ಕೆ. ನಾನು ಬಂದದ್ದು ಅವರಿಗೆ ಸಂತೋಷ ತಂದಿತಲ್ಲಾ ಎಂದು ನನಗೇ ಸಂತೋಷವಾಗಿತ್ತು. ರಾತ್ರಿಯಿಡೀ ಅವರು ಮಜವಾಗಿ ಕಾಲ ಕಳೆದರು; ನನ್ನನ್ನು ಗೇಲಿಮಾಡುತ್ತ, ತಮ್ಮ ತಮ್ಮಲ್ಲೇ ನಗೆಯಾಡುತ್ತ ಮತ್ತು ಇತರರ ಬಗ್ಗೆ ಅಣಕುಮಾಡುತ್ತ. ಅವರು ಕೂಡ ನನ್ನ ಹಾಗೇ ಟಿಕೆಟಿಲ್ಲದ ಪ್ರಯಾಣಿಕರೆಂದು ನನಗೆ ಗೊತ್ತಾಗಿ ಬಿಟ್ಟಿತು.

ಸಿಲಿಗುರಿಯಲ್ಲಿ, ದಾರ್ಜಿಲಿಂಗಿಗೆ ಚಳಿಯಿಂದ ರಕ್ಷಿಸಿಕೊಳ್ಳಲು ಬೆಚ್ಚ ಬಟ್ಟೆ ಬರೆಗಳಿಲ್ಲದೆಯೇ ಹೋಗುವುದು ಪ್ರಾಣಾಂತಿಕವಾದದ್ದು ಎಂದು ನನಗೆ ಗೊತ್ತಾಯಿತು. ಅಂತೆಯೇ ನನ್ನ ಮುಂದಿನ ಗುರಿ ಕಟಿಹಾರಕ್ಕೆ ಹೋಗುವುದು. ನಾನು ಹತ್ತಿದ ಗಾಡಿ ಲಕ್ನೋಕ್ಕೆ ಹೋಗುವುದಾಗಿತ್ತು. ಗಾಡಿಗೊಂದು ಅರೆಮ್ಮಿಸ್ ಬೋಗಿಯಿತ್ತು, ಕಟಿಹಾರದಿಂದ ಬಂದ ಅರೆಮ್ಮಿಸ್ ನೌಕರರಿಗಾಗಿ. ಆದರೆ ಅದರಲ್ಲಿ ಎಲ್ಲ ತರಹದ ಜನ ಕುಳಿತಿದ್ದರು. ಅಲೆಮಾರಿಗಳು, ಬಾಗವಾನರು, ಹೆಂಗಸರು, ಭಿಕ್ಷುಕರು ಇತ್ಯಾದಿ. ಒಬ್ಬೊಬ್ಬರು

ಅವರೆಲ್ಲರಿಗೆ. ಪ್ರಶ್ನೆಗಳಿಗೆ ಉತ್ತರವೆಂಬಂತೆ. ನಾನು.

ಗಾಡಿ ಹೊರಟು [illegible] ನಾನು [illegible]. [illegible] ಮೊದಲು ಗಮನಿಸಿರಲಿಲ್ಲ. ಯಾರೋ ಏನೋ [illegible] 'ಟಿಕೆಟ್ ಎಲ್ಲಿದೆ?' ಎಂದು ಪ್ರಶ್ನಿಸಲಿಲ್ಲ. ನನಗೆ ಅಚ್ಚರಿಯುಂಟಾಯಿತು. ಬಹುಶಃ ನನ್ನ ವ್ಯಕ್ತಿತ್ವ-ಗೌರವ ತರಿಸುವಂತಿರುವುದರಿಂದ ಹೀಗಾಗಿರಬೇಕು ಎಂದುಕೊಂಡೆ. ಆದರೆ ಕೆಲ ನಿಮಿಷಗಳ ಮೇಲೆ ಗೊತ್ತಾಯಿತು. ಆತ ಟಿಕೆಟ್ ಪರೀಕ್ಷೆ ಮಾಡಲು ಬಂದಿಲ್ಲ. ಬದಲಾಗಿ ಅಲ್ಲಿದ್ದವರಿಂದ ಹಣ ಕೇಳಲು ಬಂದಿದ್ದಾನೆ ಎಂದು. ಆಗಲೇ ತನಗೆ ಹಣ ಕೊಟ್ಟವನಿರಬೇಕೆಂದು ನನ್ನನ್ನು ಹಣ ಕೇಳಲಿಲ್ಲ.

ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ಎಚ್ಚರವಾದಾಗ ಇಬ್ಬರು ಜಿಆರ್‌ಪಿ (ರೇಲ್ವೆ ಪೋಲೀಸ್)ಗಳು ಬಂದೂಕುಧಾರಿಗಳಾಗಿ ಬಂದು ಜನರನ್ನು ಯಾರು, ಏನು, ಯಾಕೆ, ಎತ್ತ ಮುಂತಾಗಿ ಪ್ರಶ್ನಿಸತೊಡಗಿದ್ದರು. ಅವರಲ್ಲೊಬ್ಬ ಜನರನ್ನು ರೊಕ್ಕ ಕೊಡಲು ಕೇಳುತ್ತಿದ್ದ. ಮತ್ತೊಬ್ಬ ಬಾಗಿಲ ಬಳಿ ನಿಂತು ಕಾಯುತ್ತಿದ್ದ. ಹಾಗೆ ನೋಡಿದರೆ ಅರೆಮ್ಮಿಸ್ ಬೋಗಿಯಲ್ಲಿ ಬೇರೆ ಜನ ಪ್ರಯಾಣ ಮಾಡಬಾರದು ಎಂಬ ಕಾನೂನಿದ್ದರೂ ಆ ಪೋಲೀಸಿನವನ ಜೇಬಿಗೊಂದಿಷ್ಟು ಹಣ ಎಣಿಸಿ ದಕ್ಷಿಣೆನೀಡಿದರಾಯಿತು, ಯಾವ ಕಾನೂನೂ ನಿಮ್ಮನ್ನು ತಡೆಯುವಂತಿಲ್ಲ. ಆತ ನನ್ನ ಬಳಿ ಬಂದಾಗ ನಾನು; ಕಲಕತ್ತಾದಲ್ಲಿ ನನ್ನ ಪರ್ಸ್ ಕಳೆಯಿತು, ಅದರೊಟ್ಟಿಗೆ ಟಿಕೆಟ್ಟೂ ಇತ್ತು, ಈಗ ಒಂದು ಚಿಕ್ಕಾಸೂ ಇಲ್ಲ ಎಂದು ಹೇಳಿದೆ. 'ಎಲ್ಲಿ ಹೊರಟಿದ್ದಿ?' 'ಕಟಿಹಾರಕ್ಕೆ.' 'ಒಂದು ರೂಪಾಯಿ ತಾ' ಎಂದ. ಕೊಟ್ಟೆ. ಎಷ್ಟು ಅಗ್ಗ!

ಕಟಿಹಾರದಿಂದ ನಾನು ಬರೌನಿಗೆ ಹೋದೆ. ಅಲ್ಲಿಂದ ಮೋಕಾಮೇಹಕ್ಕೆ. ನಂತರ ಪಟ್ನಾಕ್ಕೆ. ಪ್ರತಿ ಊರಲ್ಲೂ ನನಗೆ ವಿಶಿಷ್ಟ ಜನ ಕಂಡರು. ಮೋಕಾಮೇಹ್‌ದಲ್ಲಿ ನನಗೆ ಕೆಲವು ಫ್ಯಾಕ್ಟರಿ ಕೆಲಸಗಾರರ ಸ್ನೇಹವಾಯಿತು.

ವಾಗ, "ಏನೂ ಚಿಂತೆ ಬೇಡ. ನಿನ್ನನ್ನು ಚೆನ್ನಾಗಿಯೇ ನೋಡಿಕೊಳ್ಳುತ್ತೇನೆ" ಎಂದು ಹೇಳಿದ. ಆತನ ಮಾತಿನ ಅರ್ಥ ಏನಿತ್ತೆಂದು ಯೋಚಿಸುವ ಗೋಜಿಗೆ ಹೋಗಲಿಲ್ಲ ನಾನು. ಟಿಟಿಇ ಕೋಣೆಯಲ್ಲಿ ನಾಲ್ಕಾರು ಮಂದಿ ನೀಲಿ ಕೋಟಿನವರಿದ್ದರು. ಅವರೆಲ್ಲ ಸೇರಿ ಒಬ್ಬನ ಮೇಲೆ ಪ್ರಶ್ನೆಗಳ ಮಳೆಗರೆಯುತ್ತಿದ್ದರು. ಆತ ಹರಕು ಧೋತರ ಉಟ್ಟುಕೊಂಡವ, ಅಳುತ್ತ ಗಟ್ಟಿಯಾಗಿ ಹೇಳುತ್ತಿದ್ದ: "ಏಮ್ಮಯ್ಯ ಅಂತೀನಿ, ಬಿಟ್ಟುಬಿಡಿ ನನ್ನ. ಕಾಲು ಹಿಡೀತೀನಿ. ಬಡವ. ಬಿಟ್ಟುಬಿಡಿ." ಮೂಗಿನಿಂದ ಸಿಂಬಳ ಸುರಿಯುತ್ತಿತ್ತು. ಆತ ಹೇಳುತ್ತಿದ್ದ ಮಾತು ಕೇಳಿ ಅವರಿಗೆ ನಗೆ ಬರುತ್ತಿತ್ತು. ಕೊನೆಗೆ ಒಬ್ಬ ನೀಲಿ ಕೋಟಿನವ, "ಹೂಂ, ಓಡು. ಮತ್ತೊಮ್ಮೆ ಸಿಕ್ಕಿಬಿದ್ದರೆ ಮಾತ್ರ..." ಎನ್ನುತ್ತಿದ್ದಂತೆಯೇ ಸಿಂಬಳ ಸುರುಕ ಸರಕ್ಕನೇ ಓಡಿದ. ನಂತರ ನನ್ನ ಮೇಲೆ ಬಿತ್ತು ಅವರ ದೃಷ್ಟಿ.

ನಾನು ಯಾರು ? ಯಾಕೆ ಹಿಡಿದು ತಂದಿದ್ದಾರೆ? ಟಿಕೆಟ್ ರಹಿತ ಪ್ರಯಾಣ ಅಪರಾಧ ಎಂದು ನನಗೆ ಗೊತ್ತಿಲ್ಲವೆ? ಎಲ್ಲಿಗೆ ಹೊರಟಿದ್ದೇನೆ? ಎಂಬ ಅವರ ಪ್ರಶ್ನೆಗಳಿಗೆ ಉತ್ತರಿಸಿದೆ.

"ವಾರಾಣಸಿಗೇಕೆ ಹೋಗುತ್ತಿರುವಿ?" ಎಂಬ ಪ್ರಶ್ನೆ ಬಂದಾಗ, "ನಾನೊಬ್ಬ ಯಾತ್ರಿಕ. ವಾರಾಣಸಿಗೆ ಹೋಗುತ್ತೇನೆಂದು ಹರಕೆ ಹೊತ್ತಿದ್ದೆ" ಎಂದೆ.

"ಹೀಗೆ, ಟಿಕೆಟ್ಟಿಲ್ಲದೇ, ಎಷ್ಟು ದೂರದಿಂದ ಬಂದಿದ್ದಿ?" ಎಂದು ಕೇಳಿದ್ದಕ್ಕೆ ಹೇಳಿದೆ, "ಹಿಂದಿನ ಜಂಕ್ಶನ್ನಿನಿಂದ."

ಅಲ್ಲಿಂದಿಲ್ಲಿಗೆ ಒಂಬತ್ತು ರೂಪಾಯಿ ಮೂವತ್ತು ಪೈಸೆ ರೈಲು ಪಾಸಲು. ಆದರೆ ಅಷ್ಟನ್ನು ಹೇಗೆ ಕೊಡುವುದು? ಅಷ್ಟು ಹಣವಾದರೂ ನನ್ನಲ್ಲಿ ಎಲ್ಲಿತ್ತು?

ನನ್ನ ಬಳಿ ಇದ್ದದ್ದು ಕೇವಲ ಐದು ಪೈಸೆಯ ಒಂದು ನಾಣ್ಯ ಮಾತ್ರ. ಅವರಿಗೆ ಅದನ್ನೇ ತೋರಿಸಿದೆ.

ಊಟಕ್ಕೇನು ಮಾಡುತ್ತೀ ಎಂದು ಕೇಳಿದಾಗ, ಊಟವಿಲ್ಲ, ಎರಡು ದಿನದಿಂದ ಉಪವಾಸ ಇರುವೆ ಎಂದೆ.

ವಾರಾಣಸಿಗೆ ನಾನು ನಡೆದೇ ಹೋಗುವೆ ಎಂದಾಗ ಅವರಿಗೆ ಅತಿ ಆಶ್ಚರ್ಯವಾಯಿತು. ಸ್ವಲ್ಪ ಹೊತ್ತು ಯೋಚಿಸಿದರು, ಒಬ್ಬ ಹಿಂದೂ ಯಾತ್ರಿಕ, ಹೊಟ್ಟೆಯಲ್ಲಿ ಏನೂ ಇಲ್ಲದೇ ನಡೆದು ಹೋಗುತ್ತಾನೆ ತನ್ನ ಹರಕೆ ತೀರಿಸಲು! ಕೊನೆಗೊಬ್ಬ ಹೇಳಿದ. "ನಿನ್ನನ್ನು ಮೂರು ತಿಂಗಳು ಜೇಲಿನಲ್ಲಿ ಇಡುತ್ತೇವೆ." ನಾನು ಹೆದರಲಿಲ್ಲ. "ನನ್ನನ್ನು ಬಿಟ್ಟುಬಿಡಿ. ಕಾಶಿಯ ದೇವರನ್ನು ಕಾಣಬೇಕಾಗಿದೆ" ಎಂದೆ.

ನನ್ನನ್ನು ಹಿಡಿದ ಆ ಇಬ್ಬರು ಶ್ವೇತಾಂಬರಿಯರು ಒಳಗೆ ಬಂದಾಗ ಹಿಂದಿಯಲ್ಲಿ, "ಎಂಥವನನ್ನು ಹಿಡಿದು ತಂದಿದ್ದೀರಿ? ಭಾರೀ ಮುಗ್ಧ. ನನ್ನ ಹೆದರಿಕೆಯ ನುಡಿಗಳಿಗೆ ಏನು ಹೇಳಬೇಕು ಎಂಬುದೂ ಗೊತ್ತಿಲ್ಲ ಆತನಿಗೆ. ಆಗಲೆ ಒಬ್ಬ ನನ್ನು ಬಿಟ್ಟೆ. ಈಗ ಈತ. ಹೀಗಾದರೆ ಈ ದಿನ ನಾವು ಯಾರನ್ನೂ ಹಿಡಿದ ದಾಖಲೆಯನ್ನು ಬರೆಯಲಾಗುವುದಿಲ್ಲ." ಎಂದು ಒಬ್ಬ ನೀಲಿ ಕೋಟಿನವ ಹೇಳಿದ.

ನಂತರ ನನ್ನ ಹೆಸರು ಕೇಳಿದ. ನಾನು ದಕ್ಷಿಣ ಭಾರತದ ಉದ್ದವಾದ ಹೆಸರು ಉಚ್ಚರಿಸಿ ಸ್ಪೆಲ್ಲಿಂಗು ಹೇಳತೊಡಗಿದಾಗ, 'ಏಯ್ ಹೋಗಯ್ಯಾ, ಸಾಕು, ತಲೆ ಕೆಡಿಸ್ಬೇಡ" ಎಂದ.

ನಾನು ಅವರ ಕಣ್ಣಿಗೆ ಅಷ್ಟು ಮುಗ್ಧನಾಗಿ ಕಂಡೆನೋ ಇಲ್ಲವೋ ನನಗೆ ಗೊತ್ತಿಲ್ಲ. ಗಡ್ಡ-ಮೀಸೆ ಬೆಳೆದ ಮುಖ, ಹೊಲಸು ಬಟ್ಟೆಗಳು, ಇವುಗಳಿಂದ ಬಹುಶಃ ನಾನೊಬ್ಬ ಅಪರಾಧಿ, ಕಿಸೆಗಳ್ಳನ ಹಾಗೆ ಕಾಣುತ್ತಿದ್ದನೇನೋ. ಬಟ್ಟೆಬರೆಗಳ ಮೇಲೆ ಈತ ಹೀಗೇ ಎಂದು ನಿರ್ಣಯಿಸಲು ಅವರಿಗೆ ಸಾಧ್ಯವಾಗಿರಲಿಕ್ಕಿಲ್ಲ. ಏನೇ ಆದರೂ ಅದೇ ಜಾಗಾದಲ್ಲಿ ನಾನು ಮತ್ತೊಮ್ಮೆ ಸಿಕ್ಕಿ ಬೀಳಲು ಇಷ್ಟ ಪಡಲಿಲ್ಲ. ಯಾಕೆಂದರೆ ನಾನು ವಾರಾಣಸಿಗೆ ಹೋಗಿದ್ದೇನೆಂದು ಅವರು ತಿಳಿದುಕೊಂಡಿರುತ್ತಾರೆ. ಕೇವಲ ೨೫ ಕಿ. ಮೀಗಳ ಅಂತರ. ವಾರಾಣಸಿಗೆ ನಡೆದೇ ಹೋಗಲು ನಿರ್ಧರಿಸಿದೆ.

ಅದೊಂದು ಅಂತ್ಯವಿಲ್ಲದ ದಾರಿ. ಒಂದು ವೇಳೆ ಈ ದಾರಿಯಲ್ಲಿ ನನ್ನಂಥ ಹಸಿದ ಬಡ ಪಾಪಿ ಯಾತ್ರಿಕ ಬಿಸಿಲಿನ ಝಳ ತಾಳಲಾರದೇ ಮೂರ್ಛೆ ಹೋಗಿ ಬಿದ್ದುಬಿಟ್ಟರೆ ಎಂದು ಯೋಚಿಸಿದೆ. ದಾರಿಯಲ್ಲೊಬ್ಬ ಅಂಗಡಿಯವ ನಾನು ನೀರು ಕೇಳಿದಾಗ ಕೊಟ್ಟು, ಯಾರು, ಏನು, ಎತ್ತ ಎಂದು ವಿಚಾರಿಸಿದ. ನಾನು ನನ್ನ 'ಹರಕೆ'ಯ ವಿಷಯ ಹೇಳಿ ಪುಣ್ಯಕ್ಷೇತ್ರಕ್ಕೆ ಹಸಿದ ಹೊಟ್ಟೆಯಲ್ಲೇ ಹೋಗುತ್ತಿರುವುದನ್ನೂ ತಿಳಿಸಿದೆ. "ತರುಣರು ಹಸಿದುಕೊಂಡಿರಬಾರದು," ಎನ್ನುತ್ತ ಆತ ಒಂದೆರಡು ಬಿಸ್ಕೀಟುಗಳನ್ನು ಕಪ್ಪು ಚಹವನ್ನು ಕೊಟ್ಟ. ಹೃತ್ಪೂರ್ವಕವಾಗಿ ಸ್ವೀಕರಿಸಿದೆ.

ವಾರಾಣಸಿಯನ್ನು ತಲುಪುವ ಮುಂಚೆ ನನ್ನಲ್ಲಿ ಅದರ ಬಗ್ಗೆ ಪೂರ್ತಿ ದಕ್ಷಿಣ ಭಾರತದ ಪುಣ್ಯಕ್ಷೇತ್ರಗಳ ಕಲ್ಪನೆಯೇ ಇತ್ತು: ನಗರ ಮಧ್ಯೆ ಒಂದು ಭವ್ಯ ದೇವಾಲಯ, ಯಾತ್ರಿಕರು, ಭಿಕ್ಷಕರು, ಅಂಗಡಿಯಿಟ್ಟುಕೊಂಡವರು, ದೂಡುಗಾಡಿಗಳಲ್ಲಿ ವ್ಯಾಪಾರ ಮಾಡುವವರು, ದೇವಾಲಯದ ಹೊರಗಡೆ ದೇವರ ಪಟಗಳ ಗಾಡಿಗಳು ಇತ್ಯಾದಿ. ಬಹುಶಃ ಗಂಗೆ ಮಧ್ಯೆ ಹರಿದು ನಗರವನ್ನು ಎರಡು ಭಾಗವಾಗಿ ವಿಂಗಡಿಸಿರಬೇಕೆಂದುಕೊಂಡಿದ್ದೆ. ಆದರೆ ನನ್ನ ಕಲ್ಪನೆಯಲ್ಲಿ ಅಲ್ಲಿಯ ರೇಶ್ಮೆ ಕೈಗಾರಿಕೆಯ ಬಗ್ಗೆ ಒಂದಿಷ್ಟೂ ನೆನಪು ಬರಲಿಲ್ಲ.

ಅಲ್ಲಿಗೆ ಹೋದ ಮೇಲೆ, ನಾನು ಊಹಿಸಿದ್ದಕ್ಕಿಂತಲೂ ಹೆಚ್ಚು ಜನ ಭಿಕ್ಷುಕರನ್ನು ಕಂಡೆ. ಒಂದು ವೇಳೆ ಕಾಶಿಯಲ್ಲಿ ನಿಮಗೆ ಹಣವಿಲ್ಲದಿದ್ದರೆ ನಮ್ಮ ಗರ್ವ ಬಿಟ್ಟು ಭಿಕ್ಷುಕರ ಸಾಲಿನಲ್ಲಿ ಸೇರಿಯೋ, ಅಥವಾ ಕುಷ್ಟರೋಗಿಗಳ ಜತೆಗೆ ಕುಳಿತುಕೊಂಡೋ ಭಿಕ್ಷೆ ಬೇಡಬಹುದು. ಶ್ರೀಮಂತರು ಮುಂಜಾನೆ–ಸಂಜೆ ಹೊತ್ತಿಗೆ ಲಡ್ಡುಗಳನ್ನು ಭಿಕ್ಷುಕರಿಗೆ ಹಂಚುತ್ತಾರೆ. ಸಾಲಿನಲ್ಲಿ ನಿಂತು ಅದನ್ನು ಪಡೆಯಬೇಕು. ಒಂದು ಸಲ ನಿಮ್ಮ ಸರತಿ ಮುಗಿಯಿತೆಂದರೆ, ಮತ್ತೆ ಹಿಂದೆ ಹೋಗಿ ಸಾಲಿನಲ್ಲಿ ನಿಂತು ಮತ್ತೊಂದು ಲಡ್ಡುವಿಗಾಗಿ ಕಾಯಬಹುದು. ಹೀಗೆ ಮಾಡಿದರೆ ನಿಮ್ಮ ಜತೆಗಿದ್ದವರ ಬಯ್ಗಳು ಹಿಡಿ ಶಾಪಗಳನ್ನು ಸಹಿಸುವುದೂ ಒಂದು ಅನುಭವವೇ.



ನನಗೆ ಬೇಕಾಗಿದ್ದು ಹೊಟ್ಟೆ ತುಂಬ ಊಟ, ಮತ್ತು ಕಣ್ಣು ತುಂಬ ನಿದ್ರೆ. ನನ್ನ ಸಮಸ್ಯೆಯನ್ನು ಒಬ್ಬ ಸಮವಯಸ್ಕನೇ ಅರ್ಥಮಾಡಿಕೊಂಡಾನು ಎಂದು ಯೋಚಿಸಿದೆ. ಅಂಥವನೊಬ್ಬ ಸಿಕ್ಕ. ನನ್ನ ತೊಂದರೆಗಳೆಲ್ಲ ತನ್ನವೇ ಎಂದ. ನನ್ನ 'ಕಥೆ' ಹೇಳಿದೆ. ತನ್ನ ಚಿಕ್ಕಪ್ಪ ರೇಲ್ವೆಯಲ್ಲಿ ಆಫೀಸರ್. ಆತನಿಂದ ಒಂದು ಪಾಸ್ ಕೊಡಿಸುವೆ ಎಂದ. ನಾನು ಸುಮ್ಮನಿದ್ದೆ.

ಜತೆಗೂಡಿ ಮಧ್ಯಾಹ್ನ ಊಟ ಮಾಡಿದೆವು. ನಂತರ ವಾರಾಣಸಿಯ ಸುತ್ತ ಒಂದು ಸುತ್ತು ಹೊಡೆದು ದೇವಾಲಯಕ್ಕೆ ಹೋದೆವು. ಆತ ದಾರಿಯುದ್ದಕ್ಕೂ ಕಾಶಿಯ ಬಗೆಗಿನ ನೂರಾರು ದಂತಕಥೆಗಳನ್ನು ಹೇಳಿಯೇ ಹೇಳಿದ. ತೀರ್ಥ ಪಡೆದೆ. ಉಳಿದ ಭಕ್ತರು ಮಾಡಿದಂತೆ ನಾನೂ ವಿಶ್ವನಾಥನ ಶಿವಲಿಂಗವನ್ನು ಮುಟ್ಟಿದೆ. ನನ್ನ ಮಿತ್ರನಿಗೆ ಬಹು ಸಂತೋಷವಾಗಿದ್ದಿರಬೇಕು. ನನಗಂತೂ ಆ ರಾತ್ರಿ ಸುಖನಿದ್ರೆ, ಮಿತ್ರನ ಮನೆಯ ಮೆತ್ತನ್ನ ಹಾಸುಗೆಯಲ್ಲಿ.

ಮರುಮುಂಜಾನೆ, ನನಗೆ ಎಲ್ಲಿ ಹೋಗಬೇಕಾಗಿದೆ–ಮುಂದಿನ ಪ್ರಯಾಣ ಎಲ್ಲಿ ಮುಂತಾಗಿ ಆತ ಕೇಳಿದ. ನನ್ನ ಮರುಪ್ರಯಾಣದ ಬಗ್ಗೆ ನಾನು ಬಂದ ಹಾದಿಯಲ್ಲೇ ಟಿಕೆಟ್ಟಿಲ್ಲದೇ ಮರಳಿ ಹೋಗುವೆ ಎಂದೂ ಹೇಳಿದೆ. ಅದು [illegible] ಅಂದನಾತ. ನಾನೆಲ್ಲಿಯಾದರೂ ಸಿಕ್ಕಿಬಿದ್ದರೆ ಎಂಬ ಭಯವಿದ್ದಿರಬೇಕು. ಕೊನೆಗೂ ಆತ ಪಾಸ್ ಕೊಡುವೆ ಎಂಬುದನ್ನು ನಾನು ಒಪ್ಪಿಕೊಳ್ಳಲೇ ಬೇಕಾಯಿತು. '[illegible]ಗೆ ಹೋಗುತ್ತೇನೆ. ಅಲ್ಲಿ ನಮ್ಮಪ್ಪ ಇದ್ದಾನೆ' ಎಂದು ಹೇಳಿದೆ.

ನಾನು ನಿಲ್ದಾಣಕ್ಕೆ ಹೋದೆ. ಆತನ ಚಿಕ್ಕಪ್ಪ ಭೆಟ್ಟಿಯಾಗಲಿಲ್ಲ. ಬದಲಾಗಿ ಸ್ವತಃ ಆತನೇ ಬಂದಿದ್ದ. ಕೈಯಲ್ಲೊಂದು ಕಾಗದವಿತ್ತು. 'ದಯವಿಟ್ಟು ಸಹಾಯಮಾಡಿ, ಉಪಕಾರಿ' ಎಂದು ಬರೆದಿತ್ತು. ಕೆಳಗೆ ಆತನ ಚಿಕ್ಕಪ್ಪನ ಸಹಿ. ಅದರಲ್ಲಿ ಬರೆದಿದ್ದ ನಂಬರಿನ ಗಾಡಿಯನ್ನು ಹತ್ತಿ ಹೊರಟೆ. ಡೆಹ್ರಾಡೂನ್‌ವರೆಗೂ ನಾನು ಹೀಗೆ ಹೋಗಬಹುದೆಂದೂ, ಯಾರಾದರೂ ಟಿಕೆಟ್ ಬಗ್ಗೆ ವಿಚಾರಿಸಿದರೆ ಅದನ್ನು ತೋರಿಸಬೇಕೆಂದೂ ಅದು ದೊರೆತ ಬಗೆಯನ್ನು ವಿವರಿಸಬೇಕೆಂದೂ ಮಿತ್ರ ಹೇಳಿದ.

ಈಗ ನನಗೆ ಕೆಡುಕೆನಿಸಿತು. ವಾರಾಣಸಿಯ ಈ ಸನ್ಮಿತ್ರನಿಗೆ ನಾನು ನನ್ನ ನಿಜವಾದ ಹೆಸರು ಹೇಳಿರಲಿಲ್ಲ. ಆದರೆ...ಒಂದು ವಿಚಾರ ಬಂತು, ರೂರ್ಕಿಗೆ ಹೊರಟಾಗ. ನನ್ನ ಚಿಕ್ಕಪ್ಪ–ಚಿಕ್ಕಮ್ಮ ಕಾಶೀಯಾತ್ರೆಮಾಡಲು ಐದು ಸಾವಿರ ರೂಪಾಯಿಗಳನ್ನು ಖರ್ಚು ಮಾಡಿದ್ದರಂತೆ. ನಾನು? ನಗು ಬಂತು. ಜತೆಗೆ ಒಂದು ರೀತಿಯ ಹೆಮ್ಮೆಯೂ ಉಂಟಾಯಿತು. ನಾನು ಯಾತ್ರಿಕನಲ್ಲ. ಪುಣ್ಯಕ್ಷೇತ್ರಗಳ ಯಾತ್ರೆ ಮಾಡಬೇಕೆಂಬ ಉದ್ದೇಶವೂ ನನ್ನಲ್ಲಿರಲಿಲ್ಲ. ಆದರೆ ಅಲೆಯುತ್ತ ಅಲೆಯುತ್ತ ಅಲ್ಲಿ ಹೋದವ ಅಷ್ಟೇ. ವಾರಾಣಸಿ ನಾನು ಭೆಟ್ಟಿಮಾಡಿದ ಒಂದು ಊರು ಅನಿಸಿತು ನನಗೆ.

ನಾನು ಮೂರು ವಾರಗಳಲ್ಲಿ ೫ ಸಾವಿರ ಕಿ. ಮೀ. ದೂರ ಪ್ರಯಾಣ ಮಾಡಿದೆ. ಟಿಕೆಟ್ಟಿಲ್ಲದೆ ಪ್ರಯಾಣ ಮಾಡುವುದು ಅಪರಾಧ ಎಂದು ನನಗೆ ಗೊತ್ತು. ಟಿಟಿಇ ಆಗಲಿ, ಪೋಲೀಸರಾಗಲಿ ಹಿಡಿದರೆ ಎಂಬ ಹೆದರಿಕೆ ಇದ್ದೇ ಇರುತ್ತಿತ್ತು. ಆದರೆ ಹೆದರಿಕೆಯೂ ಒಂದು ರೀತಿಯ [illegible] ಉಂಟುಮಾಡುತ್ತಿತ್ತು. ಜೇಬಿನ ತುಂಬ ಹಣ ಇಟ್ಟುಕೊಂಡು ಪ್ರದೇಶಗಳನ್ನು ಸುತ್ತುವುದರಲ್ಲೇನು ಮಜಾ? ನೀವು ದಣಿದಿದ್ದರೆ ಯಾರೂ ನಿಮ್ಮನ್ನು ಹಸಿವಿನಿಂದಲೇ ಇರಲು ಬಿಡುವುದಿಲ್ಲ ಎಂಬುದು ನನ್ನ ಅನುಭವಸಿದ್ಧ ಮಾತು. ಸ್ವಲ್ಪ ಸ್ನೇಹಸ್ವಭಾವವಿದ್ದರೆ ಸಾಕು. ನಿಮ್ಮ ಹೊಟ್ಟೆ ತುಂಬಿತೆಂದೇ ತಿಳಿದುಕೊಳ್ಳಿ. ✡



ಅಂಟಾರ್ಕ್ಟಿಕ್‌ನ ಶೋಧಕ ಕ್ಯಾಪ್ಟನ್ ರಾಬರ್ಟ್ ಫಾಲ್ಕನ್ ಹೇಳುತ್ತಾನೆ: "ಇತರರು ಸಣ್ಣವರೆಂಬ ಭಾವನೆ ಬರುವವರೆಗೂ ದೊಡ್ಡದಾಗಿ ವಿಚಾರ ಮಾಡುವುದಕ್ಕೆ ಹಿಂಜರಿಯಬೇಡಿ."

# ಪ್ರಸಾದ

ಬಾಯೆಂದಾಗ ಬಾರದೇ ಹೋದವಳೀದು
ಬೇಡೆಂದಾಗ ಬಂದು ತಲೆ ಮೇಲೆ ಕೂತಿಹಳು
ಸಾಕೆಂದರೂ ಮಿಂಚುಗೈ ಸೋಕಿ ರೋಮ
ರೋಮದಂಚು ನಿಲ್ಲಿಸಿ ಮೆಲ್ಲನೆ ಚಿತ್ತದ
ಕದ ಕದ ತೆರೆದು ಹೃದಯ ತಂತಿಯ ಮೀಟಿ
ಜೀವಸೆಲೆ ಝಿಲ್ಲನೆ ಬುಗ್ಗೆ ಚಿಮ್ಮುವಂತಾಗಿಸಿ
ಹತ್ತಿರ ನಿಂತು ಕುಲುಕುಲು ನಗುತ್ತಾಳೆ.
ಲೋಕೈಕ ಮಾಯಾವಿನಿ ಬೆಡಗಿ ಪಕ್ಕಾ ಚೂಟಿ
ಗೊತ್ತು, ಪೂಜೆಯಿಲ್ಲದಿಲ್ಲ ತೀರ್ಥಪ್ರಸಾದ
ಪೂಜಿಸಿದಷ್ಟೂ ಕಮ್ಮಿ ಚಾಚಿದ ಕೈ ಬರಿದೋ ಬರಿದು
ಎಷ್ಟೋ ಸಲ ನರಳಿಸಿ ಹೊರಳಾಡಿಸಿದ ದುಷ್ಟಳಿಂದೇಕೆ
ಬರಿದೆ ಬಟ್ಟಲ್ಲಿ ತಂತಾನೆ ಬಂದು ಕುಚಸುಳಿಯುಟ್ಟು
ಗೆಜ್ಜೆ ಕಿಂಕಿಣಿಸಿ ಲಜ್ಜೆತರವಾಗಿಸಿ ಮೋಹಿಸುವಳೋ
ಅಥವಾ ಕೊಟ್ಟಳೋ ಇಂದೀ ಕಪಟಿ
ಗ್ರಚ್ಚು ಮಾಟಿ............?

—ಅರವಿಂದ ನಾಡಕರ್ಣಿ

# ಖಾಸಗೀ ಜೀವ ಖಾಸು ಜೀವನ

ಒಂದು ಸಾರಿ, ಮನೆಯಲ್ಲಿ ಇಲಿಗಳ ಕಾಟ ತುಂಬಾ ಜಾಸ್ತಿ ಆಗಿದ್ದರಿಂದ, ನಮ್ಮ ಯಜಮಾನರು ಮನೆಗೆ ಇಲಿ ಪಾಷಾಣ ತಂದಿದ್ದರು. ಚಿಕ್ಕ ಚಿಕ್ಕ ಬೆಲ್ಲದ ಉಂಡೆಗಳೆರಡರ ಮೇಲೆ ಉದುರಿಸಿ, ಮನೆಯ ಮಕ್ಕಳಿಗೆಲ್ಲಾ ಎಚ್ಚರಿಕೆ ಕೊಟ್ಟು, ಡಬ್ಬಿಗಳ ಸಂದಿಯಲ್ಲಿ, ಇಲಿಗಳಿಗಾಗಿ ಇಟ್ಟಿದ್ದೆ. ವಾರದಲ್ಲಿ ೨-೩ ದಿನ ಡಬ್ಬಿ ಸರಿಸಿ ನೋಡಿದಾಗಲೂ ಆ ಬೆಲ್ಲದ ಉಂಡೆಗಳು ಯಥಾಸ್ಥಿತಿಯಲ್ಲಿಯೇ ಉಳಿದಿದ್ದವು. ಇಲಿಯ ಗಲಾಟೆ ಮಾತ್ರ ಎಂದಿನಂತೆ ನಡೆಯುತ್ತಲೇ ಇತ್ತು. ನಮ್ಮ ಯಜಮಾನರು ಬೆಲ್ಲದ ಉಂಡೆಗಳನ್ನು ಬಿಸಾಡಬೇಕೆಂತಲೂ, ಮಕ್ಕಳ ಕೈಗೆ ಸಿಕ್ಕರೆ ಅಪಾಯ ಎಂತಲೂ ಹೇಳುತ್ತಲೇ ಇದ್ದರು. ನನಗೆ ಮಾತ್ರ ಇಲಿ ಒಂದಲ್ಲ ಒಂದು ದಿನ ಅದನ್ನು ತಿಂದು ಸತ್ತು, ಗಲಾಟೆ ಕಡಿಮೆ ಆಗುತ್ತೆ ಎಂಬ ಭರವಸೆ. ಹೀಗಾಗಿ ತೆಗೆಯದೇ ಹಾಗೇ ಬಿಟ್ಟಿದ್ದೆ. ದಿನ ಕಳೆದಂತೆ ಇಟ್ಟಿದ್ದ ವಿಷಯವೂ ಮರೆತೇ ಹೋಯಿತು. ಇದಾಗಿ ಒಂದು ತಿಂಗಳು ಕಳೆದಿರಬಹುದು. ನಮ್ಮ ಮನೆಗೆಲಸದವಳಿಗೆ ಒಂದು ದಿನ ಡಬ್ಬಿಗಳೆಲ್ಲಾ ತೆಗೆದು ಕಸಗುಡಿಸುವಂತೆ ತಿಳಿಸಿದೆ. ದಿನಾಲು ಕೆಲಸಕ್ಕೆ ಬರುವಾಗ ತನ್ನ ೨-೩ ವರ್ಷದ ಮಗುವನ್ನು ಜೊತೆಗೆ ಕರೆದುಕೊಂಡು ಬರುತ್ತಿದ್ದಳು. ಅಡಿಗೆ ಮಾಡುತ್ತಿದ್ದವಳು, ಕಸ ಗುಡಿಸುವುದರ ಮೇಲ್ವಿಚಾರಣೆ ನೋಡಲು ಬಂದಾಗ, ಕೆಲಸದವಳ ಮಗುವಿನ ಕೈಲಿ ಬೆಲ್ಲದ ಉಂಡೆ ಇತ್ತು. ಡಬ್ಬಕ್ಕೆ ಸೀದಾ ಕೈಹಾಕಿ ಬೆಲ್ಲ ತೆಗೆದುಕೊಟ್ಟಳೇನೋ ಎಂದು ನನಗೆ ಸಿಟ್ಟು ಬಂದು ಕೇಳಿದಾಗ, ಷೆಲ್ಫಿನ ಮೇಲೆ ಬಿದ್ದಿದ್ದನ್ನು ಕೊಟ್ಟೆ ಎಂಬುದಾಗಿ ತಿಳಿಸಿದಳು.

ನಾನು ಇರಬಹುದೇನೋ ಎಂದು ಸುಮ್ಮನಾದೆ. ಮಧ್ಯಾಹ್ನ ಕೆಲಸದವಳು ಕೆಲಸಕ್ಕೆ ಬಾರದೆ, "ಮಗುವಿಗೆ ಇದ್ದಕ್ಕಿದ್ದ ಹಾಗೆ ವಾಂತಿ-ಭೇದಿ ಹಿಡಿದಿದೆ, ಆಸ್ಪತ್ರೆಗೆ ಕರೆದುಕೊಂಡು ಹೋಗಬೇಕು, ಕೆಲಸಕ್ಕೆ ಬರುವುದಿಲ್ಲ" ಎಂದು ಯಾರ ಕೈಲೋ ಹೇಳಿ ಕಳುಹಿಸಿದಳು. ಇವರುಗಳದ್ದು ದಿನವೂ ಏನಾದರೂ ಒಂದು ತಾಪತ್ರಯ ಇದ್ದದ್ದೇ ಎಂದು ಗೊಣಗಿಕೊಂಡು, ನಾನೇ ಕೆಲಸಗಳನ್ನು ಮಾಡಿಕೊಂಡೆ. ನಂತರ ಇದ್ದಕ್ಕಿದ್ದ ಹಾಗೇ, ಆ ಮಗು ಬೆಲ್ಲ ತಿಂದಿದ್ದು, ಅದು ಷೆಲ್ಫಿನ ಮೇಲೆ ಬಿದ್ದಿತ್ತು ಎಂದು ಕೆಲಸದವಳು ಹೇಳಿದ್ದು, ಈಗ ಆ ಮಗುವಿನ ವಾಂತಿ-ಭೇದಿ ಎಲ್ಲಾ ನೆನೆಸಿಕೊಂಡು, ಆ ಬೆಲ್ಲ ಪಾಷಾಣ ಹಾಕಿದ ಬೆಲ್ಲವೇ! ಎಂದು ಅನುಮಾನ ಬಂದು, ಒಂದು ಗಳಿಗೆ ಮೈ ನಡುಗಿತು. ಯಜಮಾನರ ಮಾತಿನಂತೆ ಬೆಲ್ಲ ಬಿಸಾಡದೇ ಎಂಥ ಅನಾಹುತವಾಯಿತಪ್ಪಾ ದೇವರೇ ಎಂದು ನನ್ನ ಮನಸ್ಸಿನ ಕಳವಳ ಹೇಳತೀರದಂತಾಯಿತು. ಬೆಳಗ್ಗೆ ಯಾದರೂ ಈ ವಿಷಯ ಜ್ಞಾಪಕಕ್ಕೆ ಬಂದಿದ್ದರೆ, ಎಂದು ಕೈ ಕೈ ಹಿಸುಕಿಕೊಳ್ಳುವ ಹಾಗಾಯಿತು. ಕೆಲಸದವಳ ಮನೆ ಆದರೂ ಗೊತ್ತಿದ್ದರೆ, ಮಗುವನ್ನು ನಾನೇ ಸರಿಯಾದ ಡಾಕ್ಟರರಿಗೆ ತೋರಿಸಿ, ಚಿಕಿತ್ಸೆ ಕೊಡಿಸಬಹುದಿತ್ತು. ಅದಕ್ಕೂ ಅವಕಾಶ ಇಲ್ಲದಂತಾಯಿತು. ರಾತ್ರಿಯಿಡೀ ನಿದ್ದೆಯಿಲ್ಲದೇ ಹೊರಳಾಡಿ ಸಂಕಟಪಟ್ಟೆ. ನಾನೇ ಮಗುವನ್ನು ಕೊಂದಂಥ ಅನುಭವ. ಆದರೆ ಬೆಳಗ್ಗೆ ಏಳುತ್ತಲೇ ಕೆಲಸದವಳು ಮಗುವಿನೊಡನೆ ಹಾಜರಾದಾಗ, ಮನಸ್ಸಿಗೆ ಎಷ್ಟೋ ಹಾಯೆನಿಸಿತು. ವಿಚಾರಿಸಿದಾಗ ಕೆಲಸದವಳು ಹೇಳಿದಳು;

"ಅಮ್ಮ ಮಗುವಿಗೆ ಡಬ್ಬದಿಂದಲೇ ಬೆಲ್ಲ ತೆಗೆದುಕೊಟ್ಟಿದ್ದೆ. ನೀವು ಬೈತೀರೀಂತ ಸುಳ್ಳು ಹೇಳಿದೆ. ದೇವರು ನನಗೆ ಸರಿಯಾದ ಶಿಕ್ಷೆ ಕೊಟ್ಟ ನೋಡಿ." ನನಗೆ ಮಾತ್ರ ಈಗ ಸಿಟ್ಟು ಬರಲಿಲ್ಲ. ಬದಲಾಗಿ ನಿರಾಳವಾಗಿ ಉಸಿರಾಡುವಂತಾಯಿತು.

–ವತ್ಸಲಾ ಬೆಳಗಾಂವಕರ

ತಿಂಗಳ ಕೊನೆ ದಿನ. ಜೇಬಿನಲ್ಲಿದ್ದದ್ದು ಕೇವಲ ಪುಡಿಗಾಸು ಮತ್ತು ಒಂದು ಗಟ್ಟಿ ರೂಪಾಯಿ. ಸಂಜೆ ಎಂದಿನಂತೆ ಕೆಲಸ ಮುಗಿಸಿ ಮನೆಗೆ ಬರುತ್ತಿದ್ದಾಗ ಅಪರೂಪಕ್ಕೆಂಬಂತೆ ದೂರದೂರಿನ ಗೆಳೆಯ ಭೇಟಿಯಾದ. 'ಬಾ ಚಾ ಕುಡಿಯೋಣ' ಎಂದು ಆಹ್ವಾನಿಸಿದೆ. 'ಬೇಡ. ನನಗೆ ಕಿಮಾಮ್ ಪಟ್ಟಿ ಹಾಕಿಸಿಬಿಡು' ಎಂದ. ಆಗಲಿ ಎಂದು ಹಾಗೇ ಮಾಡಿ, ಮಾತಾಡಿ ಬೀಳ್ಕೊಂಡು ಹೊರಟಾಗ ಮಬ್ಬುಗತ್ತಲಾಯಿತು. ಬರ ಹೋಗುವ ವಾಹನಗಳನ್ನು ಗಮನಿಸುತ್ತ ರಸ್ತೆ ದಾಟ ಆ ತಿರುವಿಗೆ ಬಂದೆ. 'ಎಪ್ಪಾ ಭಿಕ್ಷಾ ಕೊಡ್ರಿ ಬುದ್ದೀ, ದಾನಾ ಮಾಡ್ರಿ ಎಪ್ಪಾ' ಎಂಬ ಧ್ವನಿ ಕೇಳಿತು. ಅದೆಲ್ಲಿಯ ದಾನಶೂರತನ ನನ್ನಲ್ಲಿ ಬಂತೋ, ಜೇಬಿನಿಂದ ಕಾಸನ್ನು ತೆಗೆದು ಆ ಚಾಚಿದ ಕೈಗೆ ಹಾಕುತ್ತಿದ್ದಂತೆಯೇ, ಆ ಭಿಕ್ಷುಕಿ 'ಎಪ್ಪಾ-ಇಷ್ಟಾ?' ಎಂದಳು. 'ಇಷ್ಟಽ ಸಾಲಂಗಿಲ್ಲಾ?' ಎನ್ನುತ್ತ ಅಸಹನೆಯಿಂದ ಹೆಜ್ಜೆ ಕಿತ್ತೆ.

ಮರುದಿನ ಮುಂಜಾನೆ ಹಾಲಿಗೆಂದು ರೂಪಾಯಿ ತೆಗೆದುಕೊಳ್ಳಲು ಜೇಬಿಗೆ ಕೈ ಹಾಕಿದರೆ ಕೈಗೆಟುಕಿದ್ದು ಬರಿ ಚಿಲ್ಲರೆ ನಾಣ್ಯಗಳು. ಗಟ್ಟಿ ರೂಪಾಯಿ ಎಲ್ಲಿ ಹೋಯಿತು? ಎಂದು ಯೋಚಿಸುತ್ತಿದ್ದಂತೆ ಆ ಭಿಕ್ಷುಕಿ 'ಎಪ್ಪಾ ಇಷ್ಟ!' ಅಂದದ್ದರ ಅರ್ಥವಾಗಿ ಒಂದು ರೀತಿಯ ಸಮಾಧಾನ-ಒಂದು ರೀತಿಯ ಕಸಿವಿಸಿಯಾಗಿ ಆ ದಿನ ಉದ್ರಿ ಹೇಳಿ ಹಾಲು ತರಬೇಕಾಯಿತು.

- ಗೋಪಾಲ ವಾಜಪೇಯಿ

ನಾನು ರೂರ್‌ಕೆಲಾದಿಂದ ಬೆಂಗಳೂರಿಗೆ ರೈಲಿನಲ್ಲಿ ಬರುತ್ತಿದ್ದಾಗ ನಡೆದ ಘಟನೆ ಇದು. ವಿಜಯವಾಡದಲ್ಲಿ ನನ್ನ ಹತ್ತಿರವಿದ್ದ ಒಂದೇ ಒಂದು ಸೂಟ್‌ಕೇಸನ್ನು ಯಾವನೋ ಕಳವು ಮಾಡಿಕೊಂಡು ಹೊರಟುಹೋದ. ಮೈಮೇಲೆ ಹಾಕಿದ್ದ ಪ್ಯಾಂಟ್ ಶರ್ಟ್ ಬಿಟ್ಟರೆ ಮತ್ತೇನೂ ಇರಲಿಲ್ಲ. ಎರಡು ದಿನಗಳಿಂದ ರೈಲಿನಲ್ಲಿ ಪ್ರಯಾಣ ಮಾಡಿ ಅದೂ ಸಹ ಬಹಳ ಕೊಳೆಯಾಗಿತ್ತು. ಮದ್ರಾಸಿನಲ್ಲಿ ರೈಲಿನಿಂದ ಇಳಿದವನೇ ನಮ್ಮ ನೆಂಟರೊಬ್ಬರ ಮನೆಗೆ ಹೋದೆ. ಬಲವಂತದಿಂದ ಅವರು ತಮ್ಮ ಬಟ್ಟೆಗಳನ್ನು ಕೊಟ್ಟು 'ಸ್ನಾನ ಮಾಡಿ, ನಿಮ್ಮ ಬಟ್ಟೆಗಳನ್ನು ಒಗೆದು ಒಣ ಹಾಕುತ್ತೇವೆ. ನೀವು ರೈಲಿಗೆ ಹೊರಡುವಷ್ಟರಲ್ಲಿ ಒಣಗಿಬಿಡುತ್ತದೆ' ಎಂದರು. 'ಬೇಡ ಸುಮ್ಮನೆ ನಿಮಗೆ ತೊಂದರೆ?' ಎಂದು ಹೇಳಿದರೂ ಸಹ ಕೇಳದೆ ಬಟ್ಟೆಗಳನ್ನು ಒಗೆದು ಹಿತ್ತಲಕಡೆ ಒಣಹಾಕಿದರು. ನಾನು ಸ್ನಾನ ಮಾಡಿ ಊಟ ಮಾಡಿದ ಮೇಲೆ ಬಟ್ಟೆ ಬದಲಾಯಿಸೋಣವೆಂದು ಹಿತ್ತಲಕಡೆ ನನ್ನ ಬಟ್ಟೆ ತರಲು ಹೋದರೆ, ಏನಿದೆ? ಒಣಹಾಕಿದ್ದ ಪ್ಯಾಂಟ್, ಶರ್ಟ್ ಸಹ ಮಂಗಮಾಯ!

ಬಿ. ಕೆ. ನಾಗರಾಜ



ಫರ್ ಎಂದು ಕಾರು ಹೋಗಿಬಿಟ್ಟಿತ್ತು. ಸ್ವಲ್ಪ ಹೊತ್ತು ಅವರು ಮೇಲೇಳುತ್ತಿದ್ದ ಧೂಳಿಯನ್ನು ನೋಡುತ್ತಿದ್ದರು. ಆ ಮೇಲೆ ಏಕ್‌ದಂ ತಮ್ಮಷ್ಟಕ್ಕೇ ಹಿಂದಿರುಗಿದರು.




ಹಿಂದಿ ಮೂಲ: **ಸೂರ್ಯಬಾಲಾ** ಕನ್ನಡಕ್ಕೆ: **ವಿ. ಟಿ.**

"ಇಲ್ಲ, ನಾನೂ ಓದುತ್ತ, ಓದುತ್ತ ಹಾಗೇ ಕಣ್ಣು ಮುಚ್ಚಿದ್ದೆ. ಖರೇ, ಬಹಳ ಸೆಕೆ ಇದೆ."

"ಶರಬತ್ ಮಾಡಿಕೊಂಡು ಬರುತ್ತೇನೆ ಕುಡಿಯುತ್ತೀರೇನು ?"

"ಶರಬತ್? ಹೂಂ, ಬೇಡ, ಬೇಡ. ಒಳ್ಳೇದು. ಹಾಗೆ ಮಾಡು, ಚಹಾ ಮಾಡಿಬಿಡು. ಅಲ್ಲಿಯ ವರೆಗೆ ರಾಜನ್ ಮತ್ತು ಸೊಸೆ ಇಬ್ಬರೂ ಏಳುವರು."

ಅವರು ಕಾಲೆಳೆಯುತ್ತಲೇ . ಅಡಿಗೆಮನೆಗೆ ಹೋದರು. ಸ್ಟೋವಿನಲ್ಲಿ ಎಣ್ಣೆ ಇರಲಿಲ್ಲ. ಬಾಟಲಿಯಿಂದ ಹಾಕತೊಡಗಿದರು. ಹೇಗೋ ಏನೋ ಬಾಟಲಿ ಜಾರಿ ಹೋಯ್ತು. ನಾಲ್ಕೂ ಕಡೆ ಕಲ್ಲೆಣ್ಣೆ ಸೂರೆಯಾಯ್ತು. ಸಪ್ಪಳ ಕೇಳಿ, "ಯಾರದು?" ಎನ್ನುತ್ತ ರೀಮಾ ಒಳಗೆ ಬಂದಳು. ಅವರು ಅಪರಾಧಿನಿಯಂತೆ, ದಯನೀಯವಾಗಿ. ಅವಸರ-ಅವಸರವಾಗಿ ಬಟ್ಟೆಯಿಂದ ಎಣ್ಣೆಯನ್ನು ಒರೆಸುತ್ತಿದ್ದರು.

"ಓಹ್, ಅತ್ತೆಯವರು, ನೀವೆ !"

ಅವರು ಕಿಸಕ್ಕನೆ ನಗುತ್ತ ಹೇಳಿದರು: "ಸ್ವಲ್ಪ ಚಹಾ ಮಾಡಿದರಾಯ್ತು ಎಂದುಕೊಂಡೆ... ನಿಮ್ಮ ಮಾವನವರು ಎಚ್ಚರಾದರು. ನನಗನಿಸಿತು ಅದು ಆಗೊ ಹೊತ್ತಿಗೆ ನೀವಿಬ್ಬರೂ ಏಳಬಹುದು ಅಂತ..."

"ಓಹ್, ಇಂಥ ಉರಿಬಿಸಿಲಲ್ಲಿ ಚಹ ಯಾರು ಕುಡಿಯುವರು? ಸ್ವಲ್ಪ ಸಂಜೆಯಾದರೂ ಆಗಲಿಯಲ್ಲ! ಅಲ್ಲದೇ ಜಮುನಾ ಬಂದುಮಾಡಿಯೇ ಮಾಡುತ್ತಾನಲ್ಲ, ನೀವು ವ್ಯರ್ಥ ಶ್ರಮ ತೆಗೆದು ಕೊಳ್ಳುತ್ತೀರಿ!"

"ನಾಲ್ಕರ ಮೇಲೆ ಆಗಿತ್ತು. ಮನಸ್ಸಿಗೂ ಉಚ್ಚಾಟನೆ ಆದಂತಾಗಿತ್ತು" ಅವರು ಸ್ವರವನ್ನು ತಗ್ಗಿಸುತ್ತ ಹೇಳಿದರು.

"ಹೂ- ಹೂ-! ನೀವು ಚಹಾ ಮಾಡಲಿಕ್ಕೆ ಹತ್ತಿದಿರಿ..." ಅವಳು ಕೇವಲ ನಗುತ್ತ ಹೇಳಿದ್ದಳು. ಅದು ಕಿಚ್ಚೆನಿಸುವಂಥ ಶಬ್ದವೇನೂ ಅಲ್ಲ, ಆದರೆ ಅವರ ಮನಸು ಅಳುವಂತಾಯ್ತು.

ಕೋಣೆಯೊಳಗೆ ಬಹುಶಃ ರಾಜನ್ ಕೇಳುತ್ತಿರಬೇಕು. ಸೊಸೆಯು ಮುಸುಮುಸು ನಗುತ್ತ ಹೇಳುತ್ತಿದ್ದಾಳೆ, "ಅತ್ತೆಯವರು! ಇಂಥ ಉರಿ ಬಿಸಿಲಿನಲ್ಲಿ ಚಹಾ ಮಾಡಬೇಕೆಂದು ಯಾಕೆ ಅನಿಸಿತೊ ಯಾರು ಬಲ್ಲರು... ಮತ್ತೆ ಮುಪ್ಪಿನಲ್ಲಿ ಕೈ ಸಾಗುವುದೇ ಇಲ್ಲ. ಕಲ್ಲೆಣ್ಣೆಯ ಬಾಟಲಿ ಜಾರಿಹೋಯ್ತು...!"

"ಅವರಿಗೆ ತಿಳಿಸಿ ಹೇಳು... ಚಹಾ ಬೇಗನೇ ಕುಡಿಯೋದಿದ್ರೆ ಜಮುನಾನಿಗೆ ಬೇಗನೇ ಬಂದು ಹೋಗಲಿಕ್ಕೆ ಹೇಳಿಬಿಡು."

"ನೋಡ್ರಿ, ನೀವು ತಿಳಿದುಕೊಂಡೀರಿ, ನಾನು ಅವರಿಗೆ ಅಡಿಗೆಮನೆಯಲ್ಲಿ ಕೆಲಸ ಮಾಡಲು ಹೇಳುತ್ತೇನೆ ಅಂತ. ಅವರು ಅಲ್ಲಿ ಹೋಗುವುದರಿಂದ ಕೆಲಸ ಮತ್ತಷ್ಟು ಜಾಸ್ತಿ ಆಗುತ್ತದೆ. ಆದರೆ ಈ ಮುದುಕರು..."

ಮುದುಕರು! ಅವರ ಕಣ್ಣುಗಳು ತುಂಬಿ ಬಂದವು. ಇಷ್ಟು ಇಲ್ಲಿಗೆ ಬರುವುದಕ್ಕೆ ಮುಂಚೆ ಎಲ್ಲ ಕೆಲಸಗಳನ್ನು ನಿಭಾಯಿಸುತ್ತಿದ್ದರು. ...ಬಾಬೂಜಿಯವರ ನಾಶ್ತಾ, ಊಟ, ಅರಿವೆ ಒಗೆಯುವುದರ ವರೆಗೆ, ಆದರೆ ನಿನ್ನಿಂದ ಕೆಲಸ ಆಗುವದಿಲ್ಲ ಎಂದು ಬಾಬೂಜಿ ಎಂದೂ ದೂರಲಿಲ್ಲ. ಊಟ-ತಿಂಡಿಗಳಲ್ಲಿ ಕೂಡ ಎಂದೂ ನೀರು ಹೆಚ್ಚಾಯ್ತು, ಉಪ್ಪು ಕಮ್ಮಿಯಾಯ್ತು ಎಂದೆನ್ನಲಿಲ್ಲ, ಈಗ ಜಮುನಾನಿಗಂದಂತೆ. ಹಜಾರದಲ್ಲಿ ಹೋಗಿ ಅವರ ಹತ್ತಿರವೇ ಕುಳಿತುಬಿಡಲೇ ಎಂದು ಯೋಚಿಸಿದರು. ಚಹಾ ಮಾಡುವ ಉತ್ಸಾಹವೆಲ್ಲ ಇಳಿದುಹೋಗಿತ್ತು. ಹಜಾರದೆಡೆಗೆ ಹೋಗುತ್ತಿದ್ದಂತೆ ರಾಜನ್ ಮತ್ತು ಅವನ ಹೆಂಡತಿ ಕಿಲಕಿಲನೆ ನಗುತ್ತಿರುವದು ಕೇಳಿಸಿತು. ಅವರು ಹಠಾತ್ತನೆ ದೇವರ ಮನೆಯ ಕಡೆಗೆ ಧಾವಿಸಿದರು. ಹೋಗುತ್ತ-ಹೋಗುತ್ತ ರಾಜನ್‌ನ ಮೆಲು ಧ್ವನಿ ಕಿವಿಗೆ ಬಡಿಯಿತು— "ಪ್ರೀತಿ-ಗೀತಿ ಏನೂ ಇಲ್ಲ, ಒಬ್ಬಳೇ ಬೇಸತ್ತಿರಬಹುದು, ಹಾಗಾಗಿ ಬಾಬೂಜಿಯವರ ಹತ್ತಿರ ಕುಳಿತುಕೊಳ್ಳುತ್ತಿರಬಹುದು."

"ಹ್ಞಾ. [illegible] ನಾನು ನೋಡಿಯೇ ಇಲ್ಲವೇನೋ ಅನ್ನೋಹಾಗೆ! ಅತ್ತೆಯವರು ಬೇಡ ಎಂದರೂ ಮಾವನವರು ತಮ್ಮ ಅರಿವೆ ತಾವೇ ಒಗೆಯುತ್ತಾರೆ. ಚಹಾದ ಖಾಲಿ ಕಪ್ಪು ಅವರು ಬೇಡಿದರೂ ಅಡಿಗೆ ಮನೆಯಲ್ಲಿ ಇಟ್ಟು ಬರುತ್ತಾರೆ. ದಿನಕ್ಕೆ ಹೆಚ್ಚು ಸಲ ಅಲ್ಲದಿದ್ದರೂ

ನಾಲ್ಕೈದು ಸಲ ಔಷಧದ ಬಗ್ಗೆ ಕೇಳುತ್ತಾರೆ–ತೆಗೆದುಕೊಂಡೆಯೋ, ಇಲ್ಲವೊ? ಮುಗಿದಿದ್ದರೆ ತೆಗೆದುಕೊಂಡು ಬರಲೇ? ಅವರದು ನಡೆಯೂ ಹಾಗಿದ್ದರೆ…"

ಮಾತು ಒಂದು ಅರ್ಥಗರ್ಭಿತ ಕಟಾಕ್ಷದೊಂದಿಗೆ ಸಮಾಪ್ತವಾಯ್ತು.

ಚಹಾದ ಖಾಲಿ ಕಪ್ಪನ್ನು ಇಟ್ಟು, ಅವರು ಮಾತಾಡದೇ, ತಲೆ ತಗ್ಗಿಸಿ ಹಜಾರದೆಡೆಗೆ ತಿರುಗಿದರು. ಜಮುನಾನ ಬಗ್ಗೆ ಅವಳನ್ನು ಕೇಳಬೇಕೆಂದು ಯೋಚಿಸಿದರು. ಆದರೆ ತಡೆದರು. ಹಿಂದಿರುಗಿ ಅದೇ ಮುದ್ರೆಯಲ್ಲಿ ಬಾಗಿ ವೃತ್ತಪತ್ರಿಕೆ ತೆಗೆದುಕೊಂಡು ಕುಳಿತರು. ಕಳೆದ ಎರಡೂವರೆ ವರ್ಷಗಳಲ್ಲಿ ಓದಿದಷ್ಟು ವೃತ್ತಪತ್ರಗಳನ್ನು ಅವರು ಜೀವನದಲ್ಲಿ ಎಂದೂ ಓದಿರಲಿಲ್ಲ. ರಿಟೈರ್ ಆದ ಒಂದೂವರೆ ವರ್ಷದ ನಂತರವೇ ಇಲ್ಲಿಗೆ ಬಂದಿದ್ದರು. ಇಬ್ಬರೂ ಒಂದೂವರೆ ವರ್ಷದ ವರೆಗೆ ಪ್ರತಿ ತಿಂಗಳೂ ನೂರು ರೂಪಾಯಿ ಕಳಿಸುತ್ತಿದ್ದರು. ಅನಂತರ ಒಮ್ಮೆಲೇ ರಾಜನ್‌ನ ಪತ್ರ ಬಂದಿತ್ತು. ಅದರಲ್ಲಿ ಅವನು ಅಷ್ಟು ದೂರದಲ್ಲಿ ಏಕಾಕಿಯಾಗಿ ಇರುತ್ತಿದ್ದ ತಾಯಿ–ತಂದೆಯನ್ನು ತನ್ನ ಬಳಿಯೇ ಬಂದು ಇರಿ ಎಂದು ಬರೆದಿದ್ದನು. ಮನೆಯನ್ನು ಬಾಡಿಗೆಯಿಂದ ಕೊಟ್ಟುಬಿಡುವ ಪ್ರಸ್ತಾಪವೂ ಇತ್ತು. ಹಾಗೆ ನೋಡಿದರೆ ಬಾಡಿಗೆಯ ಮಾತು ಗೌಣವಾಗಿತ್ತು, ಮುಖ್ಯವಾದದ್ದೇನೆಂದರೆ ತಾಯಿಗೆ ಒಬ್ಬಳೇ ಎಲ್ಲ ಕೆಲಸ ಮಾಡಬೇಕಾಗುತ್ತಿತ್ತು, ಇಲ್ಲಿ ನಮ್ಮೆಲ್ಲರಿಗೂ ಕಾಳಜಿಯಾಗುತ್ತದೆ. ಇಷ್ಟು ದೂರದಲ್ಲಿದ್ದುಕೊಂಡು ವೇಳೆ—ಅಪವೇಳೆಗೆ ಮುಟ್ಟುವುದು ಕಠಿಣವಾದದ್ದೇ, ಸರ್ಕಾರಿ ನೌಕರಿಯಲ್ಲವೇ…

ನೆರೆಹೊರೆಯವರೂ ಹೇಳಿದರು,–"ಸರಿಯಾದದ್ದನ್ನೇ ಬರೆದಿದ್ದಾನೆ. ಈಗ ಈ ವಯಸ್ಸಿನಲ್ಲಿ ಆರಾಮವಾಗಿ ಇರಬೇಕಾದದ್ದೆ. ಇಲ್ಲಿಯಂತೂ ವ್ಯಾಪಾರ–ವ್ಯವಹಾರ, ಮತ್ತು ಅಷ್ಟಿಷ್ಟು ಬೇಕಾಗುವ ರೇಶನ್ ಬಾಬೂಜಿಯವರೇ ತರುತ್ತಿದ್ದರು. ಅಲ್ಲಿಯಾದರೆ ಮಗ ದೊಡ್ಡ ಆಫೀಸರ್, ಪ್ರತಿ ಕೆಲಸಕ್ಕಾಗಿ ಚಪರಾಶಿ, ಆರ್ಡರ್ಲಿ ಕೈ ಕಟ್ಟಿಕೊಂಡು ನಿಂತಿರುತ್ತಾರೆ. ಸೊಸೆಯೂ ಒಳ್ಳೆಯವಳೇ. ಇಷ್ಟು ಸಲ ಇಲ್ಲಿಗೆ ಬಂದಳು, ಒಮ್ಮೆಯೂ ಧ್ವನಿ ಎತ್ತರಿಸಿ ಮಾತಾಡಿದ್ದನ್ನು ಕೇಳಿಲ್ಲ. ಅಧಿಕಾರ ನಡೆಸುವವಳು ರಾಜನ್‌ನ ತಾಯಿಯೆ! ಆಫೀಸರರವಂತೂ ಪುಲಾವ–ಕಚೋರಿ ಕೆಳಗೆ ಮಾತೇ ಇಲ್ಲ! ಎಲ್ಲಕ್ಕಿಂತ ದೊಡ್ಡ ಮಾತು ಎಂದರೆ ಅವನಿಗೆ ಎಷ್ಟೊಂದು ಕಾಳಜಿ. ಇಲ್ಲಾಂದ್ರೆ ಈಗಿನ ಕಾಲದ ಮಕ್ಕಳು…"

ಆದರೆ ಕೆಟ್ಟ ಬಾಯಿಯ ಮುದುಕಿ ಹೇಳಿದ್ದಳು– "ಎಲ್ಲ ಕಚೋರಿ ಪಕೋಡಾ ಒಂದು ಕಡೆ, ನಮ್ಮ ಸ್ವತಂತ್ರತಾ ಒಂದು ಕಡೆ! ಅಲ್ಲಿಯಂತೂ ಆಫೀಸರರ ಕಾಯ್ದೆಯಂತೆ ಇರಬೇಕಾಗುವದು. ಆದರೆ ಹಾಂ ಆರಾಮು ಇರತದ. ಮತ್ತೆ ಕರೆದ ಮೇಲೆ ಹೋಗದೇ ಇರೋದು.."

ಇಬ್ಬರೂ ಪರಸ್ಪರ ಮತ್ತು ಪ್ರತ್ಯೇಕವಾಗಿ ಬಹಳಷ್ಟು ಆಲೋಚಿಸಿದ್ದರು. ಮನೆ ಬಿಡುವ ಮಾತಿನಿಂದ ಇಬ್ಬರಲ್ಲಿಯೂ ಒಂದು ತರದ ಉತ್ಸಾಹ ಬಂದಿತ್ತು. ಆದರೆ ಯೋಚನೆಗಳೆಲ್ಲ ಅಭೇದ್ಯವಾದವು. ನಿಜವಾಗಿಯೂ ಸೊಸೆಯ ಸ್ವಭಾವವನ್ನು ಪರೀಕ್ಷಿಸಿ ನೋಡಿದ್ದಾಗಿದೆ. ಅಲ್ಲದೇ ಪಾರತಂತ್ರ್ಯ ಎಂಥದು? ಸಂಕೋಚ ಎಂಥದು? ತನ್ನ ಹೊಟ್ಟೆಯಲ್ಲಿ ಹುಟ್ಟಿದ ಸಂತಾನ. ಅವನಿಗೆ ಒಂದೆರಡು ಮಾತು ಹೇಳಿದರೂ ನಾಳೆಗೆ ಎತ್ತುವವರಲ್ಲ. ಊರಿಗೇ ಅರಸಾದರೂ ತಂದೆ ತಾಯಿಗೆ ಮಕ್ಕಳೇ ಅಲ್ಲವೇ!

"ರಿಜರ್ವೇಶನ್ ಸಿಕ್ಕತು" ಅಂಗಳದಲ್ಲಿ ಬಂದು ಹೇಳಿದ್ದರು, ಯಾರೊ ಎದೆಯ ಮೇಲೆ ಸುತ್ತಿಗೆಯಿಂದ ಹೊಡೆದ ಹಾಗೆ. ಸಾಮಾನುಗಳನ್ನು ಕಟ್ಟತೊಡಗಿದರು. ವಸ್ತುಗಳನ್ನು ವಿಂಗಡಿಸಿದರು. ಒರಳು. ರುಬ್ಬುಗುಂಡು, ಸಾರಣಿಗೆ-ಮೂರು, ಅಡಿಯ ಸ್ಟ್ಯಾಂಡು, ಕಪಾಟು, ಹರೆಯುವ ಮಣೆ, ಜನ್ಮಾಷ್ಟಮಿಯಂದು ಬಾರಿಸುವ ಗಂಟೆ— ಜಾಗಟೆ, ಕೃಷ್ಣ–ಜನುಮದ ತೊಟ್ಟಿಲು, ರಾಮನವಮಿಯಂದು ಪೂಜೆಗೊಳ್ಳುವ ತುಳಸಿಯ ಕಟ್ಟೆ… ಯಾವುದನ್ನೂ ಒಯ್ಯುವಂತಿಲ್ಲ. ರಾಜನ್‌ನು ಬರೆದಿದ್ದಾನೆ–"ತಾಯಿಯವರಿಗೆ ಎಲ್ಲವನ್ನೂ ಹೊತ್ತುಕೊಂಡು

ಮೀಟಿಂಗಿಗೆ ಹೋಗಬೇಕಾಗಿದೆ. ಮತ್ತೆ ನನಗೆ ವೇಳೆಯಾದರೂ ಎಲ್ಲಿದೆ ಪೂಜಾ ಪಾಠಕ್ಕಾಗಿ?"

ಒಂದು ದಿನ ಸೊಸೆ ಬಂದು ಬಹಳ ಮಧುರವಾದ ರೀತಿಯಲ್ಲಿ ತಿಳಿಸಿ ಹೇಳಿದಳು–"ಅತ್ತೆಮ್ಮಾ, ಸ್ವಲ್ಪ ಮಾವನವರಿಗೆ ಹೇಳಿರಿ, ಇಷ್ಟು ದೊಡ್ಡ ದನಿಯಲ್ಲಿ ಪಾರಾಯಣ ಮಾಡಬೇಡಿರೆಂದು. ಅಲ್ಲಿ ಮನೆಯ ವಿಷಯ ಬೇರೇನೇ ಇತ್ತು. ಇಲ್ಲಿ ಎಲ್ಲರೂ ದೊಡ್ಡ ದೊಡ್ಡ ಅಫೀಸರರೇ ಇರುತ್ತಾರೆ. ಅಲ್ಲದೇ ದೇವರು ಎಲ್ಲಾ ಕಡೆಗೆ ಇದ್ದಾನೆ, ನೋಡಿರಿ, ಕಬೀರದಾಸರು ಹೇಳಿಲ್ಲವೇ, 'ತಾರಸ್ವರದಲ್ಲೇಕೆ ಕೂಗುವೆ ಮುಲ್ಲಾ ದೇವರೇನು ಕಿವುಡನೇ.' ನೀವು ಮತ್ತು ಬಾಬೂಜಿ ಮನಸಿನೊಳಗೆ ಪೂಜಿಸಿದರಾಯ್ತು, ಇವರು ಸಿಟ್ಟಿಗೇಳುತ್ತಾರೆ."

ಅವರು ಸೊಸೆಯ ದರ್ಶನ–ಜ್ಞಾನ ಅಭೇದ್ಯ ತರ್ಕದ ಎದುರು ನಿರುತ್ತರರಾದರು. ಪೂರ್ಣ ಆಜ್ಞಾ ಪಾಲಿಸುವವರಂತೆ, ಇನ್ನು ಮುಂದೆ ಅವರಿಬ್ಬರೂ ಇದನ್ನು ಲಕ್ಷ್ಯದಲ್ಲಿಟ್ಟುಕೊಳ್ಳುವವಾಗಿ ಅವಳಿಗೆ ಆಶ್ವಾಸನೆ ಕೊಟ್ಟರು. ಒಬ್ಬರೇ ಇದ್ದಾಗ ತಮಗೆ ತಾವೇ ಸಮಾಧಾನ ಹೇಳಿಕೊಂಡರು– ಸರಿಯಾಗೇ ಹೇಳಿದ್ದಾಳೆ, ಇವರಿಗಂತೂ ನಿರ್ವಾಹವಿಲ್ಲ, ಆದರೆ ಬರು–ಹೋಗುವವರು ಖಂಡಿತ ನಗುತ್ತಿರಬೇಕು. ಹೇಳಿಲ್ಲವೇ ದೇಶಕ್ಕೆ ತಕ್ಕಂತೆ ವೇಷ. ಮನಸ್ಸು ಮತ್ತಿಷ್ಟು ಹಗುರಾಯ್ತು. ರಾಜನ್‌ನು ತಂದೆಯೊಂದಿಗೆ ಲಾನಿನಲ್ಲಿ ಕುಳಿತು ಚಹಾ ಕುಡಿಯುತ್ತ ಆಸ್ತಿಪಾಸ್ತಿಯ ಬಗ್ಗೆ ತಂದೆಯಿಂದ ಸಲಹೆ ಪಡೆಯುತ್ತಿದ್ದಾನೆ.

ಚಹಾ ಮುಗಿಸಿ ಏಳುತ್ತ ಏಳುತ್ತ ರಾಜನ್‌ನು ಸ್ವಲ್ಪ ಹಿಂಜರಿಯುತ್ತ, ಅಳೆದು ಸುರಿಯುವ ಸ್ವರದಲ್ಲಿ ಹೇಳಿದ–"ಬಾಬೂಜಿ, ಸಂಜೆಗೆ ನನ್ನ ಗೆಳೆಯರು ಬರುವವರಿದ್ದಾರೆ. ನೀವು ದಯುವಿಟ್ಟು ಒಳಗೇ ಇದ್ದು ಬಿಡಿರಿ. ಏಕೇ ಹೇಳಬೇಕೆಂದರೆ ಅವರಿಗೆ ಡ್ರಿಂಕ್ಸ್, ಅದೂ ಇದೂ ಬೇಕಾಗಿರುತ್ತದೆ, ಸಿಗರೇಟು, ಸೇದಬೇಕಾಗಿರುತ್ತದೆ. ನೀವು ಹಿರಿಯರು. ನಿಮ್ಮೆದುರು ಹಿಂಜರಿಯುತ್ತಾರೆ" ಎಂದು ಅವಸರ–ಅವಸರವಾಗಿ, ಅವರ ಮುಖದ ಮೇಲಿನ ಪ್ರತಿಕ್ರಿಯೆಯನ್ನು ಗಮನಿಸದೇ, ಜಮನಾನನ್ನು ಕೂಗಿದ–"ಕಾರು ಒರೆಸು! ಹೊರಗೆ ಹೋಗೋದಿದೆ."

"ಅಮ್ಮಾ, ನಾವು ಹೊರಗೆ ಹೊರಟಿದ್ದೇವೆ. ಜಮುನಾ ಮಗುವನ್ನು ತಿರುಗಾಡಿಸಿಕೊಂಡು ಬರಲಿ, ಹಾಲೂ ಕುಡಿಸಿ ಬಿಡಲಿ, ಹಾಂ, ನಾವು ಊಟ ಹೊರಗೇ ಮಾಡುವೆವು."

ಭರ್‍ರ್ ಎಂದು ಕಾರು ಹೋಗಿ ಬಿಟ್ಟಿತ್ತು. ಸ್ವಲ್ಪ ಹೊತ್ತು ಅವರು ಮೇಲ್ಲೇಳುತ್ತಿದ್ದ ಧೂಳಿಯನ್ನು ನೋಡುತ್ತಿದ್ದರು. ಆಮೇಲೆ ಏಕದಂ ತಮ್ಮಷ್ಟಕ್ಕೆ ಹಿಂದಿರುಗಿದರು. ಬಾಬೂಜಿ ಅದೇ ರೀತಿ ಲಾನಿನಲ್ಲಿ ತಲೆ ತಗ್ಗಿಸಿ ಕುಳಿತಿದ್ದರು.

"ಅವರು ಹೊರಗೆ ಹೋದರು" ಎನ್ನುವುದನ್ನು ಕೇಳಿದ ನಂತರವೂ ಮುಖದ ಮೇಲೆ ಯಾವ ಭಾವನೆಯೂ ಉಂಟಾಗಲಿಲ್ಲ. ಮಡಿಲಲ್ಲಿ ಬಿದ್ದ ಪುಸ್ತಕವನ್ನು ತಿರುಗಿಸುತ್ತಿದ್ದರು.

"ಯಾವ ಪುಸ್ತಕ, ಪೋಥಿ ಏನು?"

"ಅಲ್ಲ, ರಾಮತೀರ್ಥ ಗ್ರಂಥಾವಲಿ."

ಯಾವುದೋ ಶೂನ್ಯ ಕೊಳ್ಳದಲ್ಲಿ ಒಂದು ಅಸ್ಫುಟ ಧ್ವನಿ ನಿನದಿಸಿದಂತೆ, ಅವರ ತರಂಗಗಳೆಲ್ಲ ನಾಲ್ಕೂ ಕಡೆ ಸೂರೆಯಾದಂತೆ, ಆ ದಿನಗಳ ಅನುಭವದಲ್ಲಿ ಒಟ್ಟಿನಲ್ಲಿ ಏನೋ ಸೋರಿಹೋಗಿ ಹೋದಂತೆ ಕ್ಷಣಕಾಲ ಸುಮ್ಮನೆ ಇದ್ದರು. ಆಮೇಲೆ ಒಮ್ಮೆಲೇ ಸಹಜವಾಗಿ ಅಂದಂತೆ– "ಏನು ಮಾಡಲಿ,... ಹಲಸಿನದೇನಾದರೂ ಮಾಡುತ್ತೇನೆ, ನಿಮಗೆ ಬಹಳ ಪ್ರೀತಿ ಅಲ್ಲವೇ?"

"ಬೇಡ ಬೇಡ, ಈಗ ಪಚನ ಆಗೋದಿಲ್ಲ."

"ಹಾಗಾದರೆ, ಸ್ವಲ್ಪ ಖೀರು, ಪಲ್ಯ ಮಾಡಲೇ?"

"ಖೀರು? ಬೇಡ, ಮಗ–ಸೊಸೆ [illegible] ಮಾಡುವಿಯಂತೆ." ಶಬ್ದಗಳು ಕೆಲವೇ ಆದರೂ, ಅರ್ಥ ಆಳವೂ ವಿಶಾಲವೂ ಇತ್ತು. ಅವರು ಸುಮ್ಮನಾದರು. ಅಲ್ಲಿ ಮನೆಯೊಳಗಿದ್ದಾಗ ಪ್ರತಿ ನಾಲ್ಕೈದು ದಿನಕ್ಕೊಮ್ಮೆ ಕೈಯಲ್ಲೇ ಮಾಡಿದ ದಪ್ಪನ್ನ ರೊಟ್ಟಿ, ಆಲೂ, ಬದನೆಯ ಪಲ್ಯ, ಬಹಳ ಖುಷಿಯಾಗಿದ್ದರು. ಅಂದರೆ ಖೀರು. ಆಮೇಲೆ ಎರಡು ರೊಟ್ಟಿ ತೆಗೆದುಕೊಂಡು ಅದೇ ತಟ್ಟೆಯಲ್ಲಿ ತಾವು ಕೂಡುತ್ತಿದ್ದರು. ಅಷ್ಟೊತ್ತಿಗೆ ಅವರು ಕೈ ತೊಳೆಯುತ್ತಿದ್ದರು.

ಸಂಜೆ ಹೀಗೆಯೇ ಗುಸುಗುಸು [illegible]

ಕತ್ತಲೆಯಾದ ನಂತರ ಮನಸ್ಸಿನಲ್ಲಿ ಏನೋ ಕವಿಯುತ್ತಿದ್ದಂತೆ, ಮತ್ತಷ್ಟು ದಟ್ಟವಾಗು ತ್ತಿದ್ದಂತೆ ತೋರಿತು. ಒಮ್ಮೊಂದೊಮ್ಮೆಲೇ ಅವರ ಹತ್ತಿರ ಹೋಗಿ ನಿಂತುಕೊಂಡು, ತಡೆ ತಡೆದು ಬರುವ ದನಿಯಲ್ಲಿ ಹೇಳಿದರು— "ಎಷ್ಟೋ ವರ್ಷ ಆದವು. ಒಮ್ಮೆ ಊರಿಗೆ ಅದರೂ ಹೋಗಿ ಬರೋಣವೇ !"

"ಊರು" ಅವರ ಕಣ್ಣುಗಳಲ್ಲಿ ಮಿಂಚು ಹೊಳೆದು, ಮರೆಯಾಯ್ತು—"ಅಲ್ಲಿ ಮನೆಯನ್ನು ಪೂರ್ತಿ ಬಾಡಿಗೆಗೆ ಕೊಟ್ಟುಬಿಟ್ಟದ್ದೇವಲ್ಲ! ಯಾಕೆ? ಏನು ಅಂಥಾ ಸಂಗತಿ?"

"ಸಂಗತಿ, ಗಿಂಗತಿ ಏನೂ ಇಲ್ಲ, ಬಹಳ ದಿನ ಗಳಿಂದ ಮನೆ ಬಿಟ್ಟು ಬಂದಿದ್ದೇವೆ, ಅಷ್ಟೇ."

"ಆದರೆ ಸ್ವಲ್ಪ ದಿನಗಳ ಮಟ್ಟಿಗೆ ಹೋಗೋ ದರಿಂದ ಏನು ಪ್ರಯೋಜನ...?"

"ಹಾಂ," ಒಂದು ಆಳವಾದ ನಿಟ್ಟುಸಿರು ಆ ನೀರವತೆಯಲ್ಲಿ ಇಳಿದು ಹೊರಟುಹೋಯ್ತು— "ಏನು ಪ್ರಯೋಜನ...!"

ಬೆಳಗು ಮುಂಜಾನೆಯೇ ರಣಧೀರನು ಬರುವ ತಾರು ಬಂದಿತ್ತು. ಹತ್ತು ಗಂಟೆಗೆ ರಾಜನ್ ಅವನನ್ನು ಸ್ಟೇಶನ್‌ನಿಂದ ಕರೆದುಕೊಂಡು ಬಂದ. ನಮಸ್ಕರಿಸುವದಕ್ಕಾಗಿ ತಾಯಿಯ ಪಾದಗಳಿಗೆ ಕೈ ಹಚ್ಚುತ್ತ, ನಗುತ್ತ ಕೇಳಿದ, "ಆರಾಮ ಇದ್ದೀಯಾ, ಅವ್ವಾ! ನಡೆ, ಅಣ್ಣನ ಸರ್ಕಾರೀ ನೌಕರಿಯೊಳಗೆ ದರ್ಬಾರು ನಡೆಸುವ ಅವನ ಕೆಲ್ಸ ಸಾಕಷ್ಟು ಹಗುರ ಮಾಡಿರಬೇಕು ನೀನು!"

ಅವರು ಜೋರಾಗಿ ಹೊ–ಹೋ ಎಂದು ನಗುತ್ತ ಹೇಳತೊಡಗಿದರು, "ಅದನ್ನೇನು ಕೇಳು ತ್ತೀಯಾ! ದಿನವಿಡೀ ಜನರು ಮುತ್ತಿಕೊಂಡೇ ಇರುತ್ತಾರೆ. ಸಾಹೇಬರೆ-ಸಾಹೇಬರೆ ಎಂದು ನಾಲಿಗೆ ಒಣಗುತ್ತಿರಬೇಕು. ಅವರೆದುರು ಜಮುನಾ ಹಾಗು ಚಪರಾಸಿಗಳ ಜೋರು ನೋಡುವ ಹಾಗೆ ಇರುತ್ತದೆ. ಒಬ್ಬವ ಇತ್ತೀಚೆಗೆ ರಜೆಯ ಮೇಲೆ ಹೋಗಿದ್ದಾನೆ. ಅದೂ ನಾಲ್ಕಾರು ದಿನ..." ಅವರು ಉತ್ಸಾಹದಿಂದ ಹೇಳುತ್ತಿದ್ದರು.

ರಾಜನ್‌ನು ಸಿಗರೇಟಿನ ಬೂದಿಯನ್ನು ಕೊಡ- ಹುತ್ತ ತಮ್ಮನಿಗೆ ಹೇಳುತ್ತಿದ್ದ, "ಎಲ್ಲಾ, ಮೇಲಿನ ಆಡಂಬರ, ಒಳಗೆಲ್ಲಾ ಟೊಳ್ಳು. ಇರು, ಈಗೀಗ ಅಸಿಸ್ಟಂಟ್ಸ್ ಕೂಡ ಬಹಳ ಬೆರಕಿ ಇರ್ತಾರೆ. ಗಿರಾಕಿ ಮೇಲೆ ಬಲವಾದ ಕಣ್ಣು ಇಟ್ಟಿರುತ್ತಾರೆ. ಸರ್ಕಾರಿ ನೌಕರಿಯೊಳಗೆ ಸಣ್ಣ ಹುದ್ದೇದವರರೇ ಫಾಯ್ದೆ. ಹೊರಗಿನ ಆಡಂಬರ ಒಳಗಿನ ಸ್ಥಿತಿ ಯೊಳಗೆ ಎಂಥ ಅಂತರ, ನೀನೂ ಊಹಿಸಲಾರೆ. ಈಗ ನೀನೇ ನೋಡು, ಬೇಬಿಯನ್ನು ಕೆಲವು ವರ್ಷಗಳ ನಂತರ ನೈನಿತಾಲಕ್ಕೆ ಕಳಿಸಬೇಕೆಂದು ಮಾಡಿದ್ದೆ, ಆದರೆ ಆ ದಮ್ ಇಲ್ಲವೇ ಇಲ್ಲ."

ಊಟದ ನಂತರ ರಣಧೀರನು ಹೊರಟು ನಿಂತಾಗ, ರಾಜನ್‌ನು ತಡೆದು, "ಕೂಡು, ಮಾತ ನಾಡೋಣ, ನಾವು ಮಲಗಿಕೊಳ್ಳುವುದು ತಡ ವಾಗಿ." ಆಮೇಲೆ ಸ್ವಲ್ಪ ಹೊತ್ತು ತಡೆದು, ಅವರಿಬ್ಬರನ್ನೂ ನೋಡಿ, ಶೀತಲ ಸ್ವರದಲ್ಲಿ ಹೇಳಿದ– "ಬೇಕಾದರೆ ನೀವೂ ಕೂತುಕೊಳ್ಳ ಬಹುದು, ಬಾಬೂಜಿ!"

ಅವರು ಕೂಡಲೇ ಹಳುತ್ತ ಹೇಳಿದರು, "ಇಲ್ಲ, ಇಲ್ಲ, ನೀವೆಲ್ಲ ಮಾತಾಡಿರಿ, ಇವತ್ತು ಸಾಕಷ್ಟು ದಣಿವಾದಂತೆ ಅನಿಸುತ್ತದೆ." ಒಂದು ಹುಸಿ ಆಕಳಿಕೆಯೊಂದಿಗೆ ಅವರು ಎದ್ದು ಬಂದರು. ಹಿಂದಿನಿಂದ ಅವಳೂ ಎದ್ದು ಬಂದಳು. ಉಳಿದ ಮೂವರೂ ನೆಮ್ಮದಿ ತುಂಬಿದ ಮುಕ್ತಿಯನ್ನು ಅನುಭವಿಸುತ್ತಿದ್ದಾರೆ ಎಂದು ಇಬ್ಬರಿಗೂ ಒಮ್ಮೆಲೇ ಅನಿಸಿತು.

ಮೌನವಾಗಿ ವರಾಂಡವನ್ನೂ ದಾಟಿ ಬರು ತ್ತಿದ್ದಂತೆ ಅವರು ಯೋಚಿಸುತ್ತಿದ್ದರು–ನಿದ್ರೆ ಯಂತೂ ಇನ್ನು ತಾಸುಗಳ ವರೆಗೆ ಬಾರದು, ಅಲ್ಲಿಯ ವರೆಗೆ ಏನು ಮಾಡಿಯಾಳು? ಬಾಬೂಜಿಯವರನ್ನೇಕೆ ಕೋಣೆಯೊಳಗೆ ಬಾ ಎಂದು ಕರೆಯಬಾರದು ಸ್ವಲ್ಪ ಹೊತ್ತು ಕುಳಿತು? ಆಮೇಲೆ ಹೊರಟು ಹೋಗುತ್ತಾರೆ. ಅವರು ತಿರುಗಿ ಹೊರಡುತ್ತಿರುವದನ್ನು ನೋಡಿ ತಡೆ ದಳು–"ಈಗಲೇ ಮಲಗಿಕೊಳ್ಳುತ್ತಿರೇನು ?"

"ಇಲ್ಲಾ......"

"ಮತ್ತೆ, ಇಲ್ಲೇ ಕೂಡಿರಿ ಅಲ್ಲಾ."

"ಇಲ್ಲೆ, ಕೋಣೆಯೊಳಗೆ? ಬೇಡ, ಹೋಗು ತ್ತೇನೆ. ರಾತ್ರಿ ಸಾಕಷ್ಟು ಆಗಿದೆ. ಈ ಹೊತ್ತಿ ನಲ್ಲಿ ಕೋಣೆಯಲ್ಲಿ ಕುಳಿತುಕೊಳ್ಳುವುದು ಎಂದರೆ ...ಹೋಗಲೇ, ವರ್ತಮಾನಪತ್ರ ಸರಿಯಾಗಿ

ಓದಿಯೇ ಇಲ್ಲ ಇವತ್ತು."

ಎಲ್ಲವೂ ಹೇಳಿದ್ದು ಹೇಳದೇ ಇದ್ದರು ಗೊತ್ತು ಬಲ್ಲ ವಿಷಯವೇ. ಆದರೂ ಅವರು ಬಾಬೂಜಿಯವರೆದುರು ಈ ಪ್ರಸ್ತಾಪ ಮಾಡಿದ್ದರು. ತನ್ನ ತಪ್ಪಿನ ಅರಿವಾಯ್ತು ಕೂಡಲೇ ಅವಳಿಗೆ. ಮಗ-ಸೊಸೆಯರ ಎದುರಿಗೆ ದಣಿವಿನ ನೆಪ ಹೇಳಿ ಬರುವುದು, ಮತ್ತೆ ಇಲ್ಲಿ ಕುಳಿತುಕೊಂಡು ಮಾತನಾಡುವುದು...

ಒಂದು ದಿನ ಸೊಸೆಯು ರಾಜನ್‌ನಿಗೆ ಕಿಲಕಿಲನೆ ನಗುತ್ತ ಹೇಳುತ್ತಿದ್ದಳು– "ಮಾವನವರು ಅತ್ತೆಯವರನ್ನು ಬಿಲ್ಕುಲ ಮಾಡರ್ನ್ ಮಾಡುವದರಲ್ಲಿ ಕಟಿಬದ್ಧರಾದಂತೆ ಕಾಣಿಸುತ್ತದೆ. ಇವತ್ತು ಅವರಿಗೆ ಸಿಮ್ಲಾ ಒಪ್ಪಂದದ ಲಾಭ-ಹಾನಿಗಳನ್ನು ತಿಳಿಸಿ ಹೇಳುತ್ತಿದ್ದರು."

"ಅದಕ್ಕೆ ತಮ್ಮ ಆಬ್ಜೆಕ್ಷ್ಯನ್ ಏನು?" ರಾಜನ್ ಮುಗುಳ್ನಗುತ್ತ ಕೇಳಿದ.

"ಆಬ್ಜೆಕ್ಷ್ಯನ್? ಹಿ-ಹಿ-ಹಿ! ನನಗಂತೂ ನಾಟಕ ನೋಡುತ್ತಿದ್ದೇನೇನೋ ಎನಿಸುತ್ತದೆ. ನೋಡಿರಿ ಈಗ ಹಿ ಈಜ್ ಪರಫೆಕ್ಟಲಿ ಆಲ್ ರೈಟ್. ಆದರೆ ಮಾವನವರಿಗೆ ಸಮಾಧಾನವಿಲ್ಲ. ವೇಳೆ ಸಿಕ್ಕಾಗಲೆಲ್ಲ–ಅಶಕ್ತತೆ ಅನಿಸಿದರೆ ಟಾನಿಕ್ಕಿನ ಇನ್ನೊಂದು ಬಾಟಲಿ ತಂದು ಕೊಡಲೇನು ...ಗಾಬರಿ ಸಲುವಾಗಿ ಆ ಹೋಮಿಯೋಪಥಿ ಡಾಕ್ಟರರು ಏನೋ ಔಷಧ ಹೇಳಿದ್ದರಲ್ಲ? ಅತ್ತೆಯವರು ಸಂತುಷ್ಟರಾಗುತ್ತಾರೆ" ಮತ್ತೆ ಮುಬ್ಬೇರಿಸುತ್ತ ರಾಜನ್‌ನಿಗೆ ಹೇಳಿದಳು– "ನಿಜವಾಗಿ, ನೀವು ನಿಮ್ಮ ತಂದೆಯಿಂದ ಏನೂ ಕಲಿಯಲೇ ಇಲ್ಲ, ಏನೇನೂ ಇಲ್ಲ!"

"ಛಿ, ಕೆಟ್ಟವಳೇ...!" ರಾಜನ್ ಪ್ರೇಮದಿಂದ ಒಂದೇಟು ಹೊಡೆದು ಮುಗುಳ್ನಕ್ಕ.

ಒಂದೆರಡು ದಿನಗಳ ನಂತರ, ಡಾಕ್ಟರಲ್ಲಿಗೆ ಹೋಗುವ ಸಮಯಕ್ಕೆ ಸರಿಯಾಗಿ ಅವರು ಆರೋಗ್ಯವನ್ನು ವಿಚಾರಿಸಿದಾಗ ಅವಳು ಒಮ್ಮೆಲೆ ಸಿಡಿಮಿಡಿಗೊಂಡಳು. ಎವೆ ತೆರೆದು, ಸ್ತಬ್ಧರಾಗಿ ನೋಡುತ್ತಿದ್ದ ಅವರನ್ನು ಅಲ್ಲಿಯೇ ಬಿಟ್ಟು ಅವಳು ಹೊರಟು ಹೋದಳು. ಅಡ್ಡಾಗಿ ಕಣ್ಣಿನ ಮೇಲೆ ಮುಸುಕು ಎಳೆದುಕೊಂಡು ಅಳುತ್ತಲೇ ಇದ್ದಳು...ಪಾಪ, ಅವರದೇನು ತಪ್ಪು, ಅವರ ಮೇಲೆ ಏಕೆ ಸಿಡಿಮಿಡಿಗೊಂಡಳು ಅವಳು!

ಮುಂಜಾನೆ ಏಳುತ್ತಲೇ ರಣಧೀರನು ನಗುತ್ತ, ಎಲ್ಲರನ್ನೂ ನಗಿಸಲು ಪ್ರಾರಂಭಿಸಿದ. ಅದು ಅವನ ಬಾಲ್ಯದ ಚಟ. ಅವನು ರಾಜನ್‌ನಂತೆ ಗಂಭೀರನಲ್ಲ, ಯಾವಾಗಲೂ ವಿನೋದಪ್ರಿಯ. ಈಗಲೂ ಕೂಡ ಬೇಬಿಯಿಂದ ಗೊಂಬೆಯನ್ನು ಕಸಿದುಕೊಂಡು ಅವಳನ್ನು ಅಳಿಸುತ್ತಿದ್ದ. ಮತ್ತೊಮ್ಮೆ ಬಾಬೂಜಿಯವರ ಚಾಳೀಸು ಏರಿಸಿ ಓದುವ ಪ್ರಯಾಸ ಪಡುತ್ತಿದ್ದ. ಮಗದೊಮ್ಮೆ ಅವನು ಅತ್ತಿಗೆಯನ್ನು ಕದ್ದುನೋಡಲು ಹೋದಾಗ ಜರುಗಿದ ಮನೋರಂಜಕ ಪ್ರಸಂಗವನ್ನು ವರ್ಣಿಸುತ್ತಿದ್ದ. ಯಾರೂ ಸಿಗದೇ ಇದ್ದಾಗ ಜಮುನಾನಿಂದ ಅವನ ಲಗ್ನದ ಬಗ್ಗೆ ಮಾಹಿತಿ ಸಂಗ್ರಹಿಸುತ್ತಿದ್ದ.

"ಜಮುನಾ, ಕೇಳು ಇಲ್ಲಿ, ನೀನು ಅವಶ್ಯವಾಗಿ ಹನಿಮೂನಿಗೆ ಹೋಗಲೇಬೇಕು. ಖರ್ಚಿನ ಜವಾಬ್ದಾರಿ ಎಲ್ಲಾ ನನ್ನದು."

ಜಮುನಾ ಖುಷಿಯಿಂದ ನಗುತ್ತ ಟ್ರೇ ಎತ್ತಿಕೊಂಡು ಹೋಗುತ್ತಿದ್ದ. ಅವಳು ಪೂಜೆ ಮಾಡುತ್ತಿದ್ದಳು. ಆದರೂ ಡೈನಿಂಗ್ ರೂಂನಿಂದ ಬರುತ್ತಿದ್ದ ನಗೆಯ ಅಲೆಗಳು ಅವರನ್ನು ಚುಚ್ಚುತ್ತಿದ್ದವು, ವಿಶೇಷವಾಗಿ ಮಕ್ಕಳೊಂದಿಗೆ ಅವರ ಮುಕ್ತ ಹಾಸ್ಯವೂ ಸೇರಿದಾಗ. ಪೂಜೆ ಮಾಡುತ್ತಿದ್ದರೂ ಮನಸ್ಸೆಲ್ಲ ಅವರ ಕಡೆಗೇ ಇತ್ತು. ಅವರು ಹೆಚ್ಚು ಸಂತೋಷಚಿತ್ತರಾಗಿ, ಮುಕ್ತರಂತೆ ಕಾಣುತ್ತಿದ್ದರು. ಮಕ್ಕಳ ಮಾತಿನಲ್ಲಿ ತೀವ್ರ ಆಸಕ್ತಿ ವಹಿಸಿದ್ದರು. ರಾಜನ್ ಮತ್ತು ರಣಧೀರರ ಬಾಯಿಯಿಂದ ಅನೇಕ ಸಲ "ಬಾಬೂಜಿ" ಶಬ್ದ ಕೇಳಿ ಮನಸ್ಸು ಪುಲಕಿತವಾಗಿತ್ತು. ಕೈಯೊಳಗಿನ ಜಪಮಾಲೆ ಅನೇಕ ವರ್ಷಗಳ ರೂಢಿಯಿಂದ ತಂತಾನೆ ತಿರುಗುತ್ತಲಿತ್ತು. ಸ್ಕೂಲ್ ಟೀಮು ಗೆದ್ದು ಬಂದಾಗ, ಇಬ್ಬರೂ ಆಟದ ವಿಷಯ ಹೇಳುತ್ತ, ಹೇಳುತ್ತ, ತಂದೆಯನ್ನು ಸಂತೋಷಗೊಳಿಸಿದ್ದರು. ಅವರು ಪ್ರಸನ್ನರಾಗಿ ಹೇಳುತ್ತಿದ್ದರು, "ಶಭಾಶ್ ಹುಲಿಗಳೇ!" ಮತ್ತೆ ನಗೆಯ ಅಲೆಗಳು ನಿಂತು ಹೋದವು. ಎಲ್ಲವೂ ಶಾಂತವಾಯ್ತು. ರಾಜನ್ ಆಫೀಸಿಗೆ ಹೋದನು. ಸ್ವಲ್ಪ ಹೊತ್ತಿನ ನಂತರ

ಅವರು ಕೋಣೆಯಲ್ಲಿ ಬಂದಾಗ, ಮುಗುಳ್ನಕ್ಕು ಹೇಳಿದರು, "ಇವತ್ತು ಎಷ್ಟೋ ದಿನಗಳ ನಂತರ ಮಕ್ಕಳೊಂದಿಗೆ ನಗುತ್ತ ಕಲೆಯುತ್ತ ಇರುವುದನ್ನು ನೋಡಿದೆ!"

ಅವರು ಕೇಳಿಸದಿದ್ದವರಂತೆ, ಅವಳನ್ನು ಸ್ಥಿರ ದೃಷ್ಟಿಯಿಂದ ನೋಡುತ್ತ, ಒಂದೊಂದು ಶಬ್ದಕ್ಕೆ ನಿಲ್ಲಿಸುತ್ತ, ಕಿಟಕಿಯ ಆಚೆಗೆ ನೋಡುತ್ತ ಹೇಳಿದರು—"ನೋಡು, ನಾನು ಹೋಗುವವನಿದ್ದೇನೆ, ಶ್ರೀ[illegible]ಗೆ."

"ಯಾಕೆ?" ಪ್ರತ್ಯಾಕಾರರಹಿತ ಪ್ರತಿಕ್ರಿಯೆ ಹೊರ ಹೊಮ್ಮಿತು—"ಎಷ್ಟು ದಿನಗಳ ಮಟ್ಟಿಗೆ?"

"ನಾಳೆ. ಅಲ್ಲಿಯೇ ಇರಲಿಕ್ಕೆ, ಅವನೊಂಗೆದಿ..."

ಆಘಾತಕ್ರಾಂತಳಾದವಳಂತೆ ಅವಳು ಒಮ್ಮೆಲೇ ಕೇಳಿದಳು—

"ಯಾಕೆ!"

ಈ ಪ್ರಶ್ನೆ ಒಂದು ದೊಡ್ಡ ಬಂಡೆಯಂತೆ ಅವರ ಮೇಲೆ ಉರುಳಿ, ಅವರದೆಲ್ಲವನ್ನೂ ನುಚ್ಚುನೂರು ಮಾಡಿದಂತೆ ತೋರಿತು.

ಕಠೋರ ಸಂಯಮದಿಂದ ಅವರು ಆವೇಗಗಳಿಗೆ ಕಡಿವಾಣವನ್ನೆಳೆದು—"ಮತ್ತೇನಿಲ್ಲ, ಹೀಗೇ, ನಾವೆಷ್ಟು ದಿನಗಳಾದವು ಇಲ್ಲಿಯೇ ಇದ್ದು! ಕೆಲವು ದಿನ ಅಲ್ಲಿ ಇಲ್ಲಿ ತಿರುಗಾಡಿ ಬರಬೇಕು..."

"ನಾನೂ ಸಹ ಇಲ್ಲಿಯೇ ಇದ್ದು...!"

[illegible] ನಿರಂತರ ಅಸಹಾಯಕಳಾಗುತ್ತಿದ್ದಳು. ಗಂಟಲಲ್ಲಿ ಬಹಳಷ್ಟು ನುಂಗುತ್ತ, ಮೆಲ್ಲಗೆ ಹೇಳಿದರು —"ನಾನು ಹಿಂದಿರುಗಿ ಬಂದ ಮೇಲೆ ನೀನೂ ಹೋಗುವಿಯಂತೆ."

ಪುನಃ ಇಬ್ಬರೂ ಒಮ್ಮೆಲೇ ಮೌನತಾಳಿದರು. ಒಬ್ಬರನ್ನೊಬ್ಬರು ನೋಡುತ್ತ, ಅವರ ದೃಷ್ಟಿಗಳು ಸ್ತಬ್ಧವಾಗಿ ಯಾವದೋ ಒಂದು ದಿಶೆಯಲ್ಲಿ ಸ್ಥಿರವಾಗಿ ಹೋಗಿವೆ ಏನೋ ಎಂಬಂತೆ ಆ ಕಣ್ಣುಗಳ ಅಸಹಾಯಕ ಕಾತರತೆಯಲ್ಲಿ ಕೇವಲ ಒಂದೇ ಒಂದು ಪ್ರಶ್ನೆ ಅಳವಾಗುತ್ತ ಹೊರಟಿತ್ತು: ನಮ್ಮ ಅಪರಾಧ...?

ಮೊದಲು ಅವರೇ ಸಾವರಿಸಿಕೊಂಡರು—"ನಮಗೆ ಇಬ್ಬರು ಮಕ್ಕಳಿರುವಾಗ, ಒಬ್ಬನೇ ಇಬ್ಬರ ಖರ್ಚನ್ನು ಹಿಡಿಯುವುದು ಸರಿ ಕಾಣದು, ಅಲ್ಲವೇ...? ಹೌದೋ, ಅಲ್ಲವೋ? ಸರಿಯಾಗಿಯೇ ಯೋಚಿಸಿದ್ದಾರೆ ಇಬ್ಬರೂ. ಇನ್ನೂ ಮಗು ಸಣ್ಣದು, ನೀನು ಇಲ್ಲಿಯೇ ಇರು. ಏಳೆಂಟು ತಿಂಗಳ ನಂತರ ಎರಡನೇ ಸೊಸೆಯ ಹೆರಿಗೆ ಆಗುವುದು. ಆವಾಗ ನೀನು ಅಲ್ಲಿಗೆ ಹೋಗುವಿ. ಎರಡನೆಯವನ ಹತ್ತಿರ. ನಾನು ಇಲ್ಲಿ. ಹಾಗಾದರೆ ಹೋಗಲೇ...ಏ, ಸ್ವಲ್ಪ ನನ್ನ ಬಟ್ಟೆ ಬರೆ ಎಲ್ಲಾ..."

ಸ್ವಲ್ಪ ಹೊತ್ತಿನ ಮೇಲೆ ಅವರು ವೃತ್ತಪತ್ರಿಕೆ ಹಿಡಿದು ಮತ್ತೆ ಎದುರು ನಿಂತಿದ್ದರು—"ಇದನ್ನೇ ಹೇಳಲು ಬಂದಿದ್ದೆ, ನನ್ನ ಕೋಲು ತೆಗೆದಿಡಲು ಮರೆಯಬೇಡ ಮತ್ತೆ, ನಾವು ಹರಿದ್ವಾರದಿಂದ ತಂದದ್ದು—ಸ್ವಲ್ಪ ತಿರುಗಾಡಿ ಬರಲೇ! ಇಷ್ಟೇ...ಇದನ್ನೇ ಹೇಳಬೇಕಾಗಿತ್ತು..."

ಆದರೆ ಅವರಿಗೆ ಏನನ್ನೂ ಹೇಳುವದಾಗಿರಲಿಲ್ಲ. ಹೀಗೆಯೇ ಕೋಣೆಯ ನಡುಮಧ್ಯೆ ಕುರ್ಚಿಯನ್ನು ಹಿಡಿದುಕೊಂಡು ನಿಂತಿದ್ದರು... ನಡುಗುತ್ತಿರುವ ಬೆರಳುಗಳ ನಡುವೆ ಬಿಗಿಯಾಗಿ ಹಿಡಿದುಕೊಂಡಿದ್ದ ವೃತ್ತಪತ್ರ ಮತ್ತು ಕಣ್ಣಿನಲ್ಲಿ ಶರಾಘಾತಕ್ಕೊಳಗಾದ ಕ್ರೌಂಚಯುಗಲದ ಮೂಕ ವೇದನೆ ಇತ್ತು. ಅದನ್ನು ಕಂಡ ಆದಿ ಕವಿಯ ಕೋಮಲ ಹೃದಯ ಕರುಣೆಯ ಅಸಹಾಯ ತರಂಗಗಳಲ್ಲಿ ಹರಿದುಹೋಗಿತ್ತು...

'ಮಾನಿಷಾದ ಪ್ರತಿಷ್ಠಾಂ ತ್ವಮಗಮಹ ಶಾಶ್ವತಿ ಮಹಾ...' ✡



ಜೋರ್ಡಿ ಯೋದಲ್ಲಿನ ಒಂದು ಜಾತಿಯ ಪಕ್ಷಿ ಎಷ್ಟು ಸುಂದರವಾಗಿದೆಯೆಂದರೆ ರೋಗಿಗಳು ಅದನ್ನು ನೋಡಿದರೆ ಸಾಕು, ರೋಗ ವಾಸಿಯಾಗುತ್ತದೆ ಎಂಬ ನಂಬುಗೆ ಅಲ್ಲಿನವರಿಗೆ ಉಂಟು. ಅದ್ದರಿಂದಲೆ ಆ ಪಕ್ಷಿಯನ್ನು ಅವರು ಧನ್ವಂತರಿ ಪಕ್ಷಿ (Medicine Bird) ಎಂದು ಕರೆಯುತ್ತಾರೆ.

# ಒಗಟಾಗಿ ಉಳಿದಿರುವ ಒಗಾಡನ್

**ಇತ್ತೀಚೆಗೆ ಹಲವು ದಿನಗಳಿಂದ ನಡೆದಿದ್ದ ರಕ್ತದೋಕುಳಿ ನಿಂತಿದೆಯಾದರೂ, ಈ ಪ್ರಾಂತ್ಯಕ್ಕಾಗಿ ಹೋರಾಡಿದ ಕೆನ್ಯಾ, ಸೋಮಾಲಿಯಾ, ಜಿಬೂತಿ ಮತ್ತು ಇಥಿಯೋಪಿಯಾಗಳಲ್ಲಿ ಮಾತ್ರ ಇನ್ನೂ ದ್ವೇಷದ ಹೊಗೆ ಹಾಯುತ್ತಿದೆ. ಇಡೀ ಆಫ್ರಿಕವನ್ನು ನಡುಗಿಸಿದ ಈ ಒಗಾಡನ್ ತಗಾದೆ ಜಗತ್ತಿನ ಲಕ್ಷ್ಯವನ್ನೇ ತನ್ನತ್ತ ಸೆಳೆದಿದೆ. ಸೋಮಾಲಿಯಾ ಮತ್ತು ಇಥಿಯೋಪಿಯಾಗಳ ಮಧ್ಯೆ ಅಳಿಸಲಾರದ ದ್ವೇಷಕ್ಕೆ ಕಾರಣವಾದ ಒಗಾಡನ್ ಒಗಟಾಗಿಯೇ ಉಳಿದಿರುವುದನ್ನು ಲೇಖಕರಿಲ್ಲಿ ವಿಶದವಾಗಿ ವಿವರಿಸಿದ್ದಾರೆ.**

ಇತ್ತೀಚಿನ ವರ್ಷಗಳಲ್ಲಿ ಹೆಚ್ಚಿನ ಪ್ರಚಾರ ಗಳಿಸಿದ ಆಫ್ರಿಕದ ಕೊಂಬು(ಹಾರ್ನ್ ಆಫ್ ಆಫ್ರಿಕ)ವಲ್ಲಿ ತುರುಕಿಕೊಂಡಿರುವ ದೇಶಗಳು, ೧೯೭೭ರಲ್ಲಿ ತಾನೇ ಸ್ವಾತಂತ್ರ್ಯಗೊಂಡ ಜಿಬೂತಿಯೂ ಸೇರಿ, ಮೂರು; ಉಳಿದೆರಡು ಸೋಮಾಲಿಯಾ ಮತ್ತು ಇಥಿಯೋಪಿಯಾ. ನೇರವಾಗಿಯಲ್ಲದಿದ್ದರೂ, ಪರೋಕ್ಷವಾಗಿ ಈ ಗುಂಪಿಗೆ ಸೇರಿಕೊಳ್ಳಲೇಬೇಕಾದ ಇನ್ನೊಂದು ದೇಶ ಕೆನ್ಯಾ.

ಈ ಕೊಂಬಿನಲ್ಲಿ ಇದುವರೆಗೂ ನಡೆದು, ಈಗ ತಾನೇ ನಿಂತಿರುವ ರಕ್ತದೋಕುಳಿಯಾಟದ ಚಿತ್ರಣಕ್ಕೆ ನೇರವಾಗಿ ಬರುವ ಮೊದಲು ಆಯಾ ದೇಶಗಳ ರಾಜಕೀಯ ಪರಿಸ್ಥಿತಿಗಳನ್ನು ಸಂಕ್ಷಿಪ್ತವಾಗಿ ಹೇಳುವುದು ಅತ್ಯಂತ ಮುಖ್ಯ.

## ೧. ಸೋಮಾಲಿಯಾ

ಸೋಮಾಲಿಯಾ ಮುಸಲ್ಮಾನರಿರುವ ದೇಶವಾದರೂ, ಇಸ್ಲಾಂ ಕಾನೂನುಗಳ ಆಡಳಿತದ ಬದಲು ಮಿಲಿಟರಿ ಆಡಳಿತದಲ್ಲಿದೆ. ಮುಹಮ್ಮದ ಸೈಯದ್ ಬರ್ರೆ ಇಲ್ಲಿಯ ವೃದ್ಧ ಅಧ್ಯಕ್ಷ ಮತ್ತು ಮಿಲಿಟರಿ ಜನರಲ್. ಸೋಮಾಲಿಯಾ ಹೆಚ್ಚಿನ ಪಾಲು ಬದುಕಿರುವುದು ಸೌದಿ ಅರೇಬಿಯಾ, ಇರಾನ್, ಕುವೇತ್, ಇರಾಕ್, ಯು. ಎ. ಆರ್. ಮುಂತಾದ ಇಸ್ಲಾಂ ಹಾಗೂ ಅಮೇರಿಕವೂ ಸೇರಿದಂತೆ ಕೆಲವು ಪಶ್ಚಿಮ ರಾಷ್ಟ್ರಗಳ ಹೇರಳವಾದ ಧನಸಹಾಯ ಹಾಗೂ ಸಹಾನುಭೂತಿಗಳಿಂದ. ಬಾಳೆ ಮತ್ತು ದನಕರುಗಳ ಯಕಃಶ್ಚಿತ ರಫ್ತನ್ನುಳಿದರೆ, ಪರರಾಷ್ಟ್ರಗಳ ಮತ್ತು ಅಂತಾರಾಷ್ಟ್ರೀಯ ಸಂಘ–ಸಂಸ್ಥೆಗಳ ದಾನದತ್ತಿಗಳ ಮೇಲೆ ಆ ದೇಶ ಎಷ್ಟೊಂದು ಅವಲಂಬಿಸಿದೆಯೆಂದರೆ, ಸೋಮಾಲಿಯಾಕ್ಕೆ 'ದಾನಿಗಳ ಗೋರಿ' (ಡೋನರ್ಸ್ ಗ್ರೇವ್) ಎಂಬ ಅನ್ವರ್ಥನಾಮವೇ ಬಂದುಬಿಟ್ಟಿದೆ. ಇದುವರೆಗೂ ರಶಿಯನ್ನರ ಗೊಂಬೆಯಾಗಿದ್ದ ಬರ್ರೆಯವರು, ೧೯೭೭ರ ನವೆಂಬರಿನಲ್ಲಿ, ದೇಶದ ಮೂಲೆ ಮೂಲೆಯಲ್ಲೂ, ಆಡಳಿತದ ಎಲ್ಲ ಹಂತಗಳಲ್ಲೂ ನಾಯಿಕೊಡೆಗಳಾಗಿದ್ದ ರಶಿಯನ್ನರನ್ನೆಲ್ಲಾ ಆಜೀವ ಶತ್ರುಗಳಂತೆ ಒಮ್ಮೆಲೇ ಅಟ್ಟಿಬಿಟ್ಟು, ಈಗ ಪಶ್ಚಿಮದಿಂದ ಸೂರ್ಯೋದಯವನ್ನು ನಿರೀಕ್ಷಿಸುತ್ತಾ, ಅತ್ತಲೇ ದಿಟ್ಟಿಸುತ್ತಾ, ಅಲ್ಲಾಡುವ ಸಿಂಹಾಸನದಲ್ಲಿ ಭವಿಷ್ಯವನ್ನು ಹೇಗೆ

ಮತ್ತು ಯಾವ ಕುಂಚದಿಂದ ತಿದ್ದಬೇಕೆಂಬ ಚಿಂತೆಯಲ್ಲಿ ಮಗ್ನರಾಗಿದ್ದಾರೆ.

ಈ ಮಧ್ಯೆ, ಸೋಮಾಲಿಗಳು ಹೇಳಿಕೊಳ್ಳುವಂತೆ ಸೋಮಾಲಿಯಾ ಹೇಗಾಗಬೇಕಿತ್ತು, ಆದರೆ ಹೇಗಾಗಿದೆ ಎಂಬುದನ್ನೂ ನೋಡಬೇಕು. ಇವರ ನೀಲಿ ಬಣ್ಣದ ರಾಷ್ಟ್ರಧ್ವಜದಲ್ಲಿ ಐದು ಕೋನಗಳುಳ್ಳ ಒಂದು ನಕ್ಷತ್ರವಿದೆ. ಅದರ ಒಂದೊಂದು ಕೋನವೂ, ಇವರ ಪ್ರಕಾರ ಸೋಮಾಲಿಯಾದ ಒಂದೊಂದು ಭಾಗವನ್ನು ಸೂಚಿಸುವುದಲ್ಲದೆ, ಐದೂ ಒಂದಾಗಬೇಕೆಂಬುದೇ ಸಂಕೇತ. ಸ್ವಾತಂತ್ರ್ಯಕ್ಕೆ ಮುನ್ನ ಸೋಮಾಲಿ ದೇಶವನ್ನು ಯೂರೋಪಿನ ಮೂರು ದೇಶಗಳವರು ಆಳುತ್ತಿದ್ದರು. ಇಟಾಲಿಯನ್ನರ ಸೋಮಾಲಿಯಾ—ಇಂದಿನ ದಕ್ಷಿಣ ಪ್ರಾಂತ್ಯ (ಮೊಗದಿಷು ರಾಜಧಾನಿಯಾಗಿತ್ತು; ಈಗಲೂ ಮೊಗ-ಧಿಷು ಸೋಮಾಲಿಯಾ ಗಣರಾಜ್ಯದ ರಾಜಧಾನಿ.) ಆಂಗ್ಲರ ಸೋಮಾಲಿ ನಾಡು—ಈಗಿನ ಉತ್ತರ ಪ್ರಾಂತ್ಯ (ಹಾರ್ಗೀಸಾ ರಾಜಧಾನಿಯಾಗಿತ್ತು; ಹಾರ್ಗಿಸಾ ಈಗ ಸೋಮಾಲಿಯಾದ ಎರಡನೇ ಮುಖ್ಯ ಪಟ್ಟಣ) ಮತ್ತು ಫ್ರೆಂಚರ ಸೋಮಾಲಿಯಾ—ಈಗಿನ ಜಿಬೂತಿ ಮತ್ತು ಆಗಿನ ಅಫಾರ—ಇಸ್ಸಾಗಳ ಫ್ರೆಂಚರ ಪ್ರಾಂತ್ಯ. ಇವು ಮೂರು ಭಾಗಗಳು. ಉಳಿದೆರಡರ ಬಗ್ಗೆ ಹೀಗಿದೆ: ಐರೋಪ್ಯರ ಆಳ್ವಿಕೆಯ ಕಾಲದಲ್ಲಿ ಪಶ್ಚಿಮ ಪ್ರಾಂತ್ಯದಿಂದ ಹಿಂದೆ, ಅಂದಿನ ಇಥಿಯೋಪಿಯಾ ಹಾಗೂ ಕೆನ್ಯಾದ ಆಳ್ವಿಕೆಗಳನ್ನು ತೃಪ್ತಿಪಡಿಸುವುದಕ್ಕಾಗಿ, ಐರೋಪ್ಯರಿಂದಲೇ ಕೊಡಲ್ಪಟ್ಟುವೆಂಬ ಭಾಗಗಳು—ಇಥಿಯೋಪಿಯದ ಪೂರ್ವ ಭಾಗ (ಒಗಾದನ್ ಪ್ರಾಂತ್ಯ) ಮತ್ತು ಕೆನ್ಯಾದ ಪೂರ್ವೋತ್ತರ ಭಾಗ ನಾರ್ದರ್ನ್ ಫ್ರಾಂಟಿಯರ್ ಡಿಸ್ಟ್ರಿಕ್ಟ್ (ಎನ್. ಎಫ್. ಡಿ.).

ಸೋಮಾಲಿಯಾ ಕೂಡಾ ಅಂತಃಕಲಹಕ್ಕೆ ಹೊರತಾಗಿಲ್ಲ. ಪಕ್ಕದ ರಾಷ್ಟ್ರಗಳಂತೆ ಎದ್ದು ತೋರದಿದ್ದರೂ ಸಹ ಮುಖ್ಯವಾಗಿ ಇಲ್ಲಿ ಉತ್ತರ—ದಕ್ಷಿಣಗಳ ವೈಮನಸ್ಸು. ಜೊತೆಗೆ, ಇವರು ಮುಸಲ್ಮಾನರಾಗಿ ಬದಲಾಗುವ (ಅರಬ್ಬೀ ದೇಶಗಳ ಪ್ರಭಾವದಿಂದಾಗಿ) ಮುನ್ನ, ಗುಡ್ಡಗಾಡುಗಳಲ್ಲಿ ಪಂಗಡ—ಗುಂಪುಗಳ ವೃತ್ತದೊಳಗಿದ್ದ ಅನಾಗರಿಕ ಮಂದಿ. ಆದ್ದರಿಂದ, ಇತ್ತೀಚೆಗೆ ಇವರು ತಬ್ಬಿರುವ ಮತದ ಸಹೋದರನೀತಿ ಮೇಲುನೋಟಕ್ಕೆ ಎಷ್ಟೇ ಸುಂದರವಾಗಿ ಕಂಡರೂ, ಸೋಮಾಲಿಗಳು ತಮ್ಮ ಮೂಲ ಪಂಗಡಗಳನ್ನು ಚೆನ್ನಾಗಿ ಕಾಪಾಡಿಕೊಂಡು ಬಂದಿದ್ದಾರೆ. ಈ ಪಂಗಡಗಳಲ್ಲಿ ಮುಖ್ಯವಾದುವು ನಾಲ್ಕು. ಈ ಕಾರಣದಿಂದ, ಪಂಗಡಾಂತರ ಭಿನ್ನಭೇದಗಳೂ ವೈಷಮ್ಯಗಳೂ ಅಷ್ಟೇ ಚೆನ್ನಾಗಿ ಕಾಪಾಡಲ್ಪಟ್ಟಿವೆ. ಇದಕ್ಕೆ ಅಧ್ಯಕ್ಷರು ಕೂಡ ಹೊರತಲ್ಲ. ಅಧ್ಯಕ್ಷರ ಪಂಗಡ ಅತ್ಯಂತ ಚಿಕ್ಕದಾದರೂ, ಅಧಿಕಾರಕ್ಕೆ ಬಂದ ಕೂಡಲೇ, ನಾಲ್ಕೂ ಪಂಗಡಗಳಲ್ಲಿ ಅತ್ಯಂತ ಕೆಳ ದರ್ಜೆಯಲ್ಲಿದ್ದ— ವಿದ್ಯೆಯಲ್ಲಿ ಆರ್ಥಿಕವಾಗಿ ಮತ್ತು ಸಂಖ್ಯೆಯಲ್ಲಿ ಕೂಡಾ—ತಮ್ಮ ಪಂಗಡದ ಅಸಂಖ್ಯ ಹೆಬ್ಬಟ್ಟುಗಳನ್ನೇ ಉನ್ನತೋನ್ನತ ಮಟ್ಟಗಳಲ್ಲಿ ಇಟ್ಟುಕೊಂಡಿದ್ದಾರೆ. ಸೈನ್ಯದಲ್ಲೂ ಸಹ. ಮೇಲಾಗಿ ಮಿಲಿಟರಿ ಸರಕಾರವಾದ್ದರಿಂದ ಅನೇಕ ಕಡೆ ಹೆಬ್ಬಟ್ಟುಗಳ ನಿರ್ಣಯವೇ ಅಂತಿಮ.

ಅಧ್ಯಕ್ಷ ಬರ್‍ರೆಯವರು, ತಾವು ಕಪ್ಪು ಆಫ್ರಿಕದ ಉತ್ತಮ ನಾಯಕರುಗಳಲ್ಲೊಬ್ಬರೆಂಬುದನ್ನು ಸಾದರ ಪಡಿಸಿದ್ದಾರಾದರೂ, ಇವರ ಆಳ್ವಿಕೆಯಿಂದ ಸೋಮಾಲಿಯಾ ದೇಶಕ್ಕೆ ಸಾಕಷ್ಟು ವಿಶ್ವಪ್ರಚಾರ ದೊರೆತಿದೆಯಾದರೂ, ಎಲ್ಲಕ್ಕಿಂತಲೂ ಮಿಗಿಲಾಗಿ ಇವರ ಕಾಲದಲ್ಲಿ ಮುಂದುವರೆದ ಹಾಗೂ ನಾಗರಿಕತೆಯ ಲಕ್ಷಣಗಳು ಕನಿಷ್ಠ ದೇಶದ ದೊಡ್ಡ ದೊಡ್ಡ ಪಟ್ಟಣಗಳಲ್ಲಾದರೂ ಸ್ವಲ್ಪ ಸ್ವಲ್ಪವಾದರೂ ಎದ್ದು ತೋರುತ್ತಿವೆಯಾದರೂ, ಅನೇಕ ಸೋಮಾಲಿಗಳ ಹೃದಯಗಳೊಳಗೆ ಈ ಆಳ್ವಿಕೆಯ ಮೇಲೆ ಭರವಸೆ ತೊರೆದು ಹೋಗಿರುವುದೂ, ರೋಷ—ದ್ವೇಷಗಳು ಹೊಗೆಯಾಡುತ್ತಿರುವುದೂ ನಿಸ್ಸಂದೇಹ. ಆದರೆ ವಿಧಿಯಿಲ್ಲ! ಬಾಯಿ ತೆರೆದರೆ, ಅದು ಶಾಶ್ವತವಾಗಿ ಮುಚ್ಚಲ್ಪಡುತ್ತದೆ. ಉದಾಹರಣೆಗೆ; ೧೯೭೮ರ ಏಪ್ರಿಲ್ ತಿಂಗಳ ಪ್ರಾರಂಭದಲ್ಲಿ ಅಧ್ಯಕ್ಷರನ್ನೂ, ಅವರ ಸರಕಾರವನ್ನೂ ಅಂತ್ಯಗೊಳಿಸಲೋಸುಗ ಸೈನ್ಯದ ವಿರೋಧಿ ಗುಂಪೊಂದು ದಂಗೆಯೆದ್ದಾಗ, ಒಂದೇ ದಿನ ಸರ್ಕಾರೀ ಬಂದೂಕ್ಕ

ಧಾರಿಗಳಿಂದ ನೂರಾರು ಕೊಲೆಗಳಾಗಿ(ಹದಿನೆಂಟು ಮಂದಿ ಉನ್ನತ ಸೈನಿಕ ಅಧಿಕಾರಿಗಳೂ ಸೇರಿದಂತೆ), ದಂಗೆಯು ನೂರಕ್ಕೆ ನೂರು ಪಾಲು ಎದ್ದು ತೋರುವಂತೆ ಆರಿಹೋಗಬೇಕಾಯಿತು. ದಂಗೆಯ ನಂತರ, ಅದರಲ್ಲಿ ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ಪಾಲ್ಗೊಂಡಿದ್ದರು ಎಂಬ ನೆಪದಲ್ಲಿ ಅನೇಕರನ್ನು(ಇವರಲ್ಲಿ ಅಧ್ಯಕ್ಷರ ಪಂಗಡದವರನ್ನುಳಿದು ದೊಡ್ಡ ದೊಡ್ಡ ಪಂಗಡದವರು ಮಾತ್ರವೇ ಇದ್ದರು) ಸೆರೆ ಹಿಡಿದು ಸೈನಿಕ ನ್ಯಾಯಾಲಯಕ್ಕೆ ಒಪ್ಪಿಸಲಾಯಿತು. ಸುಮಾರು ತಿಂಗಳಿಗೂ ಮಿಕ್ಕಿ, ಕೈದಿಗಳನ್ನು ಗುಂಪು ಗುಂಪುಗಳಾಗಿ ವಿಂಗಡಿಸಿ(ಅಪರಾಧ ಕೃತ್ಯಗಳ ಮೊತ್ತವೇ ವಿಂಗಡಣೆಯ ಮಾನದಂಡ) ಮೊಗ- ದಿಷು ಪಟ್ಟಣದ ಹೃದಯದಲ್ಲಿರುವ ಹಳೆಯ ಪಾರ್ಲಿಮೆಂಟ್ ಭವನದಲ್ಲಿ ಸಂಪೂರ್ಣ ಮಿಲಿಟರಿ ಬಂದೋಬಸ್ತಿನಲ್ಲಿ ವಿಚಾರಣೆ(!) ಮಾಡಲಾಯಿತು. ಆದರೆ, ತೀರ್ಪು ನೀಡುವುದು ಅಷ್ಟು ಸುಲಭವಾದ ಕಾರ್ಯವಾಗಿರಲಿಲ್ಲ. ಏಕೆಂದರೆ, ಸೆರೆಯಾಳುಗಳೆಲ್ಲರೂ ಸೋಮಾಲಿಯಾದ ಅತ್ಯಂತ ದೊಡ್ಡ ದೊಡ್ಡ ಪಂಗಡಗಳವರೇ ಇದ್ದುದರಿಂದ ಅಧ್ಯಕ್ಷರಿಗೂ ಅವರ ಪಂಗಡದ ಮಿಲಿಟರಿ ಕೋರ್ಟಿಗೂ ಭಯಂಕರ ಪೀಕಲಾಟಕ್ಕಿಟ್ಟುಕೊಂಡಿತು. ಅಲ್ಲದೆ, ಅದೇ ಸಂದರ್ಭದಲ್ಲಿ ಅಧ್ಯಕ್ಷರ ಸಣ್ಣ ಪಂಗಡದಿಂದ ಸರ್ಕಾರದಿಂದ ಸೆರೆಹಿಡಿದಿದ್ದ ಎರಡರಷ್ಟು ಮಂದಿಯನ್ನು ಆ ದೊಡ್ಡ ದೊಡ್ಡ ಪಂಗಡಗಳವರು ಗುಪ್ತವಾಗಿ ಸೆರೆಯಾಳುಗಳಾಗಿಸಿಕೊಂಡು, ವಿಚಾರಣೆಯಲ್ಲಿರುವ ತಮ್ಮ ಪಂಗಡಗಳವರನ್ನು ಕೊಂದರೆ, ಅಷ್ಟು ಜನರನ್ನೂ ನಿರ್ನಾಮ ಮಾಡುವುದಾಗಿ ಬೆದರಿಕೆಯನ್ನೂ ಹಾಕಿದ್ದರಂತೆ. ಆದ್ದರಿಂದ, ತೀರ್ಪಿನ ಸಮಯಕ್ಕೆ ಸರಿಯಾಗಿ ಅಧ್ಯಕ್ಷ ಬರ್ರೆಯವರು ಧಿಡೀರ್ ಯುರೋಪ್ ಪ್ರಯಾಣ ಕೈಕೊಂಡಿದ್ದರು. ಆಗ ತೀರ್ಪನ್ನೂ ಕೊಡಲಾಯಿತು. ಹದಿನೇಳು ಮಂದಿಗೆ ಮರಣ ದಂಡನೆಯನ್ನೂ, ಅನೇಕರಿಗೆ ಆಜೀವ ಸೆರೆವಾಸ ಶಿಕ್ಷೆಯನ್ನೂ ವಿಧಿಸಲಾಯಿತು. ಅಧ್ಯಕ್ಷರು ಮರಳಿಯೂ ಬಂದರು. ಅವರು ಬಹುಶಃ ಆಗಬಹುದೆಂದು ನಿರೀಕ್ಷಿಸಿದ್ದ ಕ್ರಾಂತಿಯೇನೂ ಆಗಲಿಲ್ಲ. ಆದರೂ ಶಿಕ್ಷೆಯನ್ನು ಜಾರಿಗೆ ತರುವ ಚೈತನ್ಯ ಮಾತ್ರ ಅವರಿಗಿರಲಿಲ್ಲ.

ಅಧ್ಯಕ್ಷರಿಗೆ ಮನ್ನಿಸಬಹುದಾದ ಅಧಿಕಾರ (ಕ್ಷಮೆಮನ್ನಿ) ಇದ್ದುದರಿಂದ, ಶಿಕ್ಷೇತರ ಪಂಗಡದಿಂದ ಮುಖ್ಯರು ಬಂದು ಕ್ಷಮಾಯಾಚನೆ ಮಾಡಿಕೊಳ್ಳಲೆಂದು ಅಧ್ಯಕ್ಷರೂ, ಯಾಚನೆಗೆ ತಾವು ಹೋಗುವವರಲ್ಲವೆಂದೂ, ಮನ್ನಿಸುವುದೂ ಅಥವಾ ಶಿಕ್ಷಿಸುವುದೂ (ಅವುಗಳ ಫಲಾಫಲಗಳ ಸಹಿತ) ಅಧ್ಯಕ್ಷರಿಗೆ ಬಿಟ್ಟುದುದೆಂದೂ ಪಂಗಡಗಳ ಮುಖ್ಯರೂ ಮೂವತ್ತಾರರಂತೆ ಮುಖ ಮಾಡಿ ಬಹಳ ದಿನ ಜಪ ಮಾಡಿದರು.

ಅಂತೂ ಸರಕಾರಕ್ಕೆ ಕಾಯ್ದು ಕಾಯ್ದು ಬೇಸರವಾಗಿದ್ದಿರಬೇಕು. ಮೇಲಾಗಿ, ತೀರ್ಪಿನ ಸುದ್ದಿ ಹಳಸುವಷ್ಟು ಹಳೆಯದಾಗಿ ಜನತೆಯು ಮರೆತಂತಿರುವುದರ ಪ್ರಯೋಜನವೂ ಸರಕಾರಕ್ಕಿದ್ದುದರಿಂದಲೂ, ಮತ್ತು, ಸೋಮಾಲಿಗಳು ಕ್ರಾಂತಿವೀರರೇನೂ ಅಲ್ಲವೆಂಬ ಅಂಶವನ್ನು ಚೆನ್ನಾಗಿ ಮನದಟ್ಟು ಮಾಡಿಕೊಂಡಿದ್ದ ಅಧ್ಯಕ್ಷರು ತೀರ್ಪನ್ನು ಕಾರ್ಯರೂಪಕ್ಕೆ ತಂದೇ ಬಿಟ್ಟರು. ೧೯೭೮ರ ಅಕ್ಟೋಬರ್ ೨೫ ರ ರಾತ್ರಿ. ಇದರ ಬಗ್ಗೆ ಯಾರಿಗೂ ಸುಳಿವಿರಲಿಲ್ಲ. ೨೬ರ ಮುಂಜಾನೆ, ಸರಕಾರದ ಮೊಗದಿಷು ಆಕಾಶವಾಣಿ ಕ್ರಾಂತಿ ಗೀತೆಯನ್ನು ಹಾಡಿದಾಗಲೇ ಜನತೆಗೆ ಅರಿವಾದದ್ದು. ಅಂತೂ ಹದಿನೇಳು ಗುಂಡುಗಳು ಮೊಗದಿಷು ವಿಮಾನ ನಿಲ್ದಾಣದ ಸಮೀಪದಲ್ಲಿಯೇ ಹಾರಿ, ಹದಿನೇಳು ಆತ್ಮಗಳನ್ನೂ ಹಾರಿಸಿಕೊಂಡು ಹೋದವು.

ಸೋಮಾಲಿಯಾದಲ್ಲಿ ಎದ್ದು ತೋರುವ ಒಂದು ಗಣನೀಯವಾದ ಅಂಶವೆಂದರೆ, ಹೆಣ್ಣಿನ ಮೇಲಿನ ಅತ್ಯಾಚಾರ ಶೇಕಡಾ ೯೯.೯ ಭಾಗ ಇಲ್ಲದಿರುವುದು. ಇದಕ್ಕೆ ಕಾರಣವೂ ಇಲ್ಲದಿಲ್ಲ. ಇಲ್ಲಿ, ಕಾಮದ ಮೇಲೆ ಯಾವುದೇ ಕಟ್ಟುಕಟ್ಟಳೆಗಳನ್ನೂ ಹೇರಿಲ್ಲ. ಆದ್ದರಿಂದ ನಡುರಾತ್ರಿಯಲ್ಲಿಯೂ ನೀವು ಹೆಣ್ಣು ಒಬ್ಬಂಟಿಯಾಗಿ ತಿರುಗುವುದನ್ನು ಇಲ್ಲಿ ಸಾಮಾನ್ಯವಾಗಿ ನೋಡಬಹುದು. ಮೇಲಾಗಿ, ಇಡೀ ಆಫ್ರಿಕ ಖಂಡದಲ್ಲೇ ಎಲ್ಲೆಡೆಯಲ್ಲೂ ಘೋರ ಅತ್ಯಾಚಾರ ಕೃತ್ಯ(ಎಲ್ಲ ತರಹದ)ಗಳು ವಿಪುಲವಾಗಿ ಜರು

ಗುತ್ತಿರುವಾಗ–ಸೋಮಾಲಿಯಾ ಒಂದು ಅತ್ಯಂತ ಕ್ಷೇಮವಾದ ದೇಶವೆಂದಿದ್ದ ಹೆಸರಿನ ಮೇಲೆ, ಇತ್ತೀಚೆಗೆ ಅಲ್ಲೊಮ್ಮೆ ಇಲ್ಲೊಮ್ಮೆ ಕಾಣಿಸಿಕೊಳ್ಳುತ್ತಿರುವ ಇತರೆ ಅತ್ಯಾಚಾರಗಳಿಂದಾಗಿ (ಮುಖ್ಯವಾಗಿ ರಾಜಕೀಯ) ಮತ್ತು ಹಸಿವಿನಿಂದ ಬಳಲುತ್ತಿರುವ ಜನತೆಯಿಂದ ವಿಪುಲವಾಗಿ ನಡೆಯುತ್ತಿರುವ ಕಳ್ಳತನಗಳಿಂದಾಗಿ ಮಸಿ ಬಳಿಸಿಕೊಳ್ಳುತ್ತಿದೆ. ಮೊದಲನೆಯದು ಮಹಮ್ಮದ್ ಸೈಯದ್ ಬರ್‍ರೆಯವರ ಸಾಧನೆ ಖಂಡಿತಾ ಅಲ್ಲದಿದ್ದರೂ (ಇಸ್ಲಾಂ ಮತ ಹೆಣ್ಣಿನ ಮೇಲೆ ಹೇರುವ ಬಂಧನಗಳನ್ನೆಲ್ಲಾ ಹೆಚ್ಚಾಗಿ ಇವರು ಅಳಿಸಿ ಹಾಕಿದ್ದಾರಾದರೂ) ಎರಡನೆಯದು ಖಂಡಿತ ಅವರ ಸರಕಾರದ ಸಾಧನೆಯೆಂಬುದರಲ್ಲಿ ಸಂಶಯವಿಲ್ಲ. ಇದಕ್ಕೆ ಮುಖ್ಯ ಕಾರಣ, ನಿಯಮವಿಲ್ಲದೆ ದಿನೇ ದಿನೇ ಗಗನಕ್ಕೇರುತ್ತಿರುವ ಬೆಲೆಗಳು ಮತ್ತು ವಿಪರೀತವಾಗಿ ಹೆಚ್ಚುತ್ತಿರುವ ಕಾಳಸಂತೆಕೋರರು ಮತ್ತು ಸರಕಾರವೇ ನಿರ್ಮಿಸಿರುವ ಆಡಳಿತದ ಬಲವಾದ ಪುರಸ್ಕಾರ (ಕಾಳಸಂತೆಕೋರರಿಗೆ) ಹಾಗೂ ಲಂಚಕೋರತನ. ಮೇಲಾಗಿ ಸರಕಾರೀ ಕೆಲಸಗಾರರ ನಿತ್ಯಂತರ ಸಾಗದ ವೇತನ ನೀತಿ ಹಾಗೂ ಭದ್ರತೆಯಿಲ್ಲದ ಕೆಲಸಗಳೂ ಕಾರಣ.

ಈ ಎಲ್ಲ ಕಾರಣಗಳಿಂದ ಅಧ್ಯಕ್ಷ ಸೈಯದ್ ಬರ್‍ರೆಯವರಿಗೆ ಪ್ರಾಣಭಯವೂ, ಅಧಿಕಾರ ಪಲ್ಲಟದ ಭಯವೂ ಹಗಲೂ–ರಾತ್ರಿಗಳ ದುಃಸ್ವಪ್ನವಾಗಿಬಿಟ್ಟಿದೆ. ಬಾದೂಕುಗಳ ರಾಶಿಯೊಳಗೆ ಹುದುಗಿ ಬದುಕುತ್ತಿದ್ದಾರೆಂದರೂ ಉತ್ಪ್ರೇಕ್ಷೆಯಲ್ಲ. ಯಾವ ಗಳಿಗೆಯಲ್ಲಾದರೂ ಸೋಮಾಲಿಯಾದ ರಾಜಕೀಯ ಸ್ಥಿತಿ ಏಕ್‌ದಂ ಬದಲಾಗಬಹುದಾದರೂ, ಮುಂದಾಗಬಹುದಾದುದು ಒಳಿತಿಗೋ ಅಥವಾ ಕೆಡುಕಿಗೋ ಈಗಲೇ ಹೇಳಬರುವುದಿಲ್ಲ. ಸಮಯವಂತೂ ಇನ್ನೊಂದು ಕ್ರಾಂತಿಗೆ ಪಕ್ವಾಗಿದೆ.

## ೨. ಇಥಿಯೋಪಿಯಾ

ಸೋಮಾಲಿಯಾದ ಪಶ್ಚಿಮಕ್ಕೆ ವಿಶಾಲವಾಗಿ ಹರಡಿಕೊಂಡಿರುವ ಮತ್ತು ಜಗತ್ತಿಗೆ 'ಕಾಫಿ' ಎಂಬ ಹೆಸರನ್ನು ತಂದುಕೊಟ್ಟ 'ಕಾಫ್' ಊರಿರುವ ಮತ್ತು ಅಬಿಸ್ಸೀನಿಯಾ ಎಂದು ಚರಿತ್ರೆಯಲ್ಲಿ ಜಗತ್ಪ್ರಸಿದ್ಧವಾಗಿದ್ದ ದೇಶವೇ ಇಥಿಯೋಪಿಯಾ. ಕ್ರಿಶ್ಚಿಯನ್ನರು, ಮುಸಲ್ಮಾನರು ಮುಖ್ಯ ಮತೀಯರು. ಕ್ರಿಶ್ಚಿಯನ್ನರ ಸಂಖ್ಯೆ ಹೆಚ್ಚು. ಲೆಫ್ಟಿನೆಂಟ್ ಕರ್ನಲ್ ಮೆಂಗಿಸ್ತು ಹೈಲೆ ಮರಿಯಮ್‌ರ ಇಥಿಯೋಪಿಯಾದ ಸರ್ವಾಧಿಕಾರಿ ಅಧ್ಯಕ್ಷರು.

ಇಥಿಯೋಪಿಯಾವು ಎರಿಟ್ರಿಯಾ ಅಂಚಿನಲ್ಲಿರುವ ಕೆಂಪು ಸಮುದ್ರದ ಕೊಂಚ ಭಾಗವನ್ನುಳಿದು, ಸಂಪೂರ್ಣವಾಗಿ ಭೂಮಿಯಿಂದಲೇ ಸುತ್ತುವರಿಸಿಕೊಂಡಿರುವುದು–ಪೂರ್ವಕ್ಕೆ ಸೋಮಾಲಿಯಾ, ಈಶಾನ್ಯಕ್ಕೆ ಜಿಬೂತಿ, ಪಶ್ಚಿಮಕ್ಕೆ ಸೂಡಾನ್, ಉತ್ತರಕ್ಕೆ ಈಜಿಪ್ಟ್, ದಕ್ಷಿಣಕ್ಕೆ ಕೆನ್ಯಾ ಹಾಗೂ ಉಗಾಂಡಾಗಳು–ಮತ್ತು ಎರಿಟ್ರಿಯಾ ಸಂಪೂರ್ಣ ಮುಸ್ಲಿಮರ ಪ್ರಭುತ್ವದಲ್ಲಿರುವುದು, ಇಲ್ಲಿನ ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿಗಳಿಗೆ ವೈಪರೀತ್ಯಗಳನ್ನುಂಟುಮಾಡುವಾಗಲೂ ತಂದೊಡ್ಡಬಹುದಾಗಿರುವುದೊಂದು ವಿಶೇಷ. ಏಕೆಂದರೆ, ಸುತ್ತಿಕೊಂಡಿರುವ ಇಷ್ಟೊಂದು ದೇಶಗಳಲ್ಲಿ, ಇಥಿಯೋಪಿಯಾದ ಸಂಬಂಧ ಇದ್ದುದವರಲ್ಲಿಯೇ ಹೇಳಿಕೊಳ್ಳುವಷ್ಟು ಪರವಾಗಿಲ್ಲವೆಂದರೆ ಕೇವಲ ಕೆನ್ಯಾದೊಡನೆ ಮಾತ್ರ. ಅದು ಸಹ ಮೆಂಗಿಸ್ತುವಿನ ಆಳ್ವಿಕೆಯುದ್ದೀಚೆಗೆ ಸಂಶಯಾಸ್ಪದವಾಗಿದೆ. ಆದ್ದರಿಂದ ಆಮದು–ರಫ್ತು ಮುಂತಾದ ಅಂತಾರಾಷ್ಟ್ರೀಯ ಸಾಗಣೆಗಳಿಗೆ ಕೇವಲ ಅಸ್ಮಾರಾ(ಎರಿಟ್ರಿಯಾದ ಮುಖ್ಯ ಪಟ್ಟಣ ಹಾಗೂ ಬಂದರು)ವೊಂದೇ ಗತಿ. ಅಸ್ಮಾರಾ ಹೊರತು ಬೇರೆಡೆ ಇಥಿಯೋಪಿಯನ್ನರು ಸೃಷ್ಟಿಸಬೇಕಾದರೆ ವಾಯುಮಾರ್ಗ ಮತ್ತು ಅಡಿಸ್‌ಅಬಾಬಾ(ಇಥಿಯೋಪಿಯಾದ ರಾಜಧಾನಿ) ದಿಂದ ಜಿಬೂತಿಗೆ ಎಳೆದಿರುವ ರೈಲು ಮಾರ್ಗ. ಈ ರೈಲು ಮಾರ್ಗ ಸಹ ಒಗಾದನ್ ಯುದ್ಧ ಸಮಯದಲ್ಲಿ ಸೋಮಾಲಿ ಗೆರಿಲ್ಲಾಗಳ ದಾಂಧಲೆಗೆ ಬಲಿಯಾಗಿ ಹಾಳಾಗಿ ಹೋಗಿದ್ದು ಈಗ ಮತ್ತೆ ಕೆಲಸ ಪ್ರಾರಂಭಿಸಿದೆ. ಆದ್ದರಿಂದ ಜಿಬೂತಿ ಸರಕಾರಕ್ಕೆ ಬಲವಾದ ಸುಂಕವನ್ನು ತರಬೇಕಾಗುತ್ತದೆ.

ರಾಜರ ಆಳ್ವಿಕೆಯಲ್ಲಿದ್ದಾಗ ಇಥಿಯೋಪಿಯಾ ಸಂಪೂರ್ಣ ಪಾಶ್ಚಿಮಾತ್ಯ ಪ್ರಭಾವದಲ್ಲಿತ್ತು.

ಅಮೇರಿಕದಿಂದ ಹೇರಳವಾದ ಸಹಾಯವೊದಗುತ್ತಿತ್ತು. ಹೈಲೆ ಸಲಾಸ್ಸೈಯವರ ಕಾಲದಲ್ಲಿ ಇಥಿಯೋಪಿಯಾದ ಒಳಗೂ, ಹೊರಗೂ ಭದ್ರವಾದ ರಕ್ಷಣೆ ಇದ್ದಿತು. ಆದ್ದರಿಂದ ಸೋಮಾಲಿಯಾದಂತಹ ಸಣ್ಣ ಪುಟ್ಟ ದೇಶಗಳು ಕೆಣಕುವ ಮಾತೇ ಇರಲಿಲ್ಲ.

ಮೆಂಗಿಸ್ತುರವರ ಕ್ರಾಂತಿಕಾರಕ ಸರಕಾರ ಬಂದದ್ದೆ ನಾಂದಿಯಾಯಿತು–ಇಥಿಯೋಪಿಯಾ ರಾಜಕೀಯವಾಗಿ, ನೈತಿಕವಾಗಿ, ಆರ್ಥಿಕವಾಗಿ ಪ್ರಪಾತದತ್ತ ಇಳಿಯಲು. ಮೆಂಗಿಸ್ತು ಸರಕಾರ ರಾಜಮನೆತನದವರಿಗೆ ದುಃಸ್ವಪ್ನವಾಗಿ ಪರಿಣಮಿಸಿತು. ತತ್ಪರಿಣಾಮವಾಗಿ ಹೈಲಿ ಸಲಾಸ್ಸೈ ಜನರೆಲ್ಲ ಜೈಲಿನತ್ತಲೂ, ಮರಣದತ್ತಲೂ ತೆರಳಿದರು. ಹೈಲಿ ಸಲಾಸ್ಸೈಯವರ ವಂಶಜರಲ್ಲಿ ಹತ್ತು ಮಂದಿ ಮಕ್ಕಳನ್ನೂ ಒಳಗೊಂಡಂತೆ–೧೯೭೭ರ ಅಂತ್ಯದಲ್ಲಿ ಜೈಲಿನಿಂದ ತಪ್ಪಿಸಿಕೊಂಡು, ಕೆನ್ಯಾದ ಮೂಲಕ ಅಮೇರಿಕ ಸೇರಿಕೊಂಡರು. ಸರಕಾರವನ್ನು ಎದುರಿಸಿ ನಿಲ್ಲ ಹೊರಟವರನ್ನೆಲ್ಲಾ ಕಂಡಕಂಡಲ್ಲಿ ಹಾಗೂ ಹಿಡಿ ತಂದು ಗುಂಡಿಕ್ಕಿ ಕೊಲ್ಲಲಾಯಿತು. ಅಡಿಸ್ ಅಬಾಬಾ ಹಾಗೂ ಸುತ್ತಮುತ್ತ ಹಗಲೂ ರಾತ್ರಿ ಗುಂಡಿನ ಸುರಿಮಳೆ ಆರಂಭವಾಗಿ ಹೋಯಿತು. ಮೇಲಾಗಿ ಆಂತರಿಕ ದಂಗೆಯಿಂದಾಗಿ ಅನೇಕ ಅನೈತಿಕ ಕೃತ್ಯಗಳೂ ಸರ್ವೇಸಾಮಾನ್ಯವೆನಿಸಿದುವು. ಇದರ ತಡೆಗಾಗಿ ಪ್ರತಿದಿನ ಸಂಜೆ ಆರು ಗಂಟೆಯ ಮೇಲೆ ಅಡಿಸ್ಸಿನಲ್ಲಿ ಕರ್ಫ್ಯೂ ಜಾರಿಗೆ ಬಂದಿತು.

ಉರಿಯುವುದಕ್ಕೆ ತುಪ್ಪ ಸುರಿದಂತೆ, ಮೆಂಗಿಸ್ತುವಿನ ಅಸ್ಥಿರತೆಯನ್ನು ಅಸ್ತ್ರವಾಗಿಸಿಕೊಂಡು ಎರಿಟ್ರಿಯಾದ ಮುಸಲ್ಮಾನರು ಅಸ್ಮಾರಾವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ತಮ್ಮ ಬೇರ್ಪಡೆಗೆ ಹಾಗೂ ಸ್ವಾತಂತ್ರ್ಯಕ್ಕೆ ಹೋರಾಡ ತೊಡಗಿದರು. ಈ ಹೋರಾಟಕ್ಕೆ ಅರಬ್ ದೇಶಗಳ ಒಕ್ಕೂಟದಿಂದ ಎಲ್ಲ ತರಹದ ಪ್ರತ್ಯಕ್ಷ ಸಹಾಯವೂ ಹರಿದು ಬರತೊಡಗಿತು.

ಈ ಕೆಟ್ಟ ಗಳಿಗೆಯನ್ನೇ ಕಾಯ್ದಿದ್ದ ಉತ್ತರ ಸೋಮಾಲಿಯಾ ಬಿಡುಗಡೆ ದಳವು (ವೆಸ್ಟರ್ನ್ ಸೋಮಾಲಿಯಾ ಲಿಬರೇಷನ್ ಫ್ರಂಟ್) ಸೋಮಾಲಿ ಸರಕಾರದ ಪ್ರತ್ಯಕ್ಷ ಸಹಕಾರದಿಂದ (ಮೋಗದಿಷು ಸರಕಾರ ಇದನ್ನು ಅಂತ್ಯದವರೆಗೂ ಅಲ್ಲಗಳೆಯುತ್ತಲೇ ಬಂದಿತ್ತು.) ಇಥಿಯೋಪಿಯಾ ಹಿಡಿತದಿಂದ ಉತ್ತರ ಸೋಮಾಲಿಯಾ(ಒಗಾದನ್) ಬಿಡುಗಡೆಗಾಗಿ ಕಾದಾಡತೊಡಗಿದರು.

ಈ ಎಲ್ಲ ಅಪಶಕುನಗಳನ್ನೂ, ಹೊಡೆತಗಳನ್ನೂ ತಾಳಲಾರದೆ, ಕಾಲ್ಕೆರೆದು ನಿಂತಿದ್ದ ರಶಿಯನ್ನರಿಗೆ ಮೆಂಗಿಸ್ತು ಆಹ್ವಾನವಿತ್ತರು. ಪರಿಣಾಮ ೧೯೭೭ರ ನಡುವಿನ ಹೊತ್ತಿಗೆ ರಶಿಯನ್ನರು ಆಫ್ರಿಕಾ ಕೊಂಬಿಯಲ್ಲಿನ ಎರಡು ಎದುರಾಳೀ ಕುದುರೆಗಳ ಮೇಲೆ ಏಕಕಾಲದಲ್ಲಿ ಸವಾರಿ ಮಾಡತೊಡಗಿದರು. ಮುಂದೆ, ರಶಿಯನ್ನರು ಸೋಮಾಲಿಯಾ ಹಿಡಿತವನ್ನು ಕಳೆದುಕೊಳ್ಳಲು ಇದೇ ಕಾರಣವಾಯಿತು. ಏಕೆಂದರೆ ಸೋಮಾಲಿಗಳು ಇಥಿಯೋಪಿಯನ್ನರನ್ನೂ, ಇಥಿಯೋಪಿಯನ್ನರು ಸೋಮಾಲಿಗಳನ್ನೂ ಆಜನ್ಮ ಶತ್ರುಗಳಂತೆ ಕಂಡುಕೊಳ್ಳುತ್ತಾರೆ. ಆದ್ದರಿಂದಲೇ, ಪಶ್ಚಿಮವು ಇಥಿಯೋಪಿಯಾದ ಕಡೆಗಿದ್ದಾಗ ಸೋಮಾಲಿಯಾ ಪಶ್ಚಿಮವನ್ನು ತಿರಸ್ಕರಿಸಿ ರಶಿಯದತ್ತ ಕಾಲ್ದೆಗೆದದ್ದು; ಮತ್ತು ಮೆಂಗಿಸ್ತು ಬಂದ ಕೂಡಲೇ ಪಶ್ಚಿಮದವರನ್ನು ಅಟ್ಟಿ, ಕ್ರಮೇಣ ರಶಿಯದೇವಿಯನ್ನು ಆಹ್ವಾನಿಸಿದಾಗ, ಸೋಮಾಲಿಯಾ ರಶಿಯದೆವ್ವದತ್ತ ಕಲ್ಲು ಬೀರಿ ಪಶ್ಚಿಮದೇವಿಯತ್ತ ಪ್ರಾತಃಕಾಲಕ್ಕಾಗಿ ಮೊರೆಯಿಡುತ್ತಿರುವುದು.

ರಶಿಯನ್ನರೊಡನೆ ಕೈ ಮಿಲಾಯಿಸಿದ್ದೇ ಮೆಂಗಿಸ್ತುರವರ ಭೀಕರ ಅತ್ಯಾಚಾರಕ್ಕೆ ಪುಟ ಕೊಟ್ಟಂತಾಯಿತು. ರಶಿಯನ್ನರ ನೀತಿಯೂ ಹಾಗೆಯೇ–ನೀತಿಯಿಲ್ಲದ ನೀತಿ. ಅವರು ಕಾಲಿಟ್ಟರೆ ಸಾಕು, ಬೀದಿಗಾಳಿ ಮನೆ ಹೊಕ್ಕಂತೆ. ಎಲ್ಲಿ, ಎಂದು, ಏಕೆ, ಏನಾಗುತ್ತದೆ ಎಂಬುದು ಅವರು ಹೊಕ್ಕ ದೇಶಗಳ ದೊರೆಗಳಿಗೂ ಅರಿವಾಗದಂತೆ ಮಾಸ್ಕೋದಲ್ಲಿ ಕೆ. ಜಿ. ಬಿ. (ರಶಿಯದ ಗೂಢಚಾರ ಸಂಘಟನೆ; ಅತ್ಯಂತ ಕ್ರೂರ ಹಾಗೂ ಹೇಯ ಕೃತ್ಯಗಳೆಲ್ಲ ಕೆ. ಜಿ. ಬಿ. ಮೂಲಕವೇ ನಡೆಯುವುದು ಮತ್ತು ಇಡೀ ವಿಶ್ವದಲ್ಲಿ ಯಾವುದೇ ದೇಶವನ್ನೂ ಬಿಡದಂತೆ ನಾಯಿ ಕೊಡೆಯಾಗಿರುವ ಈ ಸಂಸ್ಥೆಯ ಕೆಲಸಗಾರರಿಂದ, ಎಲ್ಲ

ದೇಶಗಳ ಆಗುಹೋಗುಗಳೂ ಕರಾರುವಾಕ್ಕಾಗಿ ಕ್ರೆಮ್ಲಿನ್ ತಲುಪುತ್ತದೆ. ರಶಿಯದಲ್ಲಿಯೂ, ಕ್ರೆಮ್ಲಿನ್ ಅಧಿಕಾರಕ್ಕೆದುರಾದ ಯಾವುದೇ ಪ್ರಜೆಯನ್ನೂ—ವಿಜ್ಞಾನಿಯಾಗಲಿ, ಮಹಾನ್ ಲೇಖಕನಾಗಲೀ, ಹೊಸಕಿ ಹಾಕುವುದೂ ಈ ಸಂಸ್ಥೆಯ ಜನರ ಮೂಲಕ ಸೂತ್ರಗಳ ಲಾಳಿಯಾಡಿಸಲಾಗುತ್ತದೆ. ಇತ್ತೀಚೆಗೆ, ನಡೆದ ಅನೇಕ ಉದಾಹರಣೆಗಳು ಕ್ರೆಮ್ಲಿನ್ ನೀತಿಯನ್ನು ಅತ್ಯಂತ ನೇರವಾಗಿಯೇ ತೋರಿಸಿಕೊಟ್ಟಿದೆ: ದಕ್ಷಿಣ ಯೆಮನ್ನಿನ ಅಧ್ಯಕ್ಷರ ಉಚ್ಚಾಟನೆಗಾಗಿ, ಉತ್ತರ ಯೆಮನ್ನಿನ ಅಧ್ಯಕ್ಷರನ್ನು ಬಾಂಬ್ ಸ್ಫೋಟಿಸಿ ಕೊಲ್ಲಿಸಿದ್ದು; ಏಡನಿನ್ನಲ್ಲಿ [ದಕ್ಷಿಣ ಯೆಮನ್ನಿನ ರಾಜಧಾನಿ] ರಶಿಯದ ಸೈನಿಕರೇ ಪ್ರತ್ಯಕ್ಷವಾಗಿ ನಿಂತು ತಮಗೆ ಬೇಕಾದಂತಹ ಕೈಗೊಂಬೆ ಸರಕಾರವನ್ನು ರಚಿಸಿದ್ದು; ದಕ್ಷಿಣ ಯೆಮನಿಗಳನ್ನು ತಮ್ಮ ಸೋದರ ಉತ್ತರ ಯೆಮನಿಗಳ ಮೇಲೆ ನುಗ್ಗಿಸಿರುವುದು ; ಆಫ್ಘಾನಿಸ್ಥಾನದ ದಾವೂದರನ್ನುರುಳಿಸಿ, ಕಮ್ಯೂನಿಸ್ಟರನ್ನು ಗದ್ದುಗೆಗೇರಿಸಿದ್ದು; ಕಾಬೂಲಿನಲ್ಲಿ (ಆಫ್ಘಾನಿಸ್ಥಾನದ ರಾಜಧಾನಿ) ಅಮೆರಿಕದ ರಾಯಭಾರಿಯವರ ಕಗ್ಗೊಲೆಯನ್ನು ರೂಪಿಸಿದ್ದು, ಇರಾನಿನ ರಾಜಕೀಯದಲ್ಲಿ ಅಲ್ಲೋಕಲ್ಲೋಲ ಮಾಡುತ್ತಿರುವುದು (ಇರಾನಿನಲ್ಲಿ ಘಟಿಸಿದ ಭೂಕಂಪ ಕೂಡಾ ರಶಿಯನ್ನರಿಂದ ಕೃತಕವಾಗಿ ಮಾಡಲ್ಪಟ್ಟಿದ್ದೆಂಬ ಅಭಿಪ್ರಾಯವೊಂದನ್ನು ಯುರೋಪಿನ ವಿಜ್ಞಾನಿಯೊಬ್ಬರು ಮಂಡಿಸಿದ್ದಾರೆ). ಎಲ್ಲಕ್ಕಿಂತಲೂ ನಮಗೇ ಹತ್ತಿರವಾಗುವುದೆಂದರೆ. ಪ್ಯಾಟ್ರಿಕ್ ಲುಮುಂಬಾ ವಿಶ್ವವಿದ್ಯಾನಿಲಯದಲ್ಲಿ ರಶಿಯದ ವಿದ್ಯಾರ್ಥಿ ವೇತನದಿಂದ ಅಭ್ಯಾಸ ಮಾಡುತ್ತಿರುವ ನಮ್ಮ ವಿದ್ಯಾರ್ಥಿಗಳನ್ನು ನೋಡಬೇಕು. ರಶಿಯು ಉದಾರವಾಗಿ ವಿದ್ಯಾರ್ಥಿ ವೇತನವಿತ್ತು ವಿಶ್ವದ ಎಲ್ಲ ಮೂಲೆಗಳಿಂದಲೂ ವಿದ್ಯಾರ್ಥಿಗಳನ್ನು ಲುಮುಂಬಾ ವಿಶ್ವವಿದ್ಯಾನಿಲಯಕ್ಕೆ ಕರೆಸಿಕೊಳ್ಳುವುದು ವಿದ್ಯಾದಾನದ ಉದಾತ್ತ ಮನೋಭಾವದಿಂದಲ್ಲ; ಬದಲಿಗೆ ಪ್ರತಿಯೊಬ್ಬ ವಿದ್ಯಾರ್ಥಿಯೂ ತನ್ನ ತಾಯ್ನಾಡಿನ ಮೇಲೆಯೇ ಗೂಢಚರ್ಯೆ ಕಾರ್ಯ ವಹಿಸಿಕೊಂಡು, ತಾಯ್ನಾಡಿಗೆ ವಾಪಸಾದ ಮೇಲೆ ಕೆ. ಜಿ. ಬಿ. ಗೆ. ಹೇಗೆ ವರದಿಯನ್ನು ಒಪ್ಪಿಸುತ್ತಿರಬೇಕೆಂಬ ಶಿಕ್ಷಣ ಕೊಡುವ ಉದ್ದೇಶದಿಂದ. ಒಂದು ದೇಶದ ಮೇಲೆ ಆರೋಪ ಹೊರಿಸುವಾಗ ಕಣ್ಣು ಕಿವಿಗಳನ್ನು ತೆರೆದಿಟ್ಟುಕೊಂಡೇ ಮಾಡಬೇಕಾಗುತ್ತದೆ. ಆದರೆ ರಶಿಯ, ಅಮೇರಿಕಗಳಂಥ ಬೃಹತ್ ದೇಶಗಳು ಇಂಥ ಚಟುವಟಿಕೆಗಳಲ್ಲಿ ನಿರತವಾಗಿರುವುದು ಸರ್ವವಿದಿತ.

ಮಾಸ್ಕೋ ಆಳ್ವಿಕೆಯು ದೂರದೇಶಗಳಿಂದ ಕಾಣುವವರಿಗೆ ನುಣ್ಣ ನುಣ್ಣಗೆ ದೂರದ ಬೆಟ್ಟದಂತೆ ಬಹು ಸುಂದರವಾಗಿ ಕಾಣಬಹುದು. ಆದರೆ ಮರದಿಂದ ಬಂದ ಕೊಡಲಿಯಿಂದಲೇ ಮರ ಕಡಿಸುವ ಮಾಸ್ಕೋ ಕಮ್ಯುನಿಸ್ಟರ ಪ್ರೇರಣೆ, ೧೯೭೭ ರ ಅಂತ್ಯದಲ್ಲಿ ಮೆಂಗಿಸ್ತುರವರಿಗೆ ಬಲಗೈಯ್ಯಾಂತಿದ್ದ ಉಪಾಧ್ಯಕ್ಷ ಅತ್ನಫು ಅವರ ಕಗ್ಗೊಲೆ ಮಾಡಿಸಿತು–ಮೆಂಗಿಸ್ತು ಆಳುಗಳಿಂದ.

ರಶಿಯ ಕಾಲಿಟ್ಟಾಗಿನಿಂದ ಇಥಿಯೋಪಿಯಾಕ್ಕೆ ಒಂದು ಬಿಲಿಯನ್ ಡಾಲರಿಗೂ ಮಿಕ್ಕಿ ಮದ್ದುಗುಂಡುಗಳನ್ನೂ ಮತ್ತು ಇತರೆ ಸಹಾಯಗಳನ್ನೂ ಒದಗಿಸಿದೆ; ಇನ್ನೂ ಒದಗಿಸುತ್ತಿದೆ.

ಎಲ್ಲಕ್ಕಿಂತ ಮಿಗಿಲಾಗಿ ಇಥಿಯೋಪಿಯಾ ದೇಶಕ್ಕೆ ಚರಿತ್ರೆಯ ಹಿನ್ನೆಲೆಯಿದೆ. ಇಥಿಯೋಪಿಯನ್ನರು ಧೀರರು. ಉದಾಹರಣೆಗೆ ೮೨ ವರ್ಷಗಳ ಹಿಂದೆ ತಮ್ಮ ನೆಲವನ್ನು ಮುತ್ತಿದ ಇಟಾಲಿಯನ್ ಸೈನ್ಯವನ್ನು 'ಅದೋವಾ' ಎಂಬ ಯುದ್ಧದಲ್ಲಿ ಇಥಿಯೋಪಿಯನ್ನರು ಒದ್ದೋಡಿಸಿದ್ದರು. ಅದರ ಸಂಕೇತವಾಗಿ ಪ್ರತಿ ಮಾರ್ಚ್ ಎರಡನೇ ದಿನಾಂಕ ಅಡಿಸ್ಸಿನ ಕ್ರಾಂತಿ ವೃತ್ತದಲ್ಲಿ ಆ ದಿನವನ್ನು ಇಂದಿಗೂ ಆಚರಿಸಲಾಗುತ್ತದೆ. ಇಷ್ಟಾದರೂ, ಹೈಲಿ ಸಲಾಸ್ಸೆಯವರ ಆಳ್ವಿಕೆಯಲ್ಲಿದ್ದಂತಹ ಒಗ್ಗಟ್ಟು, ದೇಶಪ್ರೇಮ ಮೆಂಗಿಸ್ತುರವರ ಮಬ್ಬಾಳಿಕೆಯಲ್ಲಿ ಸಂಪೂರ್ಣ ನಾಶವಾದಂತೆ ತೋರುತ್ತದೆ. ತಮಗೆ ಒಗ್ಗದ ಸರಕಾರದ ಧ್ಯೇಯವನ್ನು ಖಂಡಿಸುವಂತೆಯೋ ಎನ್ನುವ ಹಾಗೆ ಒಗಾದನ್ ಯುದ್ಧದಲ್ಲಿ ಇಥಿಯೋಪಿಯನ್ನರು ತೋರ್ಪಡಿಸಿಕೊಂಡೂ ಇದ್ದಾರೆ.

## ೩. ಜಿಬೂತಿ

ಇತ್ತೀಚಿನವರೆಗೂ ಫ್ರೆಂಚರ ಆಳ್ವಿಕೆಯಲ್ಲಿದ್ದ ಸೋಮಾಲಿಗಳು ತಮ್ಮದೆಂದು ಹೇಳಿಕೊಳ್ಳುವ

ಇನ್ನೊಂದು ಭಾಗವೇ ಅಫಾರರ ಹಾಗೂ ಇಸ್ಸಾಗಳ ನಾಡು. ೧೯೭೭ ರ ಜೂನ್ ೨೭ ರಂದು ಸ್ವಾತಂತ್ರ್ಯಗಳಿಸಿದ ಪುಟ್ಟ ಜಿಬೂತಿ, ತನ್ನೆರಡೂ ಪಕ್ಕಕ್ಕೆ ವಿಶಾಲವಾಗಿ ಹರಡಿಕೊಂಡಿರುವ ಸೋಮಾಲಿಯಾ ಹಾಗೂ ಇಥಿಯೋಪಿಯಾಗಳ ನಡುವೆ ಸ್ಯಾಂಡ್‌ವಿಚ್ಚಿನ ಮಧ್ಯ ಭಾಗದಂತೆ ಕೆಂಪು ಸಮುದ್ರದ ತೀರಕ್ಕೆ ಅತುಕೊಂಡಿತು.

ಫ್ರೆಂಚ್ ಸರಕಾರ ಜಿಬೂತಿಗೆ ಸ್ವಾತಂತ್ರ್ಯ ನೀಡಲು ನಿರ್ಧರಿಸಿದಾಗ, ಮುಖ್ಯವಾಗಿ ಸ್ಪರ್ಧೆ ಪ್ರಾರಂಭವಾದದ್ದು ಸೋಮಾಲಿಯಾ ಹಾಗೂ ಇಥಿಯೋಪಿಯಾಗಳ ನಡುವೆ. ಎರಡೂ ಶತ್ರು ದೇಶಗಳೂ ಜಿಬೂತಿ ತಮಗೆ ಸೇರಬೇಕೆಂದು. ಜಿಬೂತಿಯ ಹೆಚ್ಚು ಜನ ಸೋಮಾಲಿಗಳ ಹತ್ತಿರದವರೇ ಆದುದರಿಂದ ಮತ್ತು ಅಲ್ಲಿಯೂ ಸೋಮಾಲಿಯಾ ಭಾಷೆಯನ್ನು ಹೆಚ್ಚಾಗಿ ಮಾತನಾಡುವುದರಿಂದ, ಸೋಮಾಲಿಯಾದ ಕೇಳಿಕೆಗೆ ಸ್ವಲ್ಪವಾದರೂ ಹಕ್ಕಿದ್ದುದಾದರೂ, ಇಥಿಯೋಪಿಯಾ ಹಕ್ಕು ಚಲಾಯಿಸಲು ಬೇರೊಂದು ಕಾರಣವೇ ಇತ್ತು. ಇತ್ಯರ್ಥವಾಗದೆಯೂ, ಉಪಯೋಗಕ್ಕೆ ಬಾರದೆಯೂ ಉಳಿದುಹೋಗಿದ್ದ ಅಸ್ಸಾಬಾ ಬಂದರಿನ ಒಡೆತ ಆಗಲೇ ಭಾರಿಯಾಗಿದ್ದರಿಂದ. ಜಿಬೂತಿಯೂ ಅಕಸ್ಮಾತ್ತಾಗಿ ಸೋಮಾಲಿಯಾಕ್ಕೆ ಸೇರಿಬಿಟ್ಟರೆ, ಇಥಿಯೋಪಿಯಾದ ಯಾವುದೇ ವ್ಯವಹಾರಕ್ಕೂ ಸಮುದ್ರ




"ನಾನು ಹಾಕಿಕೊಂಡಿರೋ ಬಟ್ಟೆ ನೋಡು... ೩೦% 'ರಿಬೇಟ್'ನಲ್ಲಿ ತೆಗೆದುಕೊಂಡಿದ್ದು...
ಮೊದಲನೆ ಸಾರಿ ಒಗೆದ ಮೇಲೆ ೩೦% ರಷ್ಟು ಚಿಕ್ಕದಾಯಿತು."

ತೀರವೂ, ಬಂದರೂ ಸಂಪೂರ್ಣವಾಗಿ ಸಹಾಯ ಕ್ಕಿಲ್ಲದೇ ಹೋಗಬಹುದಾದ ಭಯವೇ ಅದು. ಈ ಪರಿಸ್ಥಿತಿಯ ಬಿಕ್ಕಟ್ಟಿನಿಂದಾಗಿ ಫ್ರೆಂಚ್ ಸರಕಾರ ಬೇರೆ ಮಾರ್ಗವೊಂದನ್ನೇ ಹಿಡಿಯ ಬೇಕಾಯಿತು. ಪರಿಣಾಮವಾಗಿ, ೧೯೭೭ರ ಪ್ರಾರಂಭದಲ್ಲಿ, ತಾವು ಸ್ವತಂತ್ರವಾಗಿರಲು ಇಚ್ಛಿಸುವವರೋ ಅಥವಾ ಎರಡೂ ಪಕ್ಕದ ಲ್ಲಿರುವ ಯಾವುದಾದರೊಂದು ದೇಶದ ಜೊತೆ ಸೇರಿಕೊಳ್ಳುವವರೋ ಎಂಬ ಜಿಬೂತಿಯ ಜನರ ನಿರ್ಧಾರ ಪಡೆಯುವುದಕ್ಕಾಗಿ ಜನಮತ ನಡೆಸ ಲಾಯಿತು. ಫಲವಾಗಿ, ಸ್ವಾತಂತ್ರ್ಯವನ್ನೇ ಬಯ ಸಿದ, ತಮ್ಮದೇ ಆದ ಬೇರೊಂದು ಸ್ವಂತ ಸರ ಕಾರವನ್ನೇ ಬಯಸಿದ ಜಿಬೂತಿ ಜನರ ಇಚ್ಛೆ ಯಿಂದಾಗಿ, ಅಂತಾರಾಷ್ಟ್ರೀಯ ಮನ್ನಣೆಯೂ ಈ ಇಚ್ಛೆಗೆ ದೊರಕಿದುದರಿಂದಾಗಿ, ಸೋಮಾ ಲಿಯಾ ಹಾಗೂ ಇಥಿಯೋಪಿಯಾ ಎರಡೂ ದೇಶಗಳೂ ತೆಪ್ಪಗಾಗಬೇಕಾಯಿತು. ಅಂತೂ ಸ್ವಾತಂತ್ರ್ಯವೂ ಬಂದಿತು. ಆದರೂ ಸಹ, ಅಷ್ಟ ರಲ್ಲಾಗಲೇ ಒಗಾದನ್ ಬಿಸಿಯೇರಿದ್ದ ಕಾರಣ ದಿಂದಾಗಿಯೂ, ಮತ್ತು ಪಕ್ಕದ ರಾಷ್ಟ್ರಗಳ ಪೈಪೋಟಿಯಿಂದಾಗಿಯೂ, ಫ್ರೆಂಚ್ ಸರಕಾರ ಜಿಬೂತಿಯ ನಾಯಕರ ಕೋರಿಕೆಯ ಮೇರೆಗೆ ಸ್ವಲ್ಪ ಭಾಗ ಫ್ರೆಂಚ್ ಸೈನ್ಯವನ್ನು ಜಿಬೂತಿ ಯಲ್ಲೇ ರಕ್ಷಣೆಗಾಗಿ ಉಳಿಸಿ ಹೋಗಬೇಕಾ ಯಿತು. ಏನಿದ್ದರೂ, ಜಿಬೂತಿಯ ಜನತೆಯ ಸ್ವಾತಂತ್ರ್ಯದ ಬಯಕೆಯಿಂದಾಗಿ, ಅವರ ಮೇಲೆ ಅತ್ಯಂತ ವಿಶ್ವಾಸವಿರಿಸಿಕೊಂಡಿದ್ದ ಸೋಮಾಲಿ ಗಳಿಗೆ ಬಹಳ ಘಾಸಿಯಾದಂತಾಯಿತಾದರೂ, ತಮ್ಮ ಘನತೆ ಕಾಪಾಡಿಕೊಳ್ಳುವುದಕ್ಕೋ ಅಥವಾ ತಮ್ಮದೇ ಆದ ಒಂದು ಭಾಗದ ಜನತೆಯ ಸ್ವಾತಂತ್ರ್ಯದ ಸಂತೋಷದಲ್ಲಿ ತಾವೂ ಸಹ ಭಾಗಿಯಾದೆವೆಂದು ತೋರಿಸಿಕೊಳ್ಳುವುದಕ್ಕೋ, ಅಂತೂ ಸೋಮಾಲಿಯಾ ಸರಕಾರ ೧೯೭೭ರ ಜೂನ್ ೨೭ ರಂದು ತನ್ನ ಗಣರಾಜ್ಯದಲ್ಲಿ ರಜೆ ಯನ್ನು ಘೋಷಿಸಿತು. ಅಲ್ಲದೆ ತಾವೇ ಸ್ವಾತಂತ್ರ್ಯ ಗಳಿಸಿದ್ದರೋ ಎಂಬಂತೆ ಸೋಮಾಲಿಗಳು ಆಚ ರಿಸಿದರು ಕೂಡಾ. ಬಹುಶಃ ಭವಿಷ್ಯದಲ್ಲಾಗ ಬಹುದಾದ ಬದಲಾವಣೆಯನ್ನು ಎಣಿಸಿಯೇ ಇರಬೇಕು. ಆದರೆ, ೧೯೭೮ರ ಜಿಬೂತಿಯ ಪ್ರಥಮ ಸ್ವಾತಂತ್ರ್ಯ ದಿನಾಚರಣೆಯಂದು ಜನತೆಯ ಎಣಿಕೆಗೆ ವಿರುದ್ಧವಾಗಿ, ಸೋಮಾಲಿ ಗಣರಾಜ್ಯದಲ್ಲಿ ರಜೆಯನ್ನು ಘೋಷಿಸಲಿಲ್ಲ.

ಜಿಬೂತಿ ಸ್ವಾತಂತ್ರ್ಯ ಗಳಿಸಿದ್ದೇ ತಡ, ವಿಶ್ವ ಸಂಸ್ಥೆಯ ಸದಸ್ಯತ್ವವೂ ದೊರೆಕಿದ್ದೇ ಅಲ್ಲದೆ, ಅರಬ್ಬರು ತ್ವರೆಯಿಂದ ತಮ್ಮ ಅರಬ್‌ಲೀಗಿನ ಸದಸ್ಯತ್ವವನ್ನೂ ದಯಪಾಲಿಸಿದರು. ಮುಖ್ಯ ಕಾರಣವೆಂದರೆ, ಯಾವುದೇ ರೀತಿಯ ಆರ್ಥಿಕ ವ್ಯವಸ್ಥೆಯೂ ಇಲ್ಲದ, ಪ್ರಕೃತಿದತ್ತವಾಗಿ ಏನೂ ದೊರಕದ, ಕೆಂಪು ಸಮುದ್ರದ ಹತೋಟಿಯಲ್ಲಿ ಅತ್ಯಂತ ಮುಖ್ಯ ಪಾತ್ರವಹಿಸಬೇಕಾದ ಜಿಬೂ ತಿಯು ಯಾವ ಕ್ಷಣಕ್ಕೂ ರಶಿಯನ್ನರ ಮುಷ್ಠಿಗೆ ಸೇರಿಹೋಗಬಹುದೆಂಬ ಭಯ. ಇದರಿಂದಲೇ ಸೌದಿಯೇ ಮುಂತಾದ ಎಣ್ಣೆಯುಳ್ಳ ಮುಸಲ್ಮಾನ ದೇಶಗಳಿಂದ ಹೇರಳವಾದ ಧನಸಹಾಯ ಜಿಬೂ ತಿಯತ್ತ ಅಯಾಚಿತವಾಗಿ ಹರಿದು ಬರುತ್ತಿ ರುವುದು ಕೂಡಾ.

ಮುಖ್ಯವಾಗಿ ಮುಸಲ್ಮಾನರೇ ಇರುವ ಜಿಬೂತಿಯ ಜನತೆಯಲ್ಲಿ ಅತಿ ದೊಡ್ಡ ಎರಡು ಪಂಗಡಗಳಿವೆ: ಇಸ್ಸಾಗಳು ಹಾಗೂ ಅಫಾರರು. ಇವರಲ್ಲದೆ, ಅಲ್ಪ ಸಂಖ್ಯೆಯಲ್ಲಿ ಅರಬ್ಬರೂ ಇದ್ದಾರೆ. ಈ ರೀತಿಯ ಪಂಗಡಗಳ ಒಟ್ಟು ಸಂಖ್ಯೆಯ ಪ್ರಮಾಣದ ಉಪಯೋಗದಿಂದ ಸ್ವಾತಂತ್ರ್ಯಕ್ಕೆ ಮೊದಲೇ ಜಿಬೂತಿಯ ರಾಷ್ಟ್ರೀಯ ಸದನಕ್ಕೆ ೨೨ ಇಸ್ಸಾಗಳು, ೨೦ ಅಫಾರರು ಹಾಗು ಇಬ್ಬರು ಅರಬ್ಬರಿದ್ದ ಸದಸ್ಯರನ್ನು ಜನತೆ ಚುನಾ ಯಿಸಿತ್ತು. ಸ್ವಾತಂತ್ರ್ಯಾನಂತರದ ಮಂತ್ರಿಮಂಡ ಲವೂ ಈ ಸದಸ್ಯರ ಪೈಕಿಯಿಂದಲೇ ರೂಪು ಗೊಂಡು, ಅಧ್ಯಕ್ಷ ಹಸನ್ ಗೂಲೇದ್‌ರವರೂ ಸೇರಿದಂತೆ ಹದಿಮೂರು ಇಸ್ಸಾಗಳೂ ಪ್ರಧಾನಿ ಅಹಮದ್ ದೀನಿಯವರೂ ಒಳಗೊಂಡ ಏಳು ಮಂದಿ ಅಫಾರರೂ ಅಧಿಕಾರಕ್ಕೇರಿದರು. ಅಧ್ಯಕ್ಷ ಹಸನ್ ಗೂಲೇದ್ ಮತ್ತು ಪ್ರಧಾನಿ ಅಹಮದ್ ದೀನಿಯವರು ಬಹಳ ವರ್ಷ ಜೊತೆಯಾಗಿ ಕೆಲಸ ಮಾಡಿದವರು.

ಸ್ವಾತಂತ್ರ್ಯ ಗಳಿಸಿದ ಪ್ರಾರಂಭದ ದಿನಗಳಲ್ಲೇ ಜಿಬೂತಿಯ ರಾಜಕೀಯದಲ್ಲಿ ಅಪಶಕುನಗಳೂ

ಚಿಗುರತೊಡಗಿ, ಗಟ್ಟಿ ಭವಿಷ್ಯದ ಬಗ್ಗೆ ಬಹಳಷ್ಟು ಸಂದೇಹಗಳೇ ಏಳತೊಡಗಿದವು. ಸೋಮಾಲಿ ಗೆರಿಲ್ಲಾಗಳು ೧೯೭೭ರ ಜೂನ್‌ನಲ್ಲಿ ಅಡಿಸ್‌ಅಬಾಬಾ ಮತ್ತು ಜಿಬೂತಿಗಳ ನಡುವಿನ ರೈಲು ದಾರಿಯಲ್ಲಿ ಬಾಂಬ್ ಸ್ಫೋಟಿಸಿ ಮಾರ್ಗವನ್ನು ಸಂಪೂರ್ಣ ಅಪ್ರಯೋಜಕಗೊಳಿಸಿದ್ದು ಜಿಬೂತಿಯ ಆರ್ಥಿಕ ಪರಿಸ್ಥಿತಿ ಏರುಪೇರಾಗಲು ಅತ್ಯಂತ ಮುಖ್ಯ ಕಾರಣವಾದರೂ, ಕ್ರಮೇಣ ಚೇತನ ಮರಳಿತು; ರೈಲು ದಾರಿ ರಿಪೇರಿಯಿಂದ ಹಾಗೂ ಕಷ್ಟಕಾಲದಲ್ಲಿನ ಸಹೋದರ ಸಹಾಯ ಹಸ್ತಗಳಿಂದ.

ಅಫಾರರಿಗೆ ಮಂತ್ರಿಮಂಡದಲ್ಲಿ ಸಿಕ್ಕಿದ್ದ ಎರಡನೇ ಸ್ಥಾನ ನುಂಗಲಾರದ ತುತ್ತಾಗುತ್ತ ನಡೆದಿತ್ತು. ಈ ಮಧ್ಯ ಸೋಮಾಲಿ ಭಾಷೆಯಾಡುವವರೆಲ್ಲರನ್ನೂ ಸೇರಿಸಿಕೊಂಡು (ಇಸ್ಸಾಗಳು ಹೆಚ್ಚಾಗಿ ಸೋಮಾಲಿ ಭಾಷೆಯನ್ನಾಡುಡುವವರು) 'ವಿಶಾಲ ಸೋಮಾಲಿಯಾ' ಮಾಡ ಹೊರಟಿದ್ದ ಸೋಮಾಲಿಗಳ ಉದ್ದೇಶ, ತತ್ಪರಿಣಾಮವಾಗಿ ೧೯೭೭ರ ಜುಲೈನಲ್ಲಿ ಪ್ರಾರಂಭವಾದ ಒಗಾದನ್ ಯುದ್ಧ, ಅಫಾರರಿಗೆ ನಿಜವಾದ ದಿಗಿಲುಂಟುಮಾಡಿದ್ದೂ ಸಹಜವೇ. ಇದರ ಫಲದಿಂದಾಗಿ, ಅನೇಕ ಅಫಾರರೆಲ್ಲರೂ ಒಂದಾಗಿ 'ಜನಪ್ರಿಯ ವಿಮೋಚನಾ ಚಳವಳಿ' (ಪಾಪ್ಯುಲರ್ ಲಿಬರೇಶನ್ ಮೂವ್‌ಮೆಂಟ್–ಎಂ. ಪಿ. ಎಲ್.) ಎಂಬ ಮಾರ್ಕ್ಸ್–ಲೆನಿನ್ ತತ್ವವನ್ನಾಧರಿಸಿದ ಗುಂಪನ್ನು ಪ್ರಾರಂಭಿಸಿಕೊಂಡರು. ಈ ಗುಂಪಿಗೆ, ಜಿಬೂತಿ ಮಂತ್ರಿಮಂಡಲದ ಅನೇಕ ಅಫಾರ ಮಂತ್ರಿಗಳ ಹಾಗೂ ಇಥಿಯೋಪಿಯಾದಲ್ಲಿ ಆಗಲೇ ಸ್ಥಾಪನೆಯಾಗಿದ್ದ ಮಾರ್ಕ್ಸ್–ಲೆನಿನ್ ಸರಕಾರದ ಬೆಂಬಲವಿದೆ ಎಂಬ ದೂರುಗಳ ಹೊಗೆಯೂ ಆಡತೊಡಗಿತ್ತು. ಅಧ್ಯಕ್ಷ ಗೂಲೇದ್‌ರವರಿಗೆ ಈ ವಾಸನೆ ಚೆನ್ನಾಗಿ ತಟ್ಟಿದ್ದರಿಂದಲೋ ಏನೋ, ಅವರಿಗೆ ಎಂ. ಪಿ. ಎಲ್. ಮೇಲೆ ಗುಮಾನಿ ಬೆಳೆಯುತ್ತಾ ಹೋಯಿತು. ಡಿಸೆಂಬರ್ ೧೯೭೭ರಲ್ಲಿ ಜಿಬೂತಿಯ 'ಲೆ ಫಾಮಿಯರ್' ರಾತ್ರಿ ಕ್ಲಬ್ಬಿನಲ್ಲಿ ಎರಡು ಕೈಬಾಂಬುಗಳು ಸ್ಫೋಟಗೊಂಡು, ಹೆಚ್ಚಾಗಿ ಫ್ರೆಂಚರೇ ಸೇರಿದಂತೆ, ೬ ಜನರು ಸತ್ತರು. ಮೂವತ್ತರಷ್ಟು ಮಂದಿ ಗಾಯಗೊಂಡರು. ಇದು ಗೂಲೇದರ ಗುಮಾನಿಗೆ ರೆಕ್ಕೆ ಬರುವಂತೆ ಮಾಡಿತು. ಮಾರನೇ ದಿನವೇ ಗೂಲೇದರು ತಮ್ಮ ಹೇಳಿಕೆಯೊಂದರಲ್ಲಿ, ಹಿಂದಿನ ದಿನದ ಸ್ಫೋಟಕ್ಕೆ ಎಂ. ಪಿ. ಎಲ್. ಗುಂಪೇ ಕಾರಣವೆಂದೂ ದೂರಿ ಅದೇ ಸುಸಂದರ್ಭವನ್ನು ಬಳಸಿಕೊಂಡು, ಎಂ. ಪಿ. ಎಲ್. ಗುಂಪಿನ ಚಳವಳಿಯನ್ನು ಇಡೀ ದೇಶದಲ್ಲಿ ಸಂಪೂರ್ಣ ರದ್ದು ಮಾಡುವ ಆಜ್ಞೆಯನ್ನೂ ಹೊರಡಿಸಿದರು. ಅದೇ ಹೇಳಿಕೆಯಲ್ಲಿ ಮುಂದುವರಿದು, ತಮ್ಮ ಗುಮಾನಿಯಲ್ಲಿ ಸೇರಿಕೊಂಡಿದ್ದ ಇಥಿಯೋಪಿಯಾ ಮಿಲಿಟರಿ ಸರಕಾರದ ಸಹಾಯವನ್ನು ಖಂಡಿಸಲೂ ಮರೆಯಲಿಲ್ಲ. ಮತ್ತು ತಮ್ಮ ಹೇಳಿಕೆಯ ಅಂತ್ಯದಲ್ಲಿ ದೇಶದಾದ್ಯಂತ ಜಿಕ್ಕಟ್ಟನ್ನೂ, ಸಿಬ್ಬಂದಿಯನ್ನೂ ಹೆಚ್ಚು ಮಾಡುವುದಾಗಿ ಹೇಳಿ ಮುಗಿಸಿದ್ದರು. ಹೇಳಿದ್ದಷ್ಟೇ ಅಲ್ಲದೆ, ಸ್ಫೋಟಕ್ಕೆ ಕಾರಣರಾದ ದ್ರೋಹಿಗಳನ್ನು ಹುಡುಕಿಸುವ ಸೋಗಿನಿಂದ, ಪೋಲೀಸರನ್ನು ಸಹ ಛೂ ಬಿಟ್ಟರು. ಈ ಹುಡುಕಾಟದ ನಾಟಕವನ್ನು ಪ್ರಥಮವಾಗಿ ಅರಿಬ ಎಂಬ ಅಫಾರರ ಜಿಲ್ಲೆಯಲ್ಲೇ ಪ್ರಾರಂಭ ಮಾಡಿದ್ದೂ ಆಯಿತಲ್ಲದೆ, ಮುಂದೆಯೂ ಹೆಚ್ಚಾಗಿ ಅಫಾರರೇ ಇದ್ದ ಕಡೆಗಳಲ್ಲೇ ಹುಡುಕಿಸಲಾಯಿತು. ಕೊನೆಗೆ ಒಟ್ಟು ೬೦೦ ಜನರನ್ನು ಸೆರೆಹಿಡಿದು, ಅದರಲ್ಲಿ ೧೭ ಮಂದಿಯನ್ನು ಕಾರಣೀಭೂತ ದೇಶದ್ರೋಹಿಗಳೆಂದು ಸಾರಿ, ಅವರ ಹೆಸರುಗಳನ್ನೂ, ಭಾವಚಿತ್ರಗಳನ್ನೂ ಪ್ರಕಟಿಸಿ, ಉಳಿದವರನ್ನು ಖುಲಾಸೆ ಮಾಡಿದರು. ಬಂಧಿತರಲ್ಲಿ ನೂರಕ್ಕೆ ನೂರು ಅಫಾರರೇ ಇದ್ದರು.

ತತ್ಪರಿಣಾಮವಾಗಿ ಪ್ರಧಾನಿ ಅಹಮದ್ ದೀನಿಯವರು ಮತ್ತು ಇತರ ನಾಲ್ವರು ಅಫಾರ ಮಂತ್ರಿಗಳೂ (ರಕ್ಷಣೆ, ಕೈಗಾರಿಕೆ, ಆರೋಗ್ಯ ಇಲಾಖೆ) ಕ್ರೀಡೆ ಮತ್ತು ಯುವಜನ—ಧಿಕ್ಕಾರದಿಂದ ರಾಜೀನಾಮೆಯಿತ್ತರು. ಇದರಿಂದಾಗಿ ಉಳಿದ ಅಫಾರ ಮಂತ್ರಿಗಳು ಕೇವಲ ಇಬ್ಬರು; ವಿದೇಶಾಂಗ ಸಚಿವ ಅಬ್ದುಲ್ಲಾ ಕಮೀಲ್ ಮತ್ತು ನ್ಯಾಯಮಂತ್ರಿ ಇಸ್ಮಾಯಿಲ್ ಅಲಿ ಯೂಸುಫ್. ತಕ್ಷಣವೇ ಅಧ್ಯಕ್ಷರು ಸಂಪೂರ್ಣ ಆಳ್ವಿಕೆಯನ್ನು ತಮ್ಮ ಕೈಗೇ ತೆಗೆದುಕೊಂಡರು.

ಕೆನ್ಯಾದ ಸೋಮಾಲಿಗಳು ತಮ್ಮದೆಂದು ಕೇಳುತ್ತಿರುವ ಈಶಾನ್ಯ ಭಾಗಕ್ಕೆ ನಾರ್ದರ್ನ್ ಫ್ರಾಂಟಿಯರ್ ಡಿಸ್ಟ್ರಿಕ್ಟ್ (ಎನ್. ಎಫ್. ಡಿ.) ಉತ್ತರ ಗಡಿನಾಡು ಜಿಲ್ಲೆ–ಎಂದು ಹೆಸರು. ಬ್ರಿಟಿಷರು, ತಾವು ಆಳಿದ ಕಡೆಗಳಲ್ಲೆಲ್ಲಾ, ಜನತೆಗೆ ಇಷ್ಟವಿಲ್ಲದಂತೆಯೋ, ಅಥವಾ ನಿರಂತರ ವೈಮನಸ್ಯಕ್ಕೆ ಹಾಗೂ ಕಾದಾಟಕ್ಕೆ ದಾರಿ ಮಾಡಿಕೊಟ್ಟೇ ತೆರಳುವುದು ಅವರ ತರಲೆ ಹುಟ್ಟುಗುಣವಲ್ಲವೇ? ನಮ್ಮಲ್ಲಿ ಕಾಶ್ಮೀರವಿದ್ದಂತೆ; ಇಂದಿಗೂ ಅಲ್ಪಸಂಖ್ಯಾತ ಜನಯುದ ರೊಡೀಷಿಯಾ ಇದ್ದಂತೆ. ಅವರ ಅದೇ ನೀತಿಗೆ ಮತ್ತೊಂದು ನಿದರ್ಶನವೋ ಎಂಬಂತೆ, ಎನ್. ಎಫ್. ಡಿ. ಬಗ್ಗೆಯೂ ತೀರ್ಮಾನವಿತ್ತು ತೊಲಗಲಿಲ್ಲ. ನ್ಯಾಯವಾಗಿ ೧೯೬೩ರಲ್ಲಿ ಕೆನ್ಯಾಕ್ಕೆ ಸ್ವಾತಂತ್ರ್ಯ ಕೊಡುವಾಗ, ಎನ್. ಎಫ್. ಡಿ. ವಿಭಾಗದಲ್ಲಿ ವಾಸಿಸುವ ಜನತೆಯ ಆಶೋತ್ತರಗಳನ್ನು ಜನಮತ ನಡೆಸುವ ಮೂಲಕ, ಕೆನ್ಯಾಕ್ಕೆ ಸೇರಿಕೊಳ್ಳಬೇಕೋ ಅಥವಾ ಸೋಮಾಲಿಯಾಕ್ಕೆ ಸೇರಿಕೊಳ್ಳಬೇಕೋ ಎಂಬ ಜನತೆಯ ನಿರ್ಧಾರವನ್ನು ಉದ್ಘೋಷಿಸಿ ಹೋಗಬೇಕಿತ್ತು. ಅದು ಹಾಗಾಗಲಿಲ್ಲ. ರೋಗಿ ಬಯಸಿದ್ದೇ ಹಾಲು–ಅಂದಂತೆ, ಕೆನ್ಯಾದ ಬಯಕೆಯೂ ಹಾಗೆಯೇ ಇದ್ದಿರಬೇಕು ಮತ್ತು ಬ್ರಿಟಿಷರಿಗೆ ಕೆನ್ಯಾದ ಕ್ರಿಶ್ಚಿಯನ್ನರ ಮೇಲೆ ಮತೀಯ ಪ್ರೇಮ ಸಹಾನುಭೂತಿಗಳು ಬಂದಿರಲೂ ಸಾಕು. ಅಂತೂ ಬ್ರಿಟಿಷರು ಇತ್ಯರ್ಥ ಮಾಡದೇ ನುಸುಳಿಕೊಂಡರು. ಇದೇ ಕಾರಣಕ್ಕೋ ಎಂಬಂತೆ, ೧೯೬೩ರ ಡಿಸೆಂಬರಿನಲ್ಲಿ ಎನ್. ಎಫ್. ಡಿ. ಯಲ್ಲಿ ಸೋಮಾಲಿಯಾದ ಸಹಾಯವಿದ್ದ ಸೋಮಾಲಿಗಳ ಸ್ವಾತಂತ್ರ್ಯದಂಗೆಯೆದ್ದಿತ್ತು. ಇದರರ್ಥ ಬ್ರಿಟಿಷರ ಕಪಟನಾಟಕವನ್ನು ಚೆನ್ನಾಗಿ ಬಯಲು ಮಾಡಲು ಸಮರ್ಥವಾಗಿದೆ. ದಂಗೆಯನ್ನು ಹತ್ತಿಕ್ಕಲು, ಸ್ವತಂತ್ರ ಕೆನ್ಯಾ ದೇಶದ ಸೈನ್ಯ ನಾಲ್ಕು ವರ್ಷಗಳ ಕಾಲ ಎನ್. ಎಫ್. ಡಿ. ಯಲ್ಲಿ ಬಿಡುವಿಲ್ಲದೇ ತಳವೂರಬೇಕಾಗಿತ್ತು. ಅಂತೂ ೧೯೬೭ರಷ್ಟು ಹೊತ್ತಿಗೆ ಸೋಮಾಲಿಯಾ ದಂಗೆಯನ್ನು ಸಂಪೂರ್ಣ ಹತ್ತಿಕ್ಕಲೂ ಆಯಿತು. ಎನ್. ಎಫ್. ಡಿ. ಯನ್ನು ಕೆನ್ಯಾ ದೇಶವು ರಾಜಾರಸ್ತು ದಕ್ಕಿಸಿಕೊಂಡೂ ಆಯಿತು.

ಸ್ವಾತಂತ್ರ್ಯ ಬಂದ ಹೊಸದರಲ್ಲಿ ಕೆನ್ಯಾದಲ್ಲಿ ಒಟ್ಟು ಕೇವಲ ಐದು ಸಾವಿರ ಮಂದಿ ಸೈನಿಕರಿದ್ದರು. ಆದ್ದರಿಂದ ಕೆನ್ಯಾ ತನ್ನ ಪಕ್ಕದ ಕ್ರಿಶ್ಚಿಯನ್ನರೇ ಹೆಚ್ಚಾಗಿರುವ ಇಥಿಯೋಪಿಯದೊಡನೆ ರಕ್ಷಣಾ ಒಪ್ಪಂದ(ಡಿಫೆನ್ಸ್ ಪ್ಯಾಕ್ಟ್)ವೊಂದಕ್ಕೆ ಸಹಿ ಹಾಕಬೇಕಾಯಿತು. ಇದಲ್ಲದೆ, ಬ್ರಿಟಿಷರು ಸ್ವಾತಂತ್ರ್ಯವಿತ್ತು ತೆರಳುವಾಗಲೂ, ಕೆನ್ಯಾ ಹಾಗೂ ಬ್ರಿಟನ್ನಿನ ನಡುವೆ ಇಂಥದೊಂದು ರಕ್ಷಣಾ ಒಪ್ಪಂದವಾಗಿತ್ತು.

ಈ ಎಲ್ಲ ವಿಪರೀತಗಳಿಂದ, ಆಗ ಯಾವುದೇ ರೂಪದಲ್ಲಿಯೂ ಭೂಪಟದಲ್ಲಿ ಎದ್ದು ತೋರದಂತಿದ್ದ ಸೋಮಾಲಿಯಾಕ್ಕೆ ವಿಧಿಯಿಲ್ಲದಂತಾಯಿತು. ಸೋಮಾಲಿಗಳು ತಮ್ಮ ಹೃದಯದೊಳಗಿದ್ದ 'ವಿಶಾಲ ಸೋಮಾಲಿಯಾ'ದ ಬಯಕೆಯ ಬಳ್ಳಿಯನ್ನು ತಮ್ಮ ಮುಷ್ಟಿಗೆ ಶಕ್ತಿ ಬರುವವರೆಗಾದರೂ ಚಿವುಟಿಕೊಳ್ಳಲೇಬೇಕಾಗಿತ್ತು. ಮೇಲಾಗಿ, ಕೆನ್ಯಾ ಸ್ವಾತಂತ್ರ್ಯ ಗಳಿಸಿದಾಗ, ಸೋಮಾಲಿಯಾ ಇನ್ನೂ ಪರಾಡಳಿತದಲ್ಲಿಯೇ ಇತ್ತು. ಆ ಸಮಯಕ್ಕೆ ಸೋಮಾಲಿಗಳಿಗೆ ಇಥಿಯೋಪಿಯಾ ದಿಕ್ಕಿನಲ್ಲಿ ತಲೆಯಿಟ್ಟು ಮಲಗುವಷ್ಟು ಚೈತನ್ಯವೂ ಇರಲಿಲ್ಲವೆಂದರೆ ಅತಿಶಯೋಕ್ತಿಯಲ್ಲ. ಈ ಕಾರಣಗಳಿಂದಾಗಿ, ೧೯೬೭ರಲ್ಲಿ, ಅರುಷದಲ್ಲಿ ಜಾಂಬಿಯಾದ ಅಧ್ಯಕ್ಷರ ಮಧ್ಯಸ್ಥಿಕೆಯಲ್ಲಿ, ಸೋಮಾಲಿಯಾದ ಅಧಿಕಾರಿಗಳೂ, ಕೆನ್ಯಾದ ಅಧಿಕಾರಿಗಳೂ ಸೇರಿ ಎಲ್ಲೆಯ ಕುರಿತಾದ ಹಾಗೂ ಪರಸ್ಪರ ಸರಕಾರ ಸಹಾಯಗಳ ವಿಚಾರದಲ್ಲಿ ಒಪ್ಪಂದ ಮಾಡಿಕೊಂಡಿದ್ದರು; ನೀರು ಸರಬರಾಜು ಮತ್ತು ಉಪಯೋಗ, ದನಕರುಗಳ ರೋಗ ನಿಯಂತ್ರಣ, ಪರಸ್ಪರ ಆರೋಗ್ಯ ಹಾಗೂ ವ್ಯವಸಾಯ ಅಭಿವೃದ್ಧಿಗಳೇ ಮುಂತಾಗಿ ಒಪ್ಪಂದದಲ್ಲಿ ಕಾಣಿಸಿಕೊಳ್ಳಲಾಗಿತ್ತು.

ಈ ಒಪ್ಪಂದವಾದ ಎರಡೇ ವರ್ಷಕ್ಕೆ, ೧೯೬೯ರಲ್ಲಿ, ಸೋಮಾಲಿಯಾದ ರಾಜಕೀಯ ಪರಿಸ್ಥಿತಿ ಸಂಪೂರ್ಣವಾಗಿ ಬದಲಾಗಿ, ಮಿಲಿಟರಿ ಕ್ರಾಂತಿಯಿಂದ ಸರ್ವಾಧಿಕಾರ ಬಂದಿತು. ಸೋಮಾಲಿಯಾದ ಆಗಿನ ಅಧ್ಯಕ್ಷ ಅಬ್ದಿರಷೀದ್ ಶರ್ಮಾರ್ಕೆಯವರ ಕೊಲೆಯಾಗಿ, ಈಗಿನ ಅಧ್ಯಕ್ಷ ಮಹಮ್ಮದ್ ಸೈಯದ್ ಬರ್ರೆ ಅಧಿಕಾರಕ್ಕೆ

ಬಂದರು. ಅಧ್ಯಕ್ಷ ಬರ್ರೆ ಬಂದ ಹೊಸದರಲ್ಲಿ ಕೆನ್ಯಾದ ಅಧ್ಯಕ್ಷ ಜೋಮೋ ಕೆನ್ಯಾಟಾರವರನ್ನು ಅನೇಕ ಸಲ ಸಂಧಿಸಿ, ಸಲಹೆ ಪಡೆದುಕೊಳ್ಳು ತ್ತಿದ್ದರು. ಎರಡೂ ದೇಶಗಳ ನಡುವೆ ವ್ಯಾಪಾರ ವ್ಯವಹಾರವೂ ಕುದುರಿತ್ತು.

ಈ ಮಧ್ಯೆ ಆಫ್ರಿಕದ ಒಕ್ಕೂಟ ಸಂಸ್ಥೆ (ಆರ್ಗನೈಸೇಷನ್ ಆಫ್ ಆಫ್ರಿಕನ್ ಯುನಿಟಿ: ಓ. ಎ. ಯು)ಯಲ್ಲಿ ಜಬೂತಿಯ ಪ್ರಶ್ನೆ ಯ ಬಗ್ಗೆ ನಡೆದ ಸಭೆಯೊಂದರಲ್ಲಿ, ಜಬೂತಿ ಜನಗಳ ಸ್ವಾತಂತ್ರ್ಯದ ಹಕ್ಕಿನ ಗ್ಯಾರಂಟಿಯನ್ನು ಇಥಿಯೋಪಿಯಾ ಹಾಗೂ ಸೋಮಾಲಿಯಾಗಳು ಕೂಡಿ ಒಕ್ಕೊರಲಿನಿಂದ ಕೊಡಬೇಕೆಂಬ ಇಥಿ ಯೋಪಿಯಾದ ಹೇಳಿಕೆಯ ಉತ್ತರವಾಗಿ ಸೋಮಾಲಿಯಾ ಅದನ್ನು ತಳ್ಳಿ ಹಾಕಿ, ಆಫ್ರಿಕ ಖಂಡದಲ್ಲಿ ನೆರೆಹೊರೆ ದೇಶಗಳು ಸ್ವಾತಂತ್ರ್ಯದ ಗ್ಯಾರಂಟಿಯನ್ನು ಪರಿಪಾಲಿಸಬೇಕಾದಂತಹ [illegible] ವಾಗಿ ಬರಬೇಕಾದ ಅವಶ್ಯಕತೆಯಿಲ್ಲವೆಂದು ಹೇಳಿತು. ಕೇಳುವವರಿಗೆ ಮತ್ತು ವಿಚಾರ ಮಾಡುವವರಿಗೆ, ಸೋಮಾಲಿಯಾದ ಈ ವಾದ ನೂರಕ್ಕೆ ನೂರು ಪಾಲು ಸರಿಯಾಗಿ ತೋರಿ ದ್ದಂತೂ ಸತ್ಯವಾದರೂ, ಕೆನ್ಯಾದೇಶವು ಈ ವಾದದ ವಾಸನೆಯನ್ನು ತಕ್ಷಣ ಅರಿತುಕೊಂಡು ಇದನ್ನು ಅಪಶಕುನವೆಂದೇ ತೀರ್ಮಾನಿಸಿಕೊಂ ಡಿತು. ಏಕೆಂದರೆ, ಆ ವೇಳೆಗಾಗಲೇ ಸೋಮಾ ಲಿಯಾಕ್ಕೆ ರಶಿಯನ್ನರು ಬಂದಿದ್ದರು, ರಶಿಯದ ಹೇರಳ ಸಹಾಯ ಹಾಗೂ ಮದ್ದುಗುಂಡುಗಳೂ ಬರತೊಡಗಿದ್ದುವು. ಈ ಎಲ್ಲ ಲೆಕ್ಕಾಚಾರಗಳಿಂದ ಕೆನ್ಯಾದ ಚಾಣಾಕ್ಷ ನಾಯಕಮಣಿಗಳು ಈ ತೀರ್ಮಾನಕ್ಕೆ ಬಂದುದರಲ್ಲಿ ತಪ್ಪು ಇರಲಿಲ್ಲ.

ಪಶ್ಚಿಮದೊಡನೆ ಸಹಾನುಭೂತಿಯಿಂದಲೂ ಕೆನ್ಯಾ ಹಾಗೂ ಇಥಿಯೋಪಿಯಗಳ ನಡುವೆ ಆಗಲೇ ರಕ್ಷಣಾ ಒಪ್ಪಂದ ನಡೆದು ಹೋಗಿದ್ದುದರಿಂದಲೂ ಮತ್ತು ಹಿಂದೊಮ್ಮೆ ಚಿವುಟಿಕೊಂಡಿದ್ದ 'ವಿಶಾಲ ಸೋಮಾಲಿಯಾ'ದ ಮಹದಾಸೆಯನ್ನು ಗುಪ್ತ ವಾಗಿ ಚಿಗುರಿಸಿಕೊಳ್ಳುತ್ತಿದ್ದುದರಿಂದಲೂ, ಸೋಮಾಲಿಯಾ ಮಿಲಿಟರಿ ಸರಕಾರಕ್ಕೆ, ಕೆಂಪು ಸಮುದ್ರದ ಪ್ರಭುತ್ವಕ್ಕೆ ಕಾಲು ಕೆರೆದುಕೊಂಡು ಚಾಚುತ್ತಲೇ ಇದ್ದ ರಷ್ಯಾದ ಸಹಾಯ ಹಸ್ತ ವನ್ನು ತಳ್ಳಿಹಾಕಲು ಇಚ್ಛಿಸಲಿಲ್ಲ. ರಷ್ಯಾದ ಬಾಹುಗಳನ್ನು ತೆರೆದು ಅಪ್ಪಿಕೊಳ್ಳಬೇಕಾಯಿತು. ಮೇಲಾಗಿ ಇಥಿಯೋಪಿಯಾ ಪಡೆಗಳಿಂದಲೂ ಶಕ್ತಿಶಾಲಿಯಾಗಿದ್ದೂ, ಸೋಮಾಲಿಯಾದ ಹತ್ತು ಪಟ್ಟು ಜನಶಕ್ತಿಯನ್ನು ಹೊಂದಿದ್ದೂ ಸೋಮಾಲಿ ನಾಯಕರುಗಳಿಗೆ ಚೆನ್ನಾಗಿ ಮನದಟ್ಟಾ ಗಿತ್ತು.

೧೯೭೬ರಷ್ಟರ ಹೊತ್ತಿಗೆ, ಸೋಮಾಲಿಯಾ, ಇಡೀ ಕಪ್ಪು ಆಫ್ರಿಕದಲ್ಲೇ ಉನ್ನತವೆನ್ನುವಂತಹ ಟ್ಯಾಂಕುಗಳ ದಳ ಹಾಗೂ ಮಿಗ್ ವಿಮಾನ ದಳ ಗಳನ್ನು ಪಡೆದಿತ್ತು. ಆಗ, ಕೆನ್ಯಾದಲ್ಲಿ ಕೇವಲ ಅರ್ಧ ಡಜನ್ ಟ್ರೈನಿಂಗ್ ವಿಮಾನಗಳಿದ್ದುವು: ಮತ್ತು ಟ್ಯಾಂಕುಗಳು ಇರಲೇ ಇಲ್ಲ. ಅಲ್ಲದೆ, ಅಮೇರಿಕ ದೇಶವು, ಉಗಾಂಡದ ಇದಿ ಅಮೀನ ದಾಳಿಯಿಂದ ರಕ್ಷಿಸಿಕೊಳ್ಳುವು ದಕ್ಕಾಗಿ ಕೆನ್ಯಾಕ್ಕೆ ಕೊಡುತ್ತೇನೆಂದು ಭರವಸೆ ಕೊಟ್ಟಿದ್ದ ಹನ್ನೆರಡು ಎಫ್–೫ ಜೆಟ್ ಫೈಟರು ಗಳು ೧೯೭೮ರ ಹೊತ್ತಿಗೆ ಮಾತ್ರ ತಯಾರಾಗುವುದ ಗುವುದರಲ್ಲಿದ್ದುವು. ಆದರೆ, ೧೯೭೭ರ ಒಳಗೆ ಆಫ್ರಿಕದ ಕೊಂಬಿನಲ್ಲಿ ಅನೇಕ ಅನಿರೀಕ್ಷಿತ ಬದಲಾವಣೆಗಳಾದುವು. ಇಥಿಯೋಪಿಯಾಕ್ಕೆ ಕಮ್ಯೂನಿಸ್ಟರು ಬಂದರು: ಸೋಮಾಲಿಯಾ ದಿಂದ ರಶಿಯನ್ನರು ಬಿಟ್ಟರು: ಒಗಾಡನ್ ತಗಾದೆಯು ಪ್ರಾರಂಭವಾಯಿತು.

[illegible] ಸೋಮಾಲಿಯಾಕ್ಕೆ [illegible] ಮಂತ್ರಿ ಮಂಡಲದ [illegible] ವಾಗಿ. ನೈರೋಬಿಯ ಇರಾನ್ ರಾಯಭಾರಿ ಕಛೇರಿ ಮುಚ್ಚಲ್ಪಟ್ಟಿತು. ರಾಯಭಾರಿ ಇರಾನಿಗೆ ತೆರಳಬೇಕಾಯಿತು. ಕೆನ್ಯಾಕ್ಕೆ ಎಣ್ಣೆ ಇರಾನದಿಂದ ಲೇ ಹೆಚ್ಚಾಗಿ ಬರುತ್ತಿದ್ದುದರಿಂದ, [illegible] ಖಂಡನೆ ಕೆನ್ಯಾಕ್ಕೆ ತೊಂದರೆಯನ್ನೇ ತಂದೊಡ್ಡಿತು.

ಈ ಬಿಕ್ಕಟ್ಟುಗಳಿಂದಾಗಿ, ೧೯೭೮ರ ಫೆಬ್ರುವರಿಯಲ್ಲಿ ಆಗ ಉಪಾಧ್ಯಕ್ಷರಾಗಿದ್ದ ಅರಪ್ ಮೋಯ್‌ರವರ ನೇತೃತ್ವದಲ್ಲಿ, ಕೆನ್ಯಾದ ಉನ್ನತ

ನಿಯೋಗವೊಂದು, ವಾಷಿಂಗ್‌ಟನ್, ಲಂಡನ್, ಬಾನ್‌ಗಳಿಗೆ ತಮ್ಮ ದೇಶದತ್ತ ಅವರ ಮನ ಹೊರಳಿಸಲು ಹೋಗಿತ್ತು. ಅದು ವಿಫಲವಾಗಿದ್ದರೆ, ಸೈನಿಕ ಸಹಾಯಕ್ಕಾಗಿ ಕೆನ್ಯಾ ಕೂಡಾ ಪೂರ್ವದತ್ತ ತಿರುಗಬಹುದಾದ ಸೂಚನೆಯನ್ನು ರಾಜಕೀಯ ವಿಜ್ಞಾನಿಗಳು ಪ್ರತಿಪಾದಿಸಿದ್ದರು.

ಸದ್ಯಕ್ಕೆ ಕೆನ್ಯಾ ದೇಶದ ಭವ್ಯ ಭವಿಷ್ಯವನ್ನು ಬರೆದ ಮತ್ತು ಕಟ್ಟಿದ ಕೆನ್ಯಾಟಾರವರು, ಕೆನ್ಯದ ಪಾಲಿಗೆ ನಿರಂತರವಾಗಿ ಇಲ್ಲವಾಗಿದ್ದರೆ, ಸೋಮಾಲಿಗಳ ಬಗ್ಗೆ ನಿಗದಿಯಾಗಿ ಪ್ರವಂಚಿತ ಯಾದ ರಾಜಕೀಯ ವಿಜ್ಞಾನಿಗಳೂ ಹೀಗೆಯೇ ಆಗುತ್ತದೆಂಬ ಭವಿಷ್ಯ ನುಡಿಯುವುದೂ ಕಷ್ಟವಾಗಿರುವುದು ಸರ್ವವಿದಿತವೂ ಆಗಿದೆ. ಈ ಮಧ್ಯೆ ಕ್ರಿಶ್ಚಿಯನ್ನರ ದೇಶವಾದ ಕೆನ್ಯಾಕ್ಕೆ ಪಶ್ಚಿಮದ ಕ್ರಿಶ್ಚಿಯನ್ ದೇಶಗಳ ರಕ್ಷಣಾ ಕವಚ ಸದಾ ಕಾಲವೂ ಬಹಿರಂಗವಾಗಿಯೇ ಇರುವುದೂ ಎದ್ದು ತೋರುತ್ತಿದ್ದರೂ ಸಹ, ಮುಂದೆ ಒದಗಬಹುದಾದ ಸ್ಥಿತಿಗತಿಗಳನ್ನು, ಜೋಮೋರವರ ಕುಲುಮೆಯಲ್ಲೇ ತಯಾರಾದ ಮೋಯ್‌ರವರು ಹೇಗೆ ನಿಭಾಯಿಸುತ್ತಾರೆಂಬುದನ್ನು ಕಾದು ನೋಡಬೇಕಾಗಿದೆ.

## ಒಗಾದನ್ ಯುದ್ಧ

೧೯೬೦ರಲ್ಲಿ, ಸೋಮಾಲಿಯಾಕ್ಕೆ ಸ್ವಾತಂತ್ರ್ಯ ಬಂದಿದ್ದ ಹೊಸದರಲ್ಲೇ, ಒಮ್ಮೆ ಆಗಿನ ಹೈಲಿ ಸಲಾಸ್ಸೆಯವರ ಸೈನ್ಯ, ಸೋಮಾಲಿಯಾದ ಉತ್ತರ ವಿಭಾಗದ ಹಾರ್ಗೀಸಾ ಪಟ್ಟಣದ ಹೊರ ಬಲಯಕ್ಕೆ ಒಂದೆರಡು ಸಣ್ಣ ಬಾಂಬುಗಳನ್ನು ಫೈಟರ್ ವಿಮಾನಗಳಲ್ಲಿ ಬಂದು ಬಿಸುಟಿತ್ತು. ಅದಕ್ಕೆ ಉತ್ತರವಾಗಿ ಆಗಿನ ಸೋಮಾಲಿಗಳಿಗೆ ಏನು ಮಾಡಬೇಕೆಂಬುದೂ ತಿಳಿದಿರಲಿಲ್ಲವೆಂದರೆ ಅತಿಶಯೋಕ್ತಿಯಲ್ಲ. ವಿಮಾನಗಳು ಬಾಂಬುಗಳನ್ನೆಸೆದು ಹಾರಿಹೋದ ಮೇಲೆ, ಒಂದಿಬ್ಬರು ಸೈನಿಕರು ಮರ ಹತ್ತಿ ಪಿಸ್ತೂಲಿನಿಂದ ವಿಮಾನಗಳತ್ತ ಗುಂಡು ಹಾರಿಸಿ ತಮ್ಮ ಬಲವನ್ನು ಬಹಿರಂಗಪಡಿಸಿಕೊಂಡಿದ್ದರೆಂಬ. ಅಪಹಾಸ್ಯದಂತಿದ್ದರೂ, ನಿಷ್ಠುರ ಸತ್ಯಕ್ಕಿಂತಲೂ ಬೇರಿನ್ನೇನು ಬೇಕು–ಅಂದಿನ ಸೋಮಾಲೀ ಶಕ್ತಿಸ್ಥಿತಿಯ ಮಾನದಂಡಕ್ಕೆ? ಅನೀ. ಮನೆತನದ ವೈಮನಸ್ಯವನ್ನು ಪ್ರದರ್ಶಿಸಿಕೊಳ್ಳುವುದಕ್ಕಾಗಿ ವಿದುರಾಳಿಗಳು ಕೈ ಮಿಲಾಯಿಸಿದಷ್ಟು ಮಾತ್ರ ಪ್ರಭಾವವನ್ನು ಎರಡೂ ಕಡೆಗಳ ಮೇಲೆ ಮಾಡಿದ್ದೂ ನಿಜ ಮತ್ತು ಸೋಮಾಲಿಗಳಿಗೆ ತಮ್ಮ ನಿಜವಾದ ಸ್ಥಾನವನ್ನು ಅರಿವು ಮಾಡಿಕೊಟ್ಟಿದ್ದು ನಿಜ. ಅದ್ದರಿಂದ ಕೆಲವೇ ದಿನಗಳು ಮಾತ್ರ ಎರಡೂ ದೇಶಗಳ ಮೇರೆಯ ಬಳಿ ನಡೆದ ಆ ಜಗಳ ಏನೂ ಪರಿಣಾಮವಿಲ್ಲದೇ ಅಂತ್ಯವಾಗಿದ್ದರೂ, ವಿಶಾಲ ಸೋಮಾಲಿಯಾದ ಕನಸನ್ನು ಬೆಳೆಸುತ್ತಲೇ ಇದ್ದ ಸೋಮಾಲಿಗಳಿಗೆ

ತೀರ ಮುಖ ಚಿಕ್ಕದಾದಂತಾಗಿದ್ದರೂ, ತಾವೂ ನಿಜವಾದ ಒಂದು ಶಕ್ತಿ ಎಂದು ಪ್ರಪಂಚಕ್ಕೆ ತೋರಿಸಿಕೊಳ್ಳುವುದಕ್ಕಾಗಿ, ಮತ್ತು ತಾಯ್ನಾಡಿಗಾಗಿ ಮಡಿಯುದಿರಲು ತಾವು ಹೇಡಿಗಳಲ್ಲ ಎಂದು ಚರಿತ್ರೆಯ ತಲೆಬರದಹಲ್ಲಿ ಬರೆದುಕೊಳ್ಳುವುದಕ್ಕಾಗಿ ತಮ್ಮ ಮಹದಾಶೆಯನ್ನು ಗೋಪ್ಯವಾಗಿಯೇ ಬೆಳೆಗೊಡುತ್ತಾ ಒಂದು ದಶಕಕ್ಕೂ ಮಿಕ್ಕಿ ಅಜ್ಞಾತವಾಗಿರಬೇಕಾಯಿತು. ಅದಕ್ಕಾಗಿ, ಹೈಲಿ ಸಲಾಸ್ಸೆಯವರ ದರ್ಮುರ್ರಣಕ್ಕಾಗಿ, ಮೆಂಗಿಷ್ಟು ಹೈಲೆ ಮರಿಯುನ್‌ರಂತಹ ವಿವಾದಾತ್ಮಕ ನಾಯಕ ಅಡಿಸ್ಸಿನಲ್ಲಿ ಅಜ್ಞಾತನಾಗಿ ಕೂರುವುದಕ್ಕಾಗಿ, ಇಥಿಯೋಪಿಯಾದ ಒಳ ಆವರಣ ಸಂಪೂರ್ಣ ಹದಗೆಡಬೇಕಾಗಿ ಬರುವ ಸಂದರ್ಭಕ್ಕಾಗಿ, ರಶಿಯದಂತಹ ಮಹಾನ್ ಶಕ್ತಿಯೊಂದು ತಮ್ಮ ಕೈ ಹಿಡಿದು ಬಹಳ ದೂರ ನಡೆಸಿಕೊಂಡು ಹೋಗಬೇಕಾಗಿದ್ದುದಕ್ಕಾಗಿ, ಸೋಮಾಲಿಯಾದ ಚರಿತ್ರೆಯಲ್ಲೇ ಪ್ರಪ್ರಥಮವಾಗಿ ಮಹಮ್ಮದ್ ಸೈಯದ್ ಬರ್‍ರೆಯುವರಂತಹ ಒಬ್ಬ ಕಠಿಣ ನಾಯಕನ ಆಗಮನವಾಗುವುದಕ್ಕಾಗಿ, ಸೋಮಾಲಿಗಳು ಸಂಯಮದಿಂದ ದಿನಗಳನ್ನೆಣಿಸುತ್ತಾ ಕಾಯಬೇಕಾಯಿತು. ಇಷ್ಟೆಲ್ಲಾ ಆದರೂ ಪರಿಣಾಮವಾದರೂ ಏನಾಗಿದೆ? ಒಗಾದನ್ ಒಂದು ದುಃಸ್ವಪ್ನವಾಗಿಯೇ, ಪಶ್ಚಿಮ ಸೋಮಾಲಿಯಾದ ಬಿಡುಗಡೆ ಹುಳಿ ದ್ರಾಕ್ಷಿಯಾಗಿಯೇ ಉಳಿದುಹೋಗುತ್ತದೆಯೇ?

ಭಾರತ ದೇಶ ಸ್ವಾತಂತ್ರ್ಯಕ್ಕೆ ಮುನ್ನವೇ ಇಂದಿನ ಬರ್ಮಾವನ್ನೂ, ಸ್ವಾತಂತ್ರ್ಯದ ಸಮಯದಲ್ಲಿ ಇಂದಿನ ಪಾಕಿಸ್ತಾನ, ಬಂಗ್ಲಾಗಳನ್ನೂ ಅನಿವಾರ್ಯವಾಗಿಯೋ ಅಥವಾ ಸ್ವಾತಂತ್ರ್ಯದ ಮಹದಾಸೆಯಿಂದಲೋ, ಅಂತೂ ಕಳೆದುಕೊಳ್ಳಬೇಕಾಯಿತು. ಈಗ ಭಾರತ ಸ್ವತಂತ್ರ ದೇಶ. ಮಿಗಿಲಾಗಿ ತಾನು ಒಂದೊಮ್ಮೆ ಕಳೆದುಕೊಂಡ ಈ ದೇಶಗಳಿಗಿಂತ ಅನೇಕ ಪಾಲು ಬಲಶಾಲೀ ದೇಶವು ಕೂಡಾ. ಹಾಗಾದರೆ, ನಾವೂ ಏಕೆ ಈ ದೇಶಗಳ ಮೇಲೆ ಹಕ್ಕು ಚಲಾಯಿಸಿ ಮತ್ತೆ ನಮ್ಮಂತಾಗಿಸಿಕೊಳ್ಳಬಾರದು? ನನಗೆ ತೋರುವಂತೆ ಸೋಮಾಲಿಯಾ ಈಗ ಹೋರಾಡುತ್ತಿರುವ ವಿಭಾಗಗಳ ವಿಚಾರವೂ ಹೀಗೆಯೇ ಇರುವುದನ್ನೇ ಚೆನ್ನಾಗಿ ಆಳಿಕೊಳ್ಳುವ ಬದಲು, ಏಳಿಗೆಗೊಳಿಸುವ ಬದಲು, ಇನ್ನೊಂದಿಷ್ಟು ಬರಡನ್ನು ಕೂಡಿ ಹಾಕಿಕೊಳ್ಳುವ, ಅದರಲ್ಲೂ ಪ್ರಪಂಚದ ಇಪ್ಪತ್ತೈದು ಅತ್ಯಂತ ಬಡ ದೇಶಗಳಲ್ಲೊಂದಾದ ಸೋಮಾಲಿಯಾದಂತಹ ದೇಶ ತನ್ನ ಮಹತ್ಕಾಲವನ್ನೂ, ವೃದ್ಧಿಸಿಕೊಳ್ಳಬೇಕಾದ ಯುವ ಹಾಗೂ ಇತರ ಶಕ್ತಿಗಳನ್ನೂ ಇಂತಹ ಘೋರ ಮಹತ್ಕಾರ್ಯಗಳಲ್ಲಿ ವ್ಯಯ ಮಾಡುವುದು ತೀರ ಕೆಡುಕೆನ್ನಿಸುತ್ತದೆ. ಬರಡೇ ಆಗಿದ್ದರೂ ತಾಯ್ನಾಡು ತಾಯ್ನಾಡೇ ಸರಿ. ಆದರೆ, ದೊರಕಿದ ಅಥವಾ ಮುಂದೆ ದೊರಕಬಹುದಾದ ಫಲಾಫಲಗಳ ವಿವೇಚನೆಯೂ ಬೇಡವೇ?

೧೯೭೭ರ ಪ್ರಾರಂಭದ ಹೊತ್ತಿಗೆ ಸೋಮಾಲಿಯಾದ ಉತ್ತರ ಪ್ರಾಂತದ ಮುಖ್ಯ ಪಟ್ಟಣವಾದ ಹಾರ್ಗೀಸಾ ಇಥಿಯೋಪಿಯಾ ಹಾಗೂ ಸೋಮಾಲಿಯಾಗಳ ನಡುವಿನ ಅಂತಾರಾಷ್ಟ್ರೀಯ ಮೇರೆಗೆ ತೀರ ಹತ್ತಿರದಲ್ಲಿರುವ ಒಂದು ಮುಖ್ಯ ಪಟ್ಟಣದ ಹೊರ ವಲಯದ ಸುತ್ತ ಕುರುಚಲುಗಳ ಪೊದೆಗಳಲ್ಲಿ ಸೋಮಾಲಿ ಸೈನಿಕರ ಓಡಾಟ, ಕವಾಯತುಗಳು ಬಹಿರಂಗವಾಗಿ ಹೆಚ್ಚಾಗತೊಡಗಿತ್ತು. ಸೈನಿಕ ಲಾರಿಗಳ ಹರಿದಾಟ, ತುಂಬು ಆಹಾರ ಪದಾರ್ಥಗಳು, ಮದ್ದುಗುಂಡುಗಳ ಸಾಗಣೆ ದಿನೇ ದಿನೇ ವೃದ್ಧಿಸುತ್ತಾ ನಡೆದಿತ್ತು. ಎಲ್ಲ ಸೋಮಾಲಿಗಳ ಮುಖಗಳಲ್ಲಿಯೂ ಒಂದು ರೀತಿಯ ವೀರ ಕಳೆ ಹೆಚ್ಚಾಗುತ್ತಿದ್ದಂತೆ ಗೋಚರಿಸತೊಡಗಿತ್ತು. ಅಲ್ಲಲ್ಲಿ ಅಲ್ಪ ಸ್ವಲ್ಪ ಸುದ್ದಿಗಳೂ ಬರತೊಡಗಿದವು. ಮುಖ್ಯವಾಗಿ ಮೇರೆಯಿಂದಾಚೆ ಇಥಿಯೋಪಿಯಾ ನೆಲದಲ್ಲಿ ಪಶ್ಚಿಮ ಸೋಮಾಲಿಯಾ ಬಿಡುಗಡೆ ದಳದ ಸಾಹಸದ ತುಣುಕುಗಳು ಮುಖದಿಂದ ಮುಖಕ್ಕೆ ಹರಿದಾಡತೊಡಗಿದ್ದವು. ಅಂತೂ ಈ ಎಲ್ಲ ಸೂಚನೆಗಳಿಂದಾಗಿ ಹಾರ್ಗೀಸಾದಲ್ಲಿ ವಾಸವಾಗಿದ್ದ ವಿದೇಶೀಯರಿಗೆ, ಬರಬಹುದಾದ ಆಪತ್ಕಾಲದ ಗೂಬೆ ಕೂಗು ಹೊಳೆದು ಹೋಗಿದ್ದರೂ, ಯಾರಿಗೂ ಸೋಮಾಲಿಗಳ ವರ್ತನೆಯಿಂದ ಮಾತ್ರ ಏನೂ ನಿಖರ ಪಡಿಸಿಕೊಳ್ಳುವಂತಿರಲಿಲ್ಲ. ಮೇಲಾಗಿ, ದೇಶದಲ್ಲಿ ಆಗ ಇದ್ದ ಒಂದೇ ಒಂದು ಸರಕಾರೀ ಪತ್ರಿಕೆ 'ಹಿದ್ದಿಗ್ತಾ ಅಕ್ಟೋಬರ್'( ಅಕ್ಟೋಬರಿನ ತಾರೆ: ಮಹಮ್ಮದ್ ಸೈಯದ್ ಬರ್‍ರೆಯುವರ ಮಿಲಿಟರಿ

ಕ್ರಾಂತಿಯಿಂದಾಗಿ ೧೯೬೯ರ ಅಕ್ಟೋಬರ್ ೨೧ ರಂದು ಬಂದ ಅವರ ಸರಕಾರವು ಸಂಕೇತವಾಗಿ) ಈಗಿನಂತೆ ಆಗಲೂ ಮಿಲಿಟರಿ ಸರಕಾರವು [illegible] ಮಾತ್ರವೇ ಆಗಿತ್ತು. ಸೋಮಾಲಿಗಳೂ ಈ ವಿಷಯವಾಗಿ ವಿದೇಶಿಯರೊಡನೆ–ಕೆಲವೊಂದು ಆತ್ಮೀಯರನ್ನುಳಿದು– ಹೆಚ್ಚಾಗಿ ಮಾತನಾಡುತ್ತಿರಲಿಲ್ಲ; ಮತ್ತು ಅಂತಾರಾಷ್ಟ್ರೀಯ ಮರ್ಯಾದೆಗಾಗಿಯಾದರೂ, ತಾನೇ ನೇರವಾಗಿ ಯುದ್ಧದಲ್ಲಿ ಮುಂದೆ ಪಾಲ್ಗೊಳ್ಳುವ ಸನ್ನಾಹವಿಲ್ಲದ್ದರೂ ಸಹ, ತಮಗೂ ಯುದ್ಧಕ್ಕೂ ನೇರ ಸಂಬಂಧವಿಲ್ಲವೆಂದೂ, ಪಶ್ಚಿಮ ಸೋಮಾಲಿಯಾ ಬಿಡುಗಡೆ ದಳಕ್ಕೆ, ಅವರೂ ಸೋಮಾಲಿಗಳೇ ಆದ್ದರಿಂದ, ಅವರ ಯಾವುದೇ ಕಾರ್ಯದಲ್ಲೂ ತಮ್ಮ ಹೃತ್ಪೂರ್ವಕ ಮನ್ನಣೆಯೂ, ಸಹಾನುಭೂತಿ–ಸಹಕಾರಗಳೂ ಇವೆ–ಯೆಂಬಷ್ಟೇ ನಿಲುವನ್ನು ಸೋಮಾಲಿಯಾ ಸರ–ಕಾರ ಬಹಿರಂಗವಾಗಿ ಪ್ರಕಟಿಸಿಕೊಳ್ಳಬೇಕಾದ ನಾಟಕ ಮಾಡುತ್ತಿತ್ತು; ಬೆಕ್ಕು ಕಣ್ಣು ಮುಚ್ಚಿ ಹಾಲು ಕುಡಿದಂತೆ.

ಅಂತೂ ೧೯೭೭ರ ಜುಲೈ ಹೊತ್ತಿಗೆ ಒಗಾಡೆನ್ ಬಿಡುಗಡೆಗಾಗಿ ನಡೆಯುತ್ತಿದ್ದ ಬಹಿರಂಗ ಕಾದಾಟ ಅಂತಾರಾಷ್ಟ್ರೀಯ ಬಾನುಲಿಗಳಲ್ಲಿ ಪ್ರಕಟಗೊಳ್ಳತೊಡಗಿತು. ಅದೇ ಸಂದರ್ಭಕ್ಕೆ ಆಗಲೇ ಹೊತ್ತಿ ಬೇಯುತ್ತಿದ್ದ ಎರಿಟ್ರಿಯಾ ಬಿಡುಗಡೆಗಾಗಿ ಇಥಿಯೋಪಿಯಾದ ಉತ್ತರ ವಿಭಾಗದಲ್ಲಿನ ಮುಸಲ್ಮಾನರ ಹೋರಾಟ ಬಲವಾಯಿತು. ಇವರಿಗೂ ಸಹ, ಅರಬ್ ದೇಶಗಳ ಸಂಪೂರ್ಣ ಧನಸಹಾಯ ಹಾಗೂ ಮದ್ದು ಗುಂಡುಗಳ ರವಾನೆ ಮತ್ತು ಸಹಕಾರಗಳು ವೃದ್ಧಿಸತೊಡಗಿದ್ದವು. ಜೊತೆಗೆ, ಇಥಿಯೋಪಿಯಾದ ಪಶ್ಚಿಮದಲ್ಲಿ ಸೂಡಾನಿನ ಸೈನಿಕರೂ ಸಹ ಆ ಕಡೆ ಮೇರೆಯಿಂದ ಸಣ್ಣ ಸಣ್ಣ ಕಿರುಕುಳ ಕೊಡತೊಡಗಿದ್ದರು. [illegible] ಲಿಬಿಯಾ, ಸೂಡಾನ್ ಮತ್ತು ಎರಿಟ್ರಿಯಾದ ಮುಸಲ್ಮಾನ ನಾಯಕರುಗಳಿಗೆ, ಒಟ್ಟಿಗೆ ಇಥಿಯೋಪಿಯಾದ ಮೇಲೆ ಯುದ್ಧ ಹೂಡುವ ಸನ್ನಾಹದ ಬಗ್ಗೆ ಗೋಪ್ಯವಾದ ಒಪ್ಪಂದವೊಂದಾಗಿತ್ತೆಂದು ಪುಕಾರುಗಳೂ ಇದ್ದವು. ಮುಂದೆ ಸೂಡಾನ್ ತನ್ನ ಸೈನ್ಯವನ್ನು ಸಂಪೂರ್ಣವಾಗಿ ಹಿಂತೆಗೆದುಕೊಂಡಿದ್ದಲ್ಲದೆ, ತಮಗೂ ಮತ್ತು ಎರಿಟ್ರಿಯಾ ಹಾಗೂ ಸೋಮಾಲಿಗಳ ಕಾಳಗಕ್ಕೂ ಸಹಾನುಭೂತಿಯೊಂದನ್ನುಳಿದು ಮತ್ತಾವುದೇ ರೀತಿಯ ಸಂಬಂಧವೂ ಇಲ್ಲವೆಂಬಂತಿರುವ ಹೇಳಿಕೆಯೊಂದನ್ನು ಖಾರ್ಟೂಮಿನಲ್ಲಿ ಪ್ರಕಟಿಸಲಾಯಿತಂತೆ.

ಒಗಾಡೆನ್ ಎಂಬುದು ಸೋಮಾಲಿಯಾದ ಪಶ್ಚಿಮಕ್ಕೂ, ಇಥಿಯೋಪಿಯಾದ ಪೂರ್ವಕ್ಕೂ ಎರಡೂ ದೇಶಗಳ ನಡುವೆ ನೇಯ್ದಂತೆ, ಈಗಿನ ಸೋಮಾಲಿಯಾದ ಸುಮಾರು ಅರ್ಧದಷ್ಟು ಅಗಲವಾಗಿಯೂ, ಹೆಚ್ಚೂ ಕಮ್ಮಿ ಸೋಮಾಲಿಯಾದಷ್ಟೇ ಉದ್ದವಾಗಿಯೂ ಹರಡಿಕೊಂಡಿರುವ ಪ್ರಾಂತ್ಯ. ಸಂಪೂರ್ಣ ಮರುಭೂಮಿಯಾದ ಇದು, ಜಿಜಿಗಾ, ಹರಾರ್, ಢಗಾಬೂರ್, ಗೋಡೆ, ಕೆಬ್ರಿ ಡಹಾರ್, [illegible] ಮುಂತಾದ [illegible] ಊರುಗಳನ್ನೊಳಗೊಂಡಿದೆ. ಇವಲ್ಲದೆ ಸಣ್ಣ ಪುಟ್ಟ ಅನೇಕ ಹಳ್ಳಿಗಳೂ ಇವೆ. ಇಥಿಯೋಪಿಯಾದ ಎರಡನೇ ದೊಡ್ಡ ನಗರವಾದ ಡಿರಿಡಾವಾ ಒಗಾಡೆನ್ ಅಂಚಿನಲ್ಲೇ ಇಥಿಯೋಪಿಯಾದ ಕಡೆಗಿದೆ. ಡಿರಿಡಾವಾ ಇಥಿಯೋಪಿಯಾದ ಮತ್ತು ಕೈಗಾರಿಕಾ [illegible]. ದೊಡ್ಡ ದೊಡ್ಡ ಕಾರ್ಖಾನೆಗಳನ್ನು [illegible]. [illegible] ಜೊತೆ ತಮಗೇ [illegible] [illegible]ದ್ದರೂ, [illegible] ಇಥಿಯೋಪಿಯನ್ನರ ಸ್ವತ್ತೆಂಬುದನ್ನು [illegible] ಗಳೆಯುವುದಿಲ್ಲ. [illegible] ಅಂಚಿನಿಂದ ಕೇವಲ ಅರವತ್ತು [illegible] ದೂರದಲ್ಲಿದೆ. ಅಹ್ಮರ್ ಬೆಟ್ಟಗಳು ಜಿಜಿಗಾ [illegible] ಇರುವುದರಿಂದ, ಇಥಿಯೋಪಿಯನ್ನರ ದೃಷ್ಟಿಯಿಂದ ಜಿಜಿಗಾ [illegible] ಅತ್ಯಂತ [illegible] ಪಟ್ಟಣ; ಇಥಿಯೋಪಿಯಾ [illegible] ತಾಣವೂ ಆಗಿತ್ತು. ಅಲ್ಲದೆ, ಜಿಜಿಗಾ [illegible] ಹೀಗಿದೆ: ಬ್ರಿಟಿಷರು ಸೋಮಾಲಿಯಾದ [illegible] ಪ್ರಾಂತ್ಯವನ್ನಾಳುತ್ತಿದ್ದಾಗ [illegible] ಗಾದ ಎಲ್ಲ ರೀತಿಯ ಆಡಳಿತವೂ, ಆಗಿನ ಬ್ರಿಟಿಷರ ಸೋಮಾಲಿಯಾದ [illegible] ಯಾಗಿದ್ದ ಹಾರ್ಗೀಸಾದಿಂದಲೇ ನಡೆಯುತ್ತಿತ್ತಂತೆ. ಜಿಜಿಗಾ [illegible] ಹಾರ್ಗೀಸಾಕ್ಕೆ ಬರು[illegible]. [illegible] ಸೋಮಾಲಿಯಾದಿಂದ [illegible], ಜಿಜಿಗಾ ಸೋಮಾಲಿಗಳ ಕೈ

ತಪ್ಪಿ ಹೋಯಿತು. ಹರಾರ್, ಬೆಟ್ಟ ಗುಡ್ಡಗಳ ನಡುವಿರುವ, ಸೋಮಾಲಿಗಳಿಗೆ ಸುಲಭ ವಾಗಿ ಆಕ್ರಮಿಸಿಕೊಳ್ಳಲಾಗದಂತಹ ಇನ್ನೊಂದು ಸ್ಥಳ. ಗೋದೆಯೆಂಬುದು ಇಥಿಯೋಪಿಯನ್ನರ ಇನ್ನೊಂದು ಮುಖ್ಯ ಸೈನಿಕ ತಾಣ. ಇಲ್ಲಿ ಸೈನಿಕ ವಿಮಾನಗಳಿಳಿಯಲು ಮತ್ತು ಹಾರು ದಾಣಿಗೆಯೂ ಇತ್ತೆಂದು ಹೇಳಲಾಗಿದೆ.

ಮೊಗದಿಷು ಸರಕಾರ ಪಶ್ಚಿಮ ಸೋಮಾಲಿಯಾ ಬಿಡುಗಡೆ ದಳದ ಹೋರಾಟಕ್ಕೂ ತನಗೂ ಪ್ರತ್ಯಕ್ಷವಾಗಿ ಏನೂ ಸಂಬಂಧವಿಲ್ಲವೆಂಬ ತಟಸ್ಥ ನಿಲುವನ್ನೇ ಸಾರುತ್ತಾ ಬಂದಿತು. ಅಂತಾರಾಷ್ಟ್ರೀಯವಾಗಿ ಇದು ನೂರಕ್ಕೆ ನೂರು ಸುಳ್ಳೆಂದು ಡಂಗುರ ಸದ್ದು ಮಾಡಿದ್ದರೂ ಸಹ ಇದೇ ಕಾರಣಕ್ಕಾಗಿ ಪತ್ರಕರ್ತರನ್ನಾಗಲೀ ಬಾನುಲಿ ಬಾತ್ಮೀದಾರರನ್ನಾಗಲೀ ರಣರಂಗಕ್ಕೆ ಕರೆದೊಯ್ಯುವ ಯಾವುದೇ ಸೂಚನೆಯನ್ನೂ ಮೊಗದಿಷು ನೀಡಲಿಲ್ಲ. ಆದರೆ, ಇಂತಹ ಒಂದು ಪ್ರತ್ಯಕ್ಷ ವೀಕ್ಷಣೆಗೆ ಅಂತಾರಾಷ್ಟ್ರೀಯ ಸಹಾನುಭೂತಿ ಗಾಗಿಯೂ ಮತ್ತು ನಿಜವಾಗಿ ಕದನಕ್ಕೆ ಕಾಲ್ಕೆರೆದಿದ್ದವರು ತಾವಲ್ಲದಿದ್ದರಿಂದಲೂ, ಇಥಿಯೋಪಿಯಾಕ್ಕೆ ಅಗತ್ಯವಿದ್ದುದರಿಂದ, ಅಡಿಸ್ ಅಬಾಬಾ ಸರ್ಕಾರ ಅಂತಾರಾಷ್ಟ್ರೀಯ ವರದಿಗಾರರನ್ನು ಆಗಾಗ ಯುದ್ಧ ತಾಣಕ್ಕೆ ಕರೆದೊಯ್ದು, ಸೋಮಾಲಿ ಸೈನ್ಯವೇ ನೇರವಾಗಿ ಯುದ್ಧಕ್ಕೆ ಕಾರಣವೆಂದು ಸಾಬೀತು ಮಾಡುವುದಕ್ಕೆ ತಾವು ಹಾಳುಮಾಡಿದ್ದ ಸೋಮಾಲಿಗಳು ಉಪಯೋಗಿಸುತ್ತಿದ್ದ ರಶಿಯದ ತಯಾರಿಕೆಯ ಟ್ಯಾಂಕುಗಳು ಹಾಗೂ ವಶಪಡಿಸಿಕೊಂಡಿದ್ದ ಮದ್ದುಗುಂಡುಗಳ ಪ್ರದರ್ಶನವನ್ನೀಯುತ್ತಿತ್ತು.

ಒಗಾದನ್ನಿನ ಹೆಚ್ಚಿನ ಭಾಗ ಮರುಭೂಮಿಯಾದ್ದರಿಂದಲೂ, ಇಥಿಯೋಪಿಯಾ ಸೈನ್ಯ ಇಂತಹ ಭಾಗಗಳನ್ನು ರಕ್ಷಿಸಿದ್ದಿರಲಿಲ್ಲವಾಗಿಯೂ, ಯಾವುದೇ ತಡೆಯಿಲ್ಲದೆ ಈ ಭಾಗವನ್ನು ಸಲೀಸು ನಡೆದು ಬಂದ ಸೋಮಾಲೀ ಸೈನ್ಯದ ಪ್ರಾರಂಭದ ವಿಜಯೋತ್ಸಾಹ, ಸೋಮಾಲಿಗಳ ಮೇಲೆ ಬಹಳ ದಿನ ಉಳಿಯಲಿಲ್ಲ. ಇಷ್ಟಲ್ಲದೆ, ಈ ಯುದ್ಧಕ್ಕೆ ತಾನು ತಯಾರಾಗಿರಲಿಲ್ಲವಾದ ಕಾರಣ, ಪರಿಟ್ರಿಯದ ಒತ್ತಡವೂ ಬಲವಾಗಿಯೇ ಏರುತ್ತಿದ್ದುದರ ಕಾರಣ ಮತ್ತು ಮೆಂಗಿಸ್ತು ಮನೆಯಲ್ಲಿಯೇ ಒಮ್ಮತ, ನಿರಾಳಗಳಿಲ್ಲದ ಕಾರಣ, ಇಥಿಯೋಪಿಯನ್ನರ ಕೈಯನ್ನು ಒಗಾದನ್ ಬಿಟ್ಟಂತೆಯೇ ಎನ್ನುವ ಮಟ್ಟಿಗೆ ಸೋಮಾಲಿಗಳ ಉತ್ಸಾಹ ಏರತೊಡಗಿತ್ತು. ಮೆಂಗಿಸ್ತು ಸರಕಾರದಿಂದ ರೋಸಿಹೋಗಿದ್ದ ಒಗಾದನ್ ಸರಹದ್ದಿನಲ್ಲಿ ವಾಸವಾಗಿದ್ದ ಜನತೆಯ ಸಹಕಾರವೂ ಸೋಮಾಲಿಗಳಿಗೇ ಮೀಸಲಾಗಿದ್ದಂತಿತ್ತು. ಮೇಲಾಗಿ, ಅಡಿಸ್ ಅಬಾಬಾ ಸೈನ್ಯದಲ್ಲೂ ಸಹ ಆತ್ಮವಿಶ್ವಾಸವಿರಲಿಲ್ಲವೆಂಬಂತೆಯೇ ತೋರುತ್ತಿತ್ತು ಮತ್ತು ಮೆಂಗಿಸ್ತುರವನ್ನು ಹಾಗೂ ಅವರ ಸರಕಾರವನ್ನೂ ಪುರಸ್ಕರಿಸದ ಸೈನ್ಯದ ಕೆಲ ಭಾಗ, ಸೋಮಾಲಿಗಳಿಗೆ ಶರಣಾದಂತೆ ಕಾಲ್ತೆಗೆದದ್ದೂ ಉಂಟಂತೆ. ಉದಾಹರಣೆಗೆ, ಉತ್ತರ ಸೋಮಾಲಿಯಾದ ಹಾರ್ಗೀಸಾ ಪಟ್ಟಣದ ಹಾಗೂ ಸುತ್ತಮುತ್ತ ಆಗಾಗ ಇಥಿಯೋಪಿಯಾದ




“...ಸಿಕ್ಕಾಪಟ್ಟೆ ರಶ್ಶು...ಸಪ್ಲೆ ಮಾಡ್ಲಿಕ್ಕೆ ಆಗ್ತಿರ್ಲಿಲ್ಲ... ಆ ಮೇಲೆ ಬೋರ್ಡನ್ನ ಈ ರೀತಿ ತಿದ್ದಿದೆ. ಈಗ ಬಹಳ ಅರಾಮ್...!”

ವಿಮಾನ ದಾಳಿ ನಡೆಯುತ್ತಿತ್ತು; ಕೆಲವು ಹಳ್ಳಿಗಳ ಮೇಲೆ ಬಾಂಬುಗಳನ್ನು ಎಸೆದೂ ಹೋಗಿದ್ದರು. ಆದರೂ ಹಾರ್ಗೀಸಾ ಸುಲಭವಾಗಿರಲಿಲ್ಲ. ಕಾರಣ, ವಿಮಾನಗಳ ಸುಳಿವು ತಿಳಿದ ತಕ್ಷಣವೇ ಪ್ರತಿ ವೈಮಾನಿಕ ಗುಂಡು (ಅಂಟಿ ಏರ್ ಕ್ರಾಫ್ಟ್ ಗನ್)ಗಳ ಸುರಿಮಳೆ ಭೂಮಿಯನ್ನೆಲ್ಲಾ ನಡುಗಿಸುವಂತೆ ಗುಡುಗುತ್ತಿದ್ದವು. ಹೀಗಿದ್ದರೂ ಸಹ ಒಮ್ಮೆ ಪ್ರತಿ ವೈಮಾನಿಕ ಗುಂಡುಗಳ ಕಣ್ತಪ್ಪಿಸಿ–ಮುಖ್ಯವಾಗಿ ಸೋಮಾಲಿಗಳ ಸೋಮಾರಿತನ ಹಾಗೂ ರಕ್ತಗತವಾದ ಬೇಜವಾಬ್ದಾರಿಯಿಂದಾಗಿ ಅಥವಾ 'ಖಾತ್'* ಮಹಿಮೆಯಿಂದಾಗಿ ಇಥಿಯೋಪಿಯಾ ವಿಮಾನಗಳು ಹಾರ್ಗೀಸಾದ ವಿಮಾನ ನಿಲ್ದಾಣಕ್ಕೆ ಬಂದೂ ಸಹ, ಏನೇನೂ ಜಖಂ ಮಾಡದಂತೆ ತೆರಳಿದ್ದು ಅತ್ಯಂತ ಸೋಜಿಗ. ಆ ಮೇಲೆ ಆ ವಿಮಾನಗಳ ಚಾಲಕರೆಲ್ಲರೂ, ಮೆಂಗಿಸ್ತುರವರ ದೈತ್ಯ ಮುಷ್ಟಿಗೆ ಬಲಿಯಾದರೆಂಬ ಸುದ್ದಿಯೂ ಬಂದಿತು.

ಸೋಮಾಲಿಯಾ ಕಡೆಯೂ ಸಂಪೂರ್ಣ ಬಿಗಿಯಿತ್ತೆಂಬುದೂ ಸತ್ಯವಲ್ಲ. ಅನೇಕ, ಇಥಿಯೋಪಿಯಾದ ಗೂಢಚಾರರು ಸೋಮಾಲಿ ಸಾಮಾಜಿಕ ವ್ಯವಸ್ಥೆಯ ಪ್ರತಿ ಹಂತದಲ್ಲಿಯೂ ಬೆರೆತು ಹೋಗಿದ್ದರು. ಕೆಲವು ಸೋಮಾಲಿಗಳೂ ಈ ಗೂಢಚರ್ಯೆಯ ಕೆಲಸಕ್ಕಾಗಿ ಇಥಿಯೋಪಿಯಾ ಸರಕಾರದಿಂದ ಬಲವಾದ ಲಂಚ ಪಡೆಯುತ್ತಿದ್ದರೆಂಬುದೂ ವಿದಿತವಾಗುತ್ತಾ ಬಂದಿತ್ತು. ಆಶ್ಚರ್ಯವೆಂದರೆ ಸೋಮಾಲಿ ಪಡೆಯಿಂದ ಮಿಗ್ ವಿಮಾನಗಳು ಶತ್ರು ದೇಶದತ್ತ ಹಾರಿದ ಕೆಲವೇ ಕ್ಷಣಗಳಲ್ಲೇ ಅಲ್ಲಿನ ಫೈಟರುಗಳು ಹಾರ್ಗೀಸಾ ಸುತ್ತ ಮುತ್ತ ಧಾಳಿ ನಡೆಸುತ್ತಿದ್ದುದು. ಕ್ರಮೇಣ ಅನೇಕ ಗೂಢಚಾರರನ್ನು ಬಂಧಿಸಲಾಯಿತು. ಇವರುಗಳಲ್ಲಿ, ಬಹಳ ದಿನಗಳಿಂದ ಹಾರ್ಗೀಸಾದಲ್ಲಿದ್ದ ಒಬ್ಬ ಹುಚ್ಚನೂ ಸಹ ಇದ್ದ; ಈ ಹುಚ್ಚನಿಂದ ರೇಡಿಯೋ ಟ್ರಾನ್ಸ್‌ಮಿಟರೊಂದನ್ನು ವಶಪಡಿಸಿಕೊಳ್ಳಲಾಯಿತಂತೆ. ಮತ್ತು. ಹಾರ್ಗೀಸಾ ವಿಮಾನ ನಿಲ್ದಾಣದ ಸಂಪರ್ಕ ಗೋಪುರ (ಕಮ್ಯೂನಿಕೇಷನ್ ಟವರ್) ಸಂಪರ್ಕ ಸಾಧನದಲ್ಲಿ ಕೆಲಸಮಾಡುತ್ತಿದ್ದವನೇ ಗೂಢಚಾರನಾಗಿದ್ದನೆಂಬುದೂ ಮತ್ತು ಅವನನ್ನು ಬಂಧಿಸಲಾಯಿತೆಂಬುದೂ ವದಂತಿ.

ಯುದ್ಧ ಸೋಮಾಲಿಗಳ ದೃಷ್ಟಿಯಲ್ಲಿ ಭರಾಟೆಯಿಂದಲೇ ಸಾಗಿತ್ತು. ಕ್ರಮೇಣ ಢಗಾಬೂರ್, ಗೋದೆ ಮುಂತಾದುವುಗಳನ್ನು ಇಥಿಯೋಪಿಯನ್ನರು ಬಿಟ್ಟು ಕಾಲ್ತೆಗೆಯಲೇಬೇಕಾದುದಂತೂ ಸತ್ಯ. ಈ ವಿಜಯದಿಂದ ಸೋಮಾಲಿಗಳಿಗೆ ಎಲ್ಲಿಲ್ಲದ ಹುಮ್ಮಸ್ಸು ಮತ್ತು ಕೆಚ್ಚು ಬರತೊಡಗಿದ್ದವು. ಸಾವು ನೋವುಗಳೂ ಬಲವಾಗಿಯೇ ಆಗುತ್ತಿದ್ದರೂ ಮೊಗದಿಷು ಅಥವಾ ಅಡಿಸ್ ಮಿಲಿಟರಿ ಸರಕಾರಗಳು ತಮ್ಮ ತಮ್ಮ ನಷ್ಟಗಳ ಲೆಕ್ಕವನ್ನು ಎಂದೂ ಕೊಡಲಿಲ್ಲ. ಬದಲಿಗೆ, ಪಶ್ಚಿಮ ಸೋಮಾಲಿ, ಬಿಡುಗಡೆ ದಳದ ತುತ್ತೂರಿಯೋ ಎಂಬಂತೆ ನಟಿಸುತ್ತಿದ್ದ ಮೊಗದಿಷುವಿನ 'ಸೋಮಾಲಿಯಾ ಧ್ವನಿ' ಹಾಗೂ ಅಡಿಸ್ಸಿನ 'ಇಥಿಯೋಪಿಯಾದ ಕ್ರಾಂತಿ ಧ್ವನಿ'ಗಳು ಪರಸ್ಪರ ಲೆಕ್ಕಗಳನ್ನು ಹಿಗ್ಗಿಸಿ ಹರಿಸತೊಡಗುತ್ತಿದ್ದುದರಿಂದ, ಸಾವು ನೋವು, ನಷ್ಟಗಳ ಅಂದಾಜು ಅಲ್ಪ ಸ್ವಲ್ಪ ಸತ್ಯಾಂಶದಿಂದಲಾದರೂ ತಿಳಿಯುತ್ತಿತ್ತು. ಮೇಲಾಗಿ ಬಿ. ಬಿ. ಸಿ. ವರದಿಯ ಪ್ರಕಾರ, ಒಗಾದನ್ ಯುದ್ಧದಿಂದ ಸೋಮಾಲಿಗಳಿಗೆ ಒಂದು ದಿನಕ್ಕೆ ಒಂದು ಮಿಲಿಯನ್ ಸ್ಟರ್ಲಿಂಗ್ ಪೌಂಡುಗಳು (ಒಂದೂವರೆ ಕೋಟಿ ರೂಪಾಯಿ) ವ್ಯಯವಾಗುತ್ತಿತ್ತಂತೆ! ಸೋಮಾಲಿಯಾದಂತಹ ಬಡ ಹಾಗೂ

---

* ಖಾತ್ ಎಂಬುದು ಒಂದು ರೀತಿಯ ಮತ್ತು ಬರಿಸುವ ಸೊಪ್ಪು, ಪೂರ್ವ ಆಫ್ರಿಕದ ಎಲ್ಲ ದೇಶಗಳಲ್ಲೂ ಇದರ ಉಪಯೋಗ ವಿಪುಲವಾಗಿದೆ. ಸೊಮಾಲಿಯಾದ ಉತ್ತರ ಪ್ರಾಂತದ ಜನರಂತೂ ಖಾತ್‌ನ ದಾಸರೇ ಸರಿ. ಖಾತ್ ಸೊಪ್ಪನ್ನು ಅಗಿಯುತ್ತಾ, ರಸ ನುಂಗುವದು ಜೊತೆಗೆ ಕೋಕಾ ಕುಡಿದು ಧೂಮಪಾನ ಮಾಡುವದು, ನಮ್ಮಲ್ಲಿಯ 'ಗುಂಡು' ಪಾರ್ಟಿಗಳಂತೆ, ಇಲ್ಲಿ ಪ್ರತಿ ದಿನವೂ ಸಾಮಾನ್ಯ. ಆದರೆ ಗುಂಡಿನ ಮತ್ತು ಮೂಡಿಸುವಷ್ಟು ಅನಾಹುತಗಳನ್ನು ಖಾತ್‌ನ ಮತ್ತು ಮೂಡಿಸದಿಲ್ಲದಿರುವುದು ವಿಶೇಷ.

ಕನಿಷ್ಠ ಜನಸಂಖ್ಯೆಯುಳ್ಳ (ಸುಮಾರು ಮೂವತ್ತೈದು ಲಕ್ಷ) ದೇಶಕ್ಕೆ ಇದು ಸಾಧುವೆ? ಈ ದೃಷ್ಟಿಯಲ್ಲಿ ಯಾವನೇ ಒಬ್ಬ ಸೋಮಾಲಿಯೂ ಚಿಂತಿಸಲು ಬಹುಶಃ ತಯಾರಿರಲಿಲ್ಲ. ಸೈನಿಕರ ಸಂಖ್ಯೆ ತೆಳ್ಳಗಾದಂತೆ, ಒಲ್ಲದ ಹಾಗೂ ಯುದ್ಧದ ವರ್ಣಮಾಲೆಯನ್ನು ತಿಳಿಯದ ತರುಣರನ್ನೆಲ್ಲಾ ಬಲಾತ್ಕಾರದಿಂದ ಸಜ್ಜುಗೊಳಿಸಲಾಗುತ್ತಿತ್ತು. ಮುಖ್ಯವಾಗಿ ಅಧ್ಯಕ್ಷ ಬರ್ರೆಯವರ ಪಂಗಡದವರಲ್ಲದವರೇ ಎಂಬುದು ಎಲ್ಲರಿಗೂ ಗೊತ್ತಿತ್ತು. ಅಧ್ಯಕ್ಷರ ಕಡೆಯವರನ್ನೆಲ್ಲಾ ಯುದ್ಧಕಾಲದಲ್ಲಿ ವೇತನಗಳ ಮೇಲೆ ವಿದೇಶಗಳಿಗೆ ಕಳಿಸಲಾಗುತ್ತಿತ್ತಂತೆ.

ಅಡಿಸ್ ಅಬಾಬಾದಲ್ಲಿಯೂ ಇದಕ್ಕೆ ಹೊರತಾದ ಪರಿಸ್ಥಿತಿಯಿರಲಿಲ್ಲ. ಮೆಂಗಿಸ್ತುರವರ ಘನ ಸರಕಾರದ ವಿರೋಧಿಗಳನ್ನೆಲ್ಲಾ–ವಯಸ್ಸು ಲೆಕ್ಕವಿಲ್ಲ– ಹಿಡಿದು ಮೂರು ಮೂರು ದಿನಗಳ [illegible] ಯುದ್ಧರಂಗಕ್ಕೆ ನೂಕಲಾಗುತ್ತಿತ್ತಂತೆ. ಹದು ರಾಳಿಗಳನ್ನು ಸದೆ ಬಡಿಯಲು ಇಂತಹ ದೇಶಪ್ರೇಮವನ್ನೂ 'ಹಾಗೂ ವೀರ ಸ್ವರ್ಗವನ್ನೂ ದಯಪಾಲಿಸುವುದಕ್ಕಿಂತ ಬೇರೆ ಅಸ್ತ್ರ ಬೇಕೆ?

ವಿಜಯೋತ್ಸಾಹದ ಹಮ್ಮಿನಿಂದ ವಿವೇಚನೆಯ ಚಿಂತನೆಯಿಲ್ಲದೆ ಸೋಮಾಲಿ ಸೈನ್ಯ ಡಿರಿಡಾವಾದಂತಹದೊಡ್ಡ ಊರನ್ನು ಸಹ– [illegible] ಧಾವಿಸಿತು. ಬಹುಶ. ಅಲ್ಲಿಯೂ [illegible] ಮರುಭೂಮಿಯಲ್ಲಿದ್ದಂತೆ ಕಾದಿಲ್ಲ [illegible] ಬಗೆದಿದ್ದರಬೇಕು. ನ್ಯಾಯವಾಗಿಯೇ ಸೋಮಾಲಿಗಳ ಎಣಿಕೆ ತಪ್ಪಾಗಿತ್ತು. [illegible] ವೇಗದಲ್ಲಿಯೇ ಹಿಂದೋಡಲೂ ಬೇಕಾಯಿತು. ಡಿರಿಡಾವಾ ಆಕ್ರಮಣದ ಪ್ರಯತ್ನ ಸೋಮಾಲಿ ಸೈನ್ಯದ ಬೆನ್ನಿನ ನಷ್ಟಕ್ಕೂ ಕಾರಣವಾಯಿತು. ಮತ್ತೂ ಮುಂದೆಂದೂ ಡಿರಿಡಾವಾಕ್ಕಾಗಿ ಪ್ರಯತ್ನಿಸಲೂ ಅವರಿಗಾಗಲಿಲ್ಲ.

ಡಿರಿಡಾವಾದಿಂದ ಹಿಮ್ಮೆಟ್ಟಿದ ನಂತರ ಸೋಮಾಲಿಗಳು ಸುಧಾರಿಸಿಕೊಳ್ಳಲೇ ಬೇಕಾಯಿತು. ಕ್ರಮೇಣ ಶಕ್ತಿಯನ್ನೂ, ವಿಶ್ವಾಸವನ್ನೂ, ವೃದ್ಧಿಸಿಕೊಂಡು ಜಿಜಿಗಾ ಮೇಲೆ ಎರಗಿದರು. ಜಿಜಿಗಾದಲ್ಲಿಯೂ ಸಹ ಮಾವಿನ ಕಾಯಿ ಕೈಗೆಟಕುವಷ್ಟು ಸುಲಭವಾಗಿರಲಿಲ್ಲ. ಸೋಮಾಲಿ ಸೈನ್ಯದ ನಿಜವಾದ ಶಕ್ತಿ ಪ್ರದರ್ಶನ ಜಿಜಿಗಾ ಸುತ್ತಮುತ್ತಲೇ ಆದದ್ದು ಮೇಲಾಗಿ ಅಹ್ಮರ್ ಬೆಟ್ಟ ಗುಡ್ಡಗಳ ಗುಪ್ತ ತಾಣಗಳಲ್ಲಿ ಇಥಿಯೋಪಿಯನ್ನರು ಚೆನ್ನಾಗಿ ಪಳಗಿಯೂ, ಪ್ರಬಲವಾಗಿಯೂ ಇದ್ದರು. ಆದ್ದರಿಂದ ಜಿಜಿಗಾಕ್ಕಾಗಿ ತಿಂಗಳುಗಟ್ಟಲೆ ಸೋಮಾಲಿಗಳು ಪ್ರಯಾಸಪಡಬೇಕಾಯಿತು. ಕೊನೆಗೂ ಸೋಮಾಲಿಗಳ ಪ್ರಯತ್ನ ಯಶಸ್ವಿಯಾಯಿತು.

ಕದನ ಸಾಗಿಯೇ ಇತ್ತು. ಇತ್ತೀಚೆ. [illegible] ಶಾಂತಿ ಸಾಧನೆಯ ಪ್ರಯತ್ನ ಅನೇಕ ದೇಶಗಳಿಂದ ವಿಫಲವಾದರೂ ನಡೆಯುತ್ತಲೇ ಇತ್ತು. ಮೇಲಾಗಿ ಆಫ್ರರಲ್ಲಿ ಮೆಂಗಿಸ್ತುರವರ ಉಪದೇಶಕರಾಗಿಯೂ, ಬಲಗೈಯಾಗಿಯೂ ಪರಿವರ್ತನಗೊಂಡಿದ್ದ ರಶಿಯನ್ನರಿಗೆ ಸೋಮಾಲಿಗಳಿಂದ ಕಜ್ಜಿ ಹತ್ತಿದ ಶುನಕಕ್ಕೆ ದೊರೆಯಬಹುದಾದಂತಹ ಪುರಸ್ಕಾರಗಳೂ ಪ್ರಾರಂಭವಾಗಿ ಹೋಗಿದ್ದರಿಂದ, ಈ ಶುನಕಕ್ಕೆ ಯಾವ ಹೊತ್ತೂ ಸೋಮಾಲಿ ಬಾಗಿಲು ಮುಚ್ಚಿಕೊಳ್ಳುವ ಸೂಚನೆಗಳಿದ್ದುದರಿಂದ. ಸಮಯಸಾಧಕ ರಶಿಯನ್ನರ ಪ್ರತ್ಯಕ್ಷ ಸಹಾನುಭೂತಿ ತಮ್ಮ ಹೊಸಗೆಳೆಯರತ್ತ ಘನಗೊಳ್ಳುತ್ತಿದ್ದುದು ಸಹಜವೂ ಮತ್ತು ಸೋಮಾಲಿಗಳಿಗೆ ವಿಪತ್ತಿನ ಸಂದೇಶವೂ ಆಗಿತ್ತು. ಇಷ್ಟಾದರೂ ಸೋಮಾಲಿಗಳು ಜಗ್ಗಲಿಲ್ಲ! [illegible] ಹಾಗೂ [illegible] [illegible] ಯಾವುದೇ [illegible]. [illegible] ಹೂಡಿ [illegible] ಸಹಜವೇ ಅಲ್ಲವೆ. ಹೀಗಾಗಿ ಅನೇಕ ಪ್ರಯತ್ನದ ಶಾಂತಿ [illegible] ಕೇವಲ [illegible] ಸಹಜ. [illegible] [illegible] ಶಾಂತಿ [illegible] [illegible] ತಿಂದು [illegible]. ನೈಜೀರಿಯಾದ ಅಧ್ಯಕ್ಷ ಬಬ–ಸಾಂಜೋವರ [illegible] [illegible]. ಆಫ್ರಿಕ [illegible] ಸಂಸ್ಥೆಯ ಆಗಿನ ಅಧ್ಯಕ್ಷರಾಗಿದ್ದ ಗಬೋನ್ ದೇಶದ ಅಧ್ಯಕ್ಷ ಬಾಂಗೋರವರ ಮಧ್ಯಸ್ಥಿಕೆ ಹಾಗೂ ಸಭೆಗಳೆಲ್ಲ ಕೇವಲ ಕಾಗದ–ಮಸಿಗಳಿಗಿಂತ ಹೆಚ್ಚಾದ ಪರಿ

ಣಾಮವನ್ನೇನೂ ಬೀರಲಿಲ್ಲ. ಅಮೆರಿಕಾ ಹಾಗೂ ಇತರ ಪಶ್ಚಿಮ ದೇಶಗಳ ಕರೆಗೂ ಇದೇ ವಿಫಲತೆ. ಅಮೇರಿಕದ ಅಧ್ಯಕ್ಷ ಜಿಮ್ಮಿ ಕಾರ್ಟರ್ ಕೊಟ್ಟ ಒಂದು ಕರೆಗೆ ಉತ್ತರವಾಗಿ ಅಡಿಸ್ ಅಬಾಬಾ ಹೀಗೆ ಹೇಳಿತ್ತು; ಸೋಮಾಲಿಯಾ ಇಥಿಯೋಪಿಯಾಗಳ ನಡುವೆ ಚಿರಶಾಂತಿಯಾಗಬೇಕು; ಮತ್ತು ಹಾಗಾಗಬೇಕಾದರೆ ಸೋಮಾಲಿಗಳು ಮೂರು ಶರತ್ತುಗಳನ್ನು ಒಪ್ಪಬೇಕು: ಒಂದನೆಯದಾಗಿ, ಸೋಮಾಲಿಯಾವು ಅಧಿಕೃತವಾಗಿ ಇಥಿಯೋಪಿಯಾ, ಕೆನ್ಯಾ, ಹಾಗೂ ಜಿಬೂತಿಗಳಲ್ಲಿರುವ ತಮ್ಮದೆಂಬ ಭಾಗಗಳನ್ನು ಇನ್ನು ಮರೆತಿದ್ದೇವೆ ಎಂದು ಪ್ರಕಟಿಸಬೇಕು; ಎರಡನೆಯದಾಗಿ, ಸೋಮಾಲಿಯಾವು ಇನ್ನೆಂದೂ ಇಥಿಯೋಪಿಯಾದ ಆಂತರಿಕ ವ್ಯವಹಾರಗಳಲ್ಲಿ ತಲೆಹಾಕುವದಿಲ್ಲವೆಂದು ಕರಾರು ಮಾಡಿಕೊಳ್ಳಬೇಕು; ಮೂರನೆಯದಾಗಿ, ಸೋಮಾಲಿಯಾವು ಆಫ್ರಿಕ ಒಕ್ಕೂಟ ಸಂಸ್ಥೆಯ ಮತ್ತು ವಿಶ್ವಸಂಸ್ಥೆಯ ಮುಂದೆ, ಇಥಿಯೋಪಿಯಾ ಹಾಗೂ ಸೋಮಾಲಿಯಾಗಳ ನಡುವಿನ ಅಂತಾರಾಷ್ಟ್ರೀಯ ಮೇರೆಯನ್ನು ಒಪ್ಪುತ್ತೇವೆ ಹಾಗೂ ಇಥಿಯೋಪಿಯಾ ಪ್ರಾಂತ್ಯದ ಸ್ಥಾನ ಮತ್ತು ಹಕ್ಕನ್ನು ಪುರಸ್ಕರಿಸಿದ್ದೇವೆ ಎಂದು ಪ್ರಮಾಣ ಮಾಡಬೇಕು. ಇದಾವುದಕ್ಕೂ ಸೋಮಾಲಿಗಳು ತಯಾರಿರಲಿಲ್ಲವೆಂದು ಬೇರೆ ಹೇಳಬೇಕಾಗಿಲ್ಲ.

ಜಿಜಿಗಾ ಗೆದ್ದ ನಂತರ ಸೋಮಾಲಿಗಳು ಇನ್ನೇನು ಒಗಾಡನ್ ತಮ್ಮದೇ ಆಗಿಹೋಯಿತೆಂಬ ಬಲವಾದ ನಂಬಿಕೆಯ ಹೊರೆ ಹೊತ್ತಿದ್ದರು. ಅನೇಕ ಸೋಮಾಲಿಗಳು ಮುಖ್ಯವಾಗಿ ಆಡಳಿತದ ಚುಕ್ಕಾಣಿ ಹಿಡಿದಿದ್ದವರು, ಜಿಜಿಗಾ ಹಿಡಿದುಕೊಂಡ ಹೊಸದರಲ್ಲೇ ಅಲ್ಲಿಗೆ ದಾಳಿ ಮಾಡಿ ಕೈಗೆ ಸಿಕ್ಕದಷ್ಟನ್ನು ದೋಚಿಕೊಂಡು ಬಂದರು. ಬಹುಶಃ ಹೆಚ್ಚು ದಿನ ಜಿಜಿಗಾ ತಮ್ಮ ಕೈಯಲ್ಲಿ ಉಳಿಯುವುದಿಲ್ಲವೆಂಬ ಅಂತರ್ದರ್ಶನ ಇವರಿಗೆಲ್ಲಾ, ಆಗಿತ್ತೆಂದು ತೋರುತ್ತದೆ ಮೇಲಾಗಿ. ಆಕ್ರಮಿಸಿಕೊಂಡ ತ್ವರೆಯಲ್ಲೇ, ಜಿಜಿಗಾಕ್ಕೆ ಕೆಲವು ಅಧಿಕಾರಿಗಳನ್ನು ಕಳಿಸಿ, ಹಾರ್ಗಿಸಾದ ಮೂಲಕ ಆಡಳಿತ ನಡೆಸತೊಡಗಿದರು. ಇಷ್ಟಾಗಿದ್ದರೂ, ಅಧ್ಯಕ್ಷ ಸೈಯದ್ ಬರ್ರೆಯವರು ಒಗಾಡನ್ ಪ್ರಾಂತ್ಯದ ಕೆಲವು ಮುಖ್ಯ ಸ್ಥಳಗಳಿಗೆ ಭೇಟಿ ಕೊಟ್ಟು, ಅಲ್ಲಿಯ ಕೆಲವು ಮುಖ್ಯರನ್ನು ಸಂಧಿಸಿ ಮಾತನಾಡಿದ್ದರೆಂದೂ, ಆಗ ಆ ಪ್ರಮುಖರು, ಪಶ್ಚಿಮ ಸೋಮಾಲಿಯಾದ ಬಿಡುಗಡೆಯ ನಂತರ, ತಮಗೆ ಸೋಮಾಲಿಯಾ ಗಣರಾಜ್ಯಕ್ಕೆ ಸೇರಿಕೊಳ್ಳುವ ಇಚ್ಛೆಯಿಲ್ಲವೆಂತಲೂ, ಬದಲಿಗೆ ಸ್ವತಂತ್ರವಾಗಿರಲು ಬಯಸುವರೆಂದೂ ತಿಳಿಸಿ ಅಧ್ಯಕ್ಷರ ಹಾಗೂ ಸೋಮಾಲಿಗಳ ಮಹದಾಶೆಗೆ ಪ್ರಾರಂಭದಲ್ಲೇ ತಣ್ಣೀರೆರಚಿದ್ದರೆಂಬ ಸುದ್ದಿಯೂ ಬಂದಿತ್ತು. ಎಂಥ ಬಯಕೆಗೆ ಎಂಥ ಅಣಕದ ಪ್ರತಿಫಲ!

ಜಿಜಿಗಾ ಗೆಲ್ಲುವ ಹೊತ್ತಿಗೆ ರಷಿಯನ್ನರಿಂದ ಸರಬರಾಜಾಗಿದ್ದ ಮದ್ದು ಗುಂಡುಗಳ ಭಂಡಾರ ಬರಿದಾಗಿಹೋಗಿತ್ತು. ಬರ್ರೆಯವರಿಗೆ ಕೈ ಕೈ ಹಿಸುಕಿಕೊಳ್ಳುವ ಸಂದರ್ಭ; ಮತ್ತು ಅವರ ಆರ್ತಕೋರಿಕೆಗೆ ಅಮೇರಿಕ, ಬ್ರಿಟನ್, ಫ್ರಾನ್ಸ್‌ಗಳ ಪರೋಕ್ಷವಾದ ನಕಾರ, ಕೊನೆಗೆ ಸೌದಿ ಅರೇಬಿಯಾ ಮತ್ತು ಇತರ ಮುಸಲ್ಮಾನ ದೇಶಗಳಿಗೆ ಬರ್ರೆಯವರು ಸಂತಪ್ತರಾಗಿ ಭೇಟಿ ನೀಡತೊಡಗಿದಾಗ, ಸೌದಿ ರಾಜರಿಂದ ಬಂದ, ರಶಿಯನ್ನರನ್ನು ಸಂಪೂರ್ಣವಾಗಿ ಹೊರಗಟ್ಟುವ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸಬೇಕಾಗಿ ಬಂದು, ೧೯೭೭ರ ನವಂಬರ್ ತಿಂಗಳಲ್ಲಿ ಬರ್ರೆಯವರು, ಅನೇಕ ವರ್ಷ ತಮ್ಮ ಸ್ಥಾನವನ್ನು ಬುನಾದಿಯೋಪಾದಿಯಲ್ಲಿ ಕಾಪಾಡಿದ್ದ ತಮ್ಮ ಕೆಂಪು ಗೆಳೆಯರತ್ತ ಕಠಿಣ ಮುಖರಾಗಬೇಕಾಯಿತು. ಅಂತೂ ರಶಿಯನ್ನರು ಸೋಮಾಲಿಯಾ ಬಿಟ್ಟು ಹೋದರು. ಆದರೆ ಸುಮ್ಮನೆ ಹೋಗಲಿಲ್ಲ. ಬರ್ಬರಾ (ಹಾರ್ಗೀಸಾಕ್ಕೆ ಸುಮಾರು ಎಂಭತ್ತು ಮೈಲಿ ದೂರದಲ್ಲಿರುವ ಇನ್ನೊಂದು ಪಟ್ಟಣ ಹಾಗೂ ಬಂದರದಲ್ಲಿ ಕೆಂಪು ಸಮುದ್ರದ ದಡದಲ್ಲಿ ಆಸೆಯಿಂದ ಅಗಾಧ ಹಣ ವೆಚ್ಚಮಾಡಿ ನಿರ್ಮಿಸಿಕೊಂಡಿದ್ದ ಸೈನಿಕ ತಾಣ (ಮಿಲಿಟರಿ ಬೇಸ್) ವನ್ನೇ ಜೂಜಾಡಿ ಹೋಗುತ್ತಿದ್ದ ರಶಿಯನ್ನರು ಸುಮ್ಮನೆಯಾದರೂ ಹೇಗೆ ಹೋದಾರು? ಅಡಿಸ್ ಅಸ್ತ್ರದ ಮೂಲಕ ಸೇಡುತೀರಿಸಿಕೊಳ್ಳುವ ಹಾಗೂ, ಪ್ರಬಲವಾದ ಶಕ್ತಿಯೊಂದರೊಡನೆ ಎದುರು ಬಿದ್ದರೆ ಬರಬಹುದಾದ ಫಲಾಫಲದ ಪಾಠವನ್ನು ಸೋಮಾಲಿ

ಗಳಿಗೆ ಕಲಿಸಿಕೊಡುವ ಪಣ ತೊಟ್ಟೇ ನಡೆದರು.

**ಪರಿಣಾಮ** ಬರ್‍ರೆಯವರು ನಿರೀಕ್ಷಿಸಿದುದಕ್ಕಿಂತ ಕೆಟ್ಟದಾಗಿಯೇ ತಿರುಗಿತು. ಆಗ, ತಾವು ಲೆಕ್ಕ ಹಾಕಿಕೊಂಡಿದ್ದ ಯಾವುದೇ ಸ್ನೇಹ ಹಸ್ತಗಳೂ ಸಹಾಯಕ್ಕೆ ಮುದಾಗಲಿಲ್ಲ. ಬುದ್ಧಿಭ್ರಮಣೆಯಾದಂತವರಾಗಿ ಬರ್‍ರೆಯವರು "ಒಗಾದನ್ನಿನಲ್ಲಿ ವಿದೇಶೀ ಕೈವಾಡ ಮತ್ತೊಂದು ವಿಶ್ವಸಮರಕ್ಕೆ ನಾಂದಿಯಾದೀತು" ಎಂಬ ನರಿ ಕೂಗಿಗೆ ತೊಡಗಿದರು. ಅದು ಯಾರಿಗೂ ಕೇಳಿಸಲೇ ಇಲ್ಲ, ಬದಲಿಗೆ, ಶತ್ರುದೇಶದ ಕಡೆಯಿಂದ ನಿರೀಕ್ಷೆ ಮೀರಿದ ದಾಳಿಯೇ ಪ್ರಾರಂಭವಾಗಿ ಹೋಯಿತು. ಎಂತಹ ವೈಪರೀತ್ಯ! ಕೊನೆಗೆ, ಸೋಮಾಲಿ ಸೈನ್ಯ ಪ್ರಥಮಬಾರಿಗೆ, ನೀತಿಗೆಟ್ಟ ವಿದೇಶೀ ಆಕ್ರಮಣವನ್ನು ತಡೆಯುಲೋಸುಗ ಮತ್ತು ತಾಯ್ನಾಡಿನ ರಕ್ಷಣೆಗೋಸ್ಕರ ಹೋರಾಡುತ್ತಿದೆ, ಎಂದು ಬರ್‍ರೆಯವರು ಅಧಿಕೃತವಾಗಿ ವಿಶ್ವಕ್ಕೆ ಪ್ರಕಟಿಸಿದರು. ದೇಶದಲ್ಲಿ ತುರ್ತು ಪರಿಸ್ಥಿತಿಯನ್ನೂ ಘೋಷಿಸಿದರು.

ಮೆಂಗಿಸ್ತುರವರಿಗೆ ರಶಿಯ–ಕ್ಯೂಬಾಗಳ ಹೊಸ ರೆಕ್ಕೆಪುಕ್ಕಗಳು ಬಂದುವು. ಒಗಾದನ್ ಸಮರ ಅಜಗಜಾಂತರಕ್ಕೊಂದು ನಿದರ್ಶನವಾಗುವಂತೆ ಚರಿತ್ರೆ ಹೊಕ್ಕಿತು.

ರಶಿಯದ ಕಡೆಗೆ ಓಗೊಟ್ಟು ಕ್ಯೂಬಾ ಸರ್ವಾಧಿಕಾರಿ ಫಿಡಲ್ ಕ್ಯಾಸ್ಟ್ರೋ ಹನ್ನೆರಡು ಸಾವಿರ ಸೈನಿಕರನ್ನೂ, ಅನೇಕ ವೈದ್ಯರು ಹಾಗೂ ದಾದಿಯರನ್ನೂ ಅಡಿಸ್ಸಿಗೆ ಪಾರ್ಸೆಲ್ ಮಾಡಿದ. ಜೊತೆಯಲ್ಲಿ ಸುಮಾರು ನಲವತ್ತು ತುಂಬುತ್ತಿದ್ದ ತನ್ನ ಜನರಲ್ ಒಕೋವಾನನ್ನೆ ಅಜಹತ್ಯೆಗಾಗಿ ಸನ್ನದ್ಧಮಾಡಿ ಕಳಿಸಿದ. ರಶಿಯದಿಂದಲೂ ಸಹ, ಯಾವನೋ ಒಬ್ಬ ವೆಂಕ–ನಾಣಿ–ಸೀನನನ್ನು ಕಳಿಸಿ ಕೈ ತೊಳೆದುಕೊಳ್ಳುವ ಬದಲು, ಹಪ್ಪು‌ಬ್ಬಿ ಕಳೆದು ಪಳಗಿದ್ದ ಜನರಲ್ ವಾಸಿಲಿ ಇವಾನೋವಿಚ್ ಪೆಟ್ರೋವ್(೧೯೭೬ ರಿಂದ ಸೋವಿಯತ್ ಭೂದಳದ ಪ್ರಥಮ ಉಪಕಮಾಂಡರ್ ಮತ್ತು ಮುಂದೆ ಜನರಲ್ ಇವಾನ್ ಪಾವ್ಲೋಸ್ಕಿಯ ಕಮಾಂಡರ್ ಇನ್ ಚೀಫ್ ಸ್ಥಾನಕ್ಕೆ ಗ್ಯಾರಂಟಿಯಾಗಿದ್ದ ವ್ಯಕ್ತಿ)ನಂತಹ ಒಬ್ಬ ಮಹಾನ್ ಸಮರ ತಂತ್ರಜ್ಞನನ್ನೇ ಕಳಿಸಿದರು. ಮೊದಲು ರಶಿಯದ ಇನ್ನೊಂದು ಹಗೆಯನ್ನು ಬಹುಶಃ ಯಾವ ಸೋಮಾಲಿಯೂ ನಾಯಕರುಗಳೂ ಸಹ ಎಣಿಸಿರಲಿಕ್ಕಿಲ್ಲ.

ಪೆಟ್ರೋವ್ ಆತುರಮಾಡಲಿಲ್ಲ. ಬಹಳ ಚಾತುರ್ಯದಿಂದ ಸೋಮಾಲಿ ಸೈನ್ಯಕ್ಕೆ ಬಲೆ ಹೆಣೆಯ ತೊಡಗಿದ. ಅದರ ಮೊದಲನೇ ಕಂತಾಗಿ, ಇಥಿಯೋಪಿಯಾ ಸೈನ್ಯವನ್ನೇ ಮುಂದಿಟ್ಟುಕೊಂಡು ಜಿಜಿಗಾ ಮೇಲೆ ಕೇವಲ ಒಂದೆರಡು ಬಾಂಬುಗಳನ್ನಷ್ಟೇ ಎಸೆಯುವಂತೆ ಮಾಡಿದ. ಇದರಿಂದಾಗಿ ಆಪಕಿತಕ್ಕೆಂದು ಹೋಗಿ ಜಿಜಿಗಾದಲ್ಲಿ ತಂಗಿದ್ದ ಕೆಲವು ಸೋಮಾಲಿ ನಾಗರಿಕರ ಹತ್ಯೆಯಾಯಿತು. ಒಂದು ಬಾಂಬು ಸೋಮಾಲಿಗಳು ಆಗಲೇ ಕೆಲಸಕ್ಕೆ ಪ್ರಾರಂಭಿಸಿದ್ದ ಒಂದು ಆಸ್ಪತ್ರೆಯ ಮೇಲೆರಗಿ, ಅಲ್ಲಿದ್ದ ವೈದ್ಯಕೀಯ ಸಿಬ್ಬಂದಿಯನ್ನೂ,




"ಉಪವಾಸ ಸತ್ಯಾಗ್ರಹಕ್ಕೆ ಹೋಗುತ್ತಿದ್ದೇನೆ. ಶರ್ಟು ಎರಡುಪಟ್ಟು ದೊಡ್ಡದಾಗಿಯೇ ಹೊಲಿದು ಬಿಡು."

ಚಿಕಿತ್ಸೆಗೊಳ್ಳುತ್ತಿದ್ದ ಯುದ್ಧದಲ್ಲಿ ಗಾಯಗೊಂಡ ಸೈನಿಕರನ್ನೂ ಬಲಿತೆಗೆದುಕೊಂಡಿತು. ಇದರಿಂದಾಗಿ, ಜಿಜಿಗಾ ಸುತ್ತ ಹೆಚ್ಚಾದ ಸೈನ್ಯದ ಹಾಗೂ ಮದ್ದು ಗುಂಡುಗಳ ಬಲವನ್ನು, ಪೆಟ್ರೋವ್‌ನ ಚಾಣಾಕ್ಷ ನಿರೀಕ್ಷೆಯಂತೆ, ಸೋಮಾಲಿಗಳು ವೃದ್ಧಿಸತೊಡ ಗಿದರು. ಆ ಸಮಯದಲ್ಲಿ ಪೆಟ್ರೋವ್, ಅಹ್ಮರ್ ಬೆಟ್ಟ ಗುಡ್ಡಗಳ ಸುತ್ತಲ ರಹಸ್ಯ ತಾಣಗಳಲ್ಲಿ ಸೋಮಾಲಿಗಳನ್ನು ಸುತ್ತುವರೆವಂತೆ, ಇಥಿಯೋ ಪಿಯಾ ಹಾಗೂ ಕ್ಯೂಬಾದ ಸೈನ್ಯಗಳನ್ನು ಬೆಳೆ ಸುತ್ತಾ, ಚಲಿಸತೊಡಗಿದ. ರಶಿಯದಿಂದ ಹೇರಳ ವಾದ ಯುದ್ಧ ಸಾಮಗ್ರಿಗಳೂ, ಸಂಪರ್ಕಸಾಧನ ಗಳೂ ಎಡೆಬಿಡದೆ ಬರುತ್ತಿದ್ದವು. ಟಿ–೬೨ ಮತ್ತು ಪಿ.ಟಿ.–೭೬ ಟ್ಯಾಂಕುಗಳೂ, ಸುಮಾರು ಹದಿ ನೈದು ಟನ್ನುಗಳ ತೂಕವನ್ನು ಏಕಕಾಲದಲ್ಲಿ ಎತ್ತೊಯ್ಯುವಂತಹ ಎಂಐ–೬ ಹೆಲಿಕಾಪ್ಟರು ಗಳೂ ಬಂದಿದ್ದವು. ಎಂಐ–೬ ಹೆಲಿಕಾಪ್ಟರು ಗಳ ಸಹಾಯದಿಂದ ಹದಿನಾಲ್ಕು ಟನ್ನುಗಳ ತೂಕದ ಪಿಟಿ–೭೬ ಟ್ಯಾಂಕುಗಳನ್ನೂ, ಸೈನಿಕ ರನ್ನೂ, ಪೆಟ್ರೋಲ್ ಮತ್ತು ಮದ್ದು ಗುಂಡು ಗಳನ್ನೂ ಜಿಜಿಗಾದತ್ತ ಸಾಗಿಸಲಾಯಿತು.

ಅಖಾಡವನ್ನು ಎಲ್ಲ ರೀತಿಯಲ್ಲೂ ಸಜ್ಜು ಗೊಳಿಸಿಕೊಂಡು, ಕುರಿ ಮಂದೆ ಒಟ್ಟುಗೂಡಿ ಕೊಂಡಿದ್ದ ಸಂದೇಶ ಬಂದೊಡನೆಯೇ ಹುಲಿ ಅನಾಮತ್ತಾಗಿ ಎರಗಿಬಿದ್ದಿತು. ಕೇವಲ ಗಂಟೆ ಗಳಲ್ಲಿ ಎಲ್ಲವೂ ಮುಗಿದು ಹೋದಂತೆ ತೋರಿತು. ಸೋಮಾಲಿ ಸೈನ್ಯ ಸಂಪೂರ್ಣ ಹತಾಶವಾಯಿತು. ಈಗ ವಿಜಯ ಪತಾಕೆ ಹಾರಿದ್ದು ಸೋಮಾಲಿಗಳು ಗಳು ಕನಸಲ್ಲೂ ಎಣಿಸದಿದ್ದ ಕಡೆಯಿಂದ. ಮೊಗ ದಿಷು ಭಯಪೀಡಿತವಾಗಿ ವಿದೇಶಗಳಿಗೆ ಛೀಳಿ ಟ್ಟಿತು. ಮೇಲಾಗಿ ಮೆಂಗಿಸ್ತುರವರು ಮೊದ ಲೊಮ್ಮೆ, ಕ್ಷಣಾರ್ಧದಲ್ಲಿ ಹಾರ್ಗೀಸಾದಲ್ಲಿ ಕುಳಿತು ಬೆಳಗಿನ ಫಲಾಹಾರ ಮಾಡುವುದೇನೂ ತಮಗೆ ಕಷ್ಟವಿಲ್ಲವೆಂದೂ ಹೇಳಿಕೆ ಕೊಟ್ಟಿದ್ದರಂತೆ. ಅದು ನೆನಪಿಗೆ ಬಂದಾಕ್ಷಣ, ಒಗಾದನ್ ಇರಲಿ, ತಮ್ಮ ಉತ್ತರ ಪ್ರಾಂತ್ಯದ ಬಗ್ಗೆಯೇ ಸೋಮಾಲಿ ಗಳಿಗೆ ದಿಗಿಲಾಗತೊಡಗಿತು. ಮತ್ತೊಮ್ಮೆ ಅಮೇರಿಕ ಮತ್ತು ಸೋಮಾಲಿಗಳ ಹಿತಚಿಂತಕ ಅರಬ್ ದೇಶಗಳ ಒಕ್ಕೊರಲಿನ ಕರೆಗೆ, ರಶಿಯ ಮತ್ತು ಇಥಿಯೋಪಿಯಗಳು, ಅಂತಾರಾಷ್ಟ್ರೀಯ ಮೇರೆಯನ್ನು ದಾಟುವುದಿಲ್ಲವೆಂದೂ, ತಮ್ಮ ನ್ಯಾಯವಾದ ನೆಲವನ್ನು ತಾವು ಸಂಪೂರ್ಣ ತುಳಿಯುವುದಾಗಿಯೂ ತುತ್ತೂರಿ ಊದುತ್ತ ಲಿದ್ದರೂ ನಡೆಯುವುದು ನಡೆದು ಹೋಗು ತ್ತಲೇ ಇದ್ದಿತು.

ಕೊನೆಗೆ ವಿಧಿಯಿಲ್ಲದೆ, ಅಂತ್ಯಾಶ್ರಯವಾಗಿ ತಮ್ಮ ನಾಗರಿಕ ಸೋಮಾಲಿಗಳ ಮಹದಾಸೆಗೆ ಎದುರಾಗಿ, ಬರ್ರೆಯವರು ಕದನ ನಿಲುಗಡೆ ಯನ್ನೂ, ಅಳಿದುಳಿದ ತಮ್ಮ ಸೈನ್ಯದ ವಾಪಸಾತಿ ಯನ್ನೂ ೧೯೭೮ರ ಮಾರ್ಚಿನಲ್ಲಿ ಅಂತಾ ರಾಷ್ಟ್ರೀಯ ಬಾನುಲಿಗಳ ಮೂಲಕ ಅಧಿಕೃತ ಪಡಿಸಿ, ಅಸಹಾಯಕ ಪರಿಸ್ಥಿತಿಗೆ ಅನಿವಾರ್ಯ ತಿರುವಿತ್ತರು.

ಅಂತೂ ಒಂದು ಕೆಟ್ಟ ಪರ್ವ ಮುಗಿದು, ಹೋದಂತಹ ಉಪಶಮನದ ಉಸಿರನ್ನು ಕೆನ್ಯಾ, ಇಥಿಯೋಪಿಯಾ ಮತ್ತು ಸೋಮಾಲಿಯಾಗಳು ಒಟ್ಟಾಗಿ ಬಿಟ್ಟಂತಹ ವಾತಾವರಣ ಮೇಲು ನೋಟಕ್ಕಾದರೂ ತೋರುತ್ತಿರಬಹುದು. ಆದರೆ, ಇದರ ಪರಿಣಾಮ ಮೂರೂ ದೇಶ ಗಳಲ್ಲಿಯೂ ವಿಭಿನ್ನವಾಗಿದೆಯೆಂಬುದಂತೂ ಸತ್ಯ. ಇಥಿಯೋಪಿಯದಲ್ಲಿ ಮೆಂಗಿಸ್ತುರವರು ತಮ್ಮ ನವೋದಯ ಸ್ನೇಹಹಸ್ತದ ಫಲವಾಗಿ, ಭದ್ರ ವಾಗಿ ತಳವೂರಲೆತ್ನಿಸುತ್ತಲೂ, ಮತ್ತು ಅಗಾಧ ವಾದ ಸೈನಿಕ ಹಾಗೂ ತಾಂತ್ರಿಕ ವೃದ್ಧಿಯಲ್ಲೂ ತೊಡಗಿರುವಂತೆ ತೋರುತ್ತದೆ. ಕೆನ್ಯಾ ದೇಶಕ್ಕೆ ಒಗಾದನ್‌ನ ಕಳಕಳಿಯ ಸಂದೇಶವಂತೂ ಖಂಡಿತ ವಾಗಿ ತಟ್ಟಿದೆ. ಕೆನ್ಯಾ ಕಣ್ಣು ಹದ್ದಿನ ಕಣ್ಣಾಗಿ ಬದಲಾಗುತ್ತಿದೆ. ಕೆನ್ಯ ಜನರು, ಶೇಕಡಾ ತೊಂಭ ತ್ತೊಂಭತ್ತು ಭಾಗ ಯಾವ ಸೋಮಾಲಿಗೂ ವೀಸಾ ಕೊಡಲು ಖಡಾಖಂಡಿತ ನಿರಾಕರಣೆ ಯನ್ನು ತೋರಿಸುತ್ತಿದ್ದಾರೆ. ಆದರೂ, ಪರಸ್ಪರ ಬದಲಾಯಿಸಿಕೊಂಡಿರುವ ರಾಯಭಾರಿಗಳನ್ನು ಹೆಸರಿಗೆ ಮಾತ್ರ ಉಳಿಸಿಕೊಂಡಿದ್ದಾರೆ (ಇಥಿ ಯೋಪಿಯಾ ಸೋಮಾಲಿಗಳ ನಡುವೆ ಈ ನಂಟು ಒಗಾದನ್ ತಗಾದೆಯ ಸಮಯಕ್ಕೇ ಕಡಿದು ಹೋದದ್ದು ಇನ್ನೂ ಹಾಗೆಯೇ ಇದೆ). ಮೇಲಾಗಿ, ಕೆನ್ಯಾ–ಇಥಿಯೋಪಿಯಾಗಳ ಬಾಂಧವ್ಯದ ತಬ್ಬು

ಬಿಗಿಯಾಗುತ್ತಲೂ ನಡೆದಿದೆ. ಇತ್ತೀಚೆಗೆ ತಾನೇ ಅರಪ್ ಮೋಯ್‌ರವರು ಅಡಿಸ್ಸಿನವರೆಗೆ ಹೋಗಿ, ಮೆಂಗಿಸ್ತುರವರೊಡನೆ ಆತ್ಮೀಯ ಹಸ್ತಲಾಘವ ನಡೆಸಿ, ಹನ್ನೊಂದು ವರ್ಷಗಳ ಮತ್ತೊಂದು ಒಪ್ಪಂದಕ್ಕೆ ರುಜು ಮಾಡಿ ಗಂಟನ್ನು ಬಿಗಿಮಾಡಿ ಬಂದಿದ್ದಾರೆ. ಅಲ್ಲದೆ, ಅಮೇರಿಕ ದಿಂದ ವಾಗ್ದಾನದಂತೆ ಒಂದು ಡಜನ್ ಎಫ್–-೫ ಸಮರ ವಿಮಾನಗಳು ಕೆನ್ಯಾ ತಲುಪಿರುವ ಸಂದೇಶಗಳೂ ಇವೆ. ಆದ್ದರಿಂದ ಮುಂದೇನಾದರೂ ಒಗಾದನ್ ರಣರಂಗವಾಗಿ ಮತ್ತೆ ಪರಿವರ್ತನಗೊಂಡರೆ ಕೆನ್ಯಾ ಮತ್ತು ಇಥಿಯೋಪಿಯಾ ಒಂದು ಕಡೆ, ಸೋಮಾಲಿಯಾ ಮತ್ತೊಂದು ಕಡೆ ಆಗುವ ನಿರೀಕ್ಷೆಯಂತೂ ಖಂಡಿತ ಇದೆ.

ಸೋಮಾಲಿಯಾದಲ್ಲಿ, ಒಗಾದನ್ನಿನ ಅನಿರೀಕ್ಷಿತ ಸೋಲು, ಬರ್‍ರೆಯವರಿಗೆ ಆಂತರಿಕವಾಗಿಯೂ ಅಪಶಕುನವಾಗಿ ಉಳಿದು ಹೋಗಿದೆ. ತಮ್ಮ ಉಳಿವಿನ ಬಗ್ಗೆ ನಂಬಿಕೆ ಕಳೆದುಕೊಳ್ಳುತ್ತಿರುವ ಬರ್‍ರೆಯವರು, ವಿಪುಲವಾಗಿ ಪಾಳಿಗೆಯ ಮರೆಯಲ್ಲಿಯೇ ವೃದ್ಧಿಗೊಳ್ಳುತ್ತಿರು ಆಂತರಿಕ ಎದುರಾಳಿಗಳ ನಡುವೆ, ಕೇವಲ ಬಂದೂಕಿನ ಬಲದಲ್ಲಿ ಮಾತ್ರ, ನಿದ್ದೆಯನ್ನೂ ಮರೆತು ಬದುಕಲು, ಆಳಲು ಯತ್ನಿಸುತ್ತಿದ್ದಾರೆ. ಮೇಲಾಗಿ ಇತ್ತೀಚೆಗೊಮ್ಮೆ ತಮ್ಮ ಹೇಳಿಕೆಯೊಂದರಲ್ಲಿ ಒಂದೊಮ್ಮೆ ಹುಚ್ಚು ನಾಯಿಗಳನ್ನು ಹಿಡಿವಂತೆ ಹಿಡಿದು ಮಾಸ್ಕೋ ಕಡೆಗೆ ಹೊರಟ ಏರೋಫ್ಲೋಟ್ ವಿಮಾನಗಳಿಗೆ ತುಂಬಿ ರವಾನಿಸಿದ್ದ ರಶಿಯನ್ನರಿಗೆ, ಮತ್ತೊಮ್ಮೆ ತೆರೆದ ಬಾಹುಗಳನ್ನು ತೋರುವಂತಹ ಮಾತನ್ನಾಡಿದ್ದಾರೆ. ರಶಿಯನ್ನರು ಈ ಕರೆಯನ್ನು ಸ್ವೀಕರಿಸುತ್ತಾರೋ ಕಾದು ನೋಡಬೇಕಾಗಿದೆ. ರಶಿಯನ್ ಮುತ್ಸದ್ದಿಗಳು ಒಪ್ಪಲೂ ಬಹುದು. ಆದರೆ, ಹಾಗಾಗುವುದರಿಂದ ಕೆನ್ಯಾ, ಮತ್ತು ಈಗಾಗಲೇ ತಾವು ತಳವೂರಿರುವ ಇಥಿಯೋಪಿಯಗಳಿಗೆ, ಇನ್ನಷ್ಟು ಭಯವನ್ನೂ ತಂದೊಡ್ಡುತ್ತಾರೆ.

ಇನ್ನು ಒಗಾದನ್‌ನಲ್ಲಿ ಯುದ್ಧ ವಿರಾಮ ಅಧಿಕೃತವಾಗಿ ಪ್ರಕಟವಾದ ಮಾತ್ರಕ್ಕೆ ನಿಜವಾದ ವಿರಾಮವಾಗಿಲ್ಲ. ಸೋಮಾಲಿಗಳು ಗೆರಿಲ್ಲಾ ಕಾಳಗಕ್ಕೆ ತೊಡಗಿರುವುದೂ ಮಿಥ್ಯವಲ್ಲ ಮತ್ತು ಆಗಾಗ್ಗೆ ಅತ್ತ ಕಡೆಯಿಂದಲೂ ಪ್ರತೀಕಾರಕ ಬಾಂಬುಗಳೆಸೆತವೂ ನಿಂತಿಲ್ಲ.

ಒಟ್ಟಿನಲ್ಲಿ ಒಬ್ಬನೇ ಸೋಮಾಲಿ ಹಾಗೂ ಒಬ್ಬನೇ ಇಥಿಯೋಪಿಯನ್ನನು ಬದುಕಿರುವವರೆಗೂ, ಒಗಾದನ್ ಹಾಗೂ ಆಫ್ರಿಕ ಕೊಂಬಿನ ಶಾಂತಿ ಬರೀ ಬಾಯಿ ಮಾತು ಎಂಬುದಂತೂ, ಶಾಪವಾಗಿಯೂ, ಪಟ್ಟುಕಳೆಯಾಗಿಯೂ ಚರಿತ್ರೆಯನ್ನು ಸೇರಬೇಕಾಗುವುದು ನೂರಕ್ಕೆ ನೂರು ಸತ್ಯದಂತೆ ತೋರುತ್ತದೆ. ✡



"ಅಂದ್ಹಾಗೆ ನಿನ್ನೆ ನಾಟ್ಕಾ ನೋಡ್ದೆಲ್ಲ- ನನಗೆ ಪೂರ್ತಿ ಕತೆ ಬೇಡ, ಮೊದಲು-ಮಧ್ಯಕ್ಕೆ-ಕೊನೆಗೆ ಏನಾಗತ್ತೆ ಹೇಳಿಬಿಡು."

"ಮೊದಲು ಪರದೆ ತೆರೆಯುತ್ತೆ, ಮಧ್ಯಕ್ಕೆ ಮಧ್ಯಂತರ. ಕೊನೆಗೆ..."

"ಗೊತ್ತಾಯ್ತು ಬಿಡು- ಪರದೆ ಇಳಿಯುತ್ತೆ."

"ಅಲ್ಲ, 'ಹೋಗದಿರೀ ಬಂಧುಗಳೇ' ರೆಕಾರ್ಡ್ ಹಕ್ತತ್ತೆ. ಆಮೇಲ್ ಪರದೆ ಬೀಳತ್ತೆ."

Printed & published by P. S. Bhat for the Jayakarnataka News Printers Ltd., at the Samyukta Karnataka Press, Koppikar Road, Hubli-580 020 Rep: Bombay: V. Satyamurthy Phone: 522412; Calcutta : H. Muzamdar 46-4233: Madras: A. K. Subramanian Phone: 842201; New Delhi. P. R. Chopra Phone: 224130.

KASTURI PRICE : 1-25 Regd. No. KRNG 43
*Registered with the Registrar of Newspapers for India under No. 3533/57*

# ವಿಜಯ ವಿಖ್ಯಾತ





## ಕ್ವಾಲಿಟಿ ಗ್ಲೂಕೋಸ್
## ಚೈತನ್ಯದ ಸವಿ ಸುಮಧುರ ಮಾರ್ಗ

ಕ್ವಾಲಿಟಿ ಗ್ಲೂಕೋಸ್ ಬಿಸ್ಕತ್ತುಗಳನ್ನು ಅತ್ಯಾಧುನಿಕ ವಿಧಾನವನ್ನು ಬಳಸಿ, ವೈಜ್ಞಾನಿಕವಾಗಿ ತಯಾರಿಸಲಾಗುತ್ತಿದೆ. ಉತ್ತಮವಾದ ಮಿಶ್ರಣವನ್ನು ಮತ್ತು ಶ್ರೇಷ್ಠವಾದ ತಾಂತ್ರಿಕ ಜ್ಞಾನವನ್ನು ಬಳಸಲಾಗುತ್ತಿದೆ.

**ಕ್ವಾಲಿಟೀಸ್ ಎಂದರೆ ಉತ್ಕೃಷ್ಟ ಬಿಸ್ಕತ್ತು**




ಕ್ವಾಲಿಟಿ ಫುಡ್ ಪ್ರಾಡಕ್ಟ್ಸ್




**ಗ್ಲೂಕೋಸ್ ಬಿಸ್ಕತ್ತುಗಳಲ್ಲಿ ಅಪರಂಜಿ**